# ಶ್ರೀವಿಜಯದಾಸರ ಸುಳಾದಿಗಳು

ಪ್ರಮೇಯಭರಿತ ಸಾಧನ ಕ್ರಮಗಳು

ಸಂಗ್ರಹಕಾರರು :
◆ ಗುರುಮಧ್ವರಾವ್ ಉಪ್ಪಲಿ

-: ಪ್ರಕಾಶನ :-
ಶ್ರೀಗುರುವಿಜಯದಾಸಾಶ್ರಮ
ರಾಯಚೂರು

**Sree Vijayadasara Suladigalu** - *Collection of Suladi's of* ***SRI VIJAYADASARU*** *by-* ***Sri Gurumadhwarao Uppali*** *& Published by* ***-Sri Guruvijayadasashrama****, Raichur.*



First Print : **2010**

Pages : **xvi + 424 = 440**

No. Copies : **1,000**

Price : **Rs. 80/-**

ಮುಖಪುಟ : 1. ಶ್ರೀವಿಜಯದಾಸರು
2. ಗುರುವಿಜಯ ದಾಸಾಶ್ರಮದಲ್ಲಿ ಪೂಜೆಗೊಳ್ಳುತ್ತಲಿರುವ ಶ್ರೀಗುರುಮಧ್ವರಾವ್ ಉಪ್ಪಲಿ ಕರಾರ್ಚಿತ ಶ್ರೀಶೇಷದಾಸರ ಉತ್ಸವ ಮೂರ್ತಿ

Printed At : **Sathyasri Printers Pvt. Ltd.,**
*No. 16/1, 2nd Main, 3rd Cross, Kasturiba Nagar, Mysore Road, Bangalore-560 026*
*Ph : 080- 26748811; Mob : 9342864761*

॥ श्री दिग्विजयरामो विजयते ॥

श्रीमज्जगद्गुरु श्रीमध्वाचार्य मूलमहासंस्थानम्

# उ त्त रा दि म ठः


5th Cross, Shankarapuram, Basavanagudi
Bangalore-560 004; Ph : 080-2242 6203


Camp : Bangalore　　　　Date : 10/04/2010

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ
ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ

## ಅನುಗ್ರಹ ಸಂದೇಶ

ದಾಸವರೇಣ್ಯರಾದ, ಮಹಾಜ್ಞಾನಿಗಳಾದ ಶ್ರೀವಿಜಯದಾಸರು ದಾಸಸಾಹಿತ್ಯಕ್ಕೆ ಹೊಸ ತಿರುವನ್ನು ನೀಡಿದ ಮಹಾನುಭಾವರು. ಗಹನವಾದ ಶಾಸ್ತ್ರೀಯ ಪ್ರಮೇಯಗಳನ್ನು ಕನ್ನಡಕ್ಕೆ ತಂದ ಕೀತಿ ಇವರದು. ಇವರ ಕೃತಿಗಳು ಭಗವಂತನೆಡೆಗೆ ನಮ್ಮ ಮನಸ್ಸನ್ನು ಹರಿಸಿ, ನಮ್ಮ ಮನದಲ್ಲಿ ಭಗವಂತನ ಮಹಿಮಾಜ್ಞಾನದ ಬೀಜವನ್ನು ಬಿತ್ತಿ ಪರಮಾತ್ಮನ ಪ್ರೇಮದ ನೀರನ್ನು ಸುರಿದು ಭಗವದ್ಭಕ್ತಿಯ ಅಂಕುರವನ್ನು ಮೂಡಿಸುತ್ತವೆ. ಇವರ ಸುಳಾದಿಗಳು ತತ್ತ್ವಗಳ ಆಗರ. ಉಪನಿಷತ್ತು ಹಾಗೂ ಸರ್ವಮೂಲಗಳ ನೂರಾರು ಸುಂದರ ಪ್ರಮೇಯ ರತ್ನಗಳನ್ನು ಹೊತ್ತ ಸಾಗರ. ಅಡಿಗಡಿಗೆ ಭಗವಂತನ ಪಾರಮ್ಯವನ್ನು, ಜೀವನ ಪಾರತಂತ್ರ್ಯವನ್ನು ಸಾರಿ ಹೇಳುತ್ತಾ ಸಾಧನೆ ಹಾಗೂ ಅನುಸಂಧಾನಗಳ ಬಗ್ಗೆ ಬೆಳಕು ಚೆಲ್ಲುವ ದಿವಾಕರ. ಸಂಸಾರದ ತಾಪದಿಂದ ಬಳಲಿದ ಸಾಧಕರಿಗೆ ಇದು ಸುಧಾಕರ. ಇಂತಹ ಅದ್ಭುತವಾದ ವಾಙ್ಮಯವನ್ನು ಜಗತ್ತಿಗೆ ನೀಡಿ ದಾಸರು

ಮಹದುಪಕಾರ ಮಾಡಿದ್ದಾರೆ. ಇದನ್ನು ಸರಿಯಾಗಿ ತಿಳಿದು ಅಧ್ಯಯನ ಮಾಡಬೇಕು.

ಇಂತಹ ಸುಳಾದಿಗಳ ಸಂಗ್ರಹವನ್ನು ನಮ್ಮ ಆತ್ಮೀಯ ಶಿಷ್ಯರಾದ ಶ್ರೀಯುತ ಉಪ್ಪಲಿ ಮಧ್ವರಾಯರಿಂದ ಭಗವಂತ ಮಾಡಿಸಿದ್ದಾನೆ. ಮಧ್ವರಾಯರು ದಾಸಸಾಹಿತ್ಯದ ಅಧ್ಯಯನ ಹಾಗೂ ಪ್ರಚಾರಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟವರು. ಈ ಇಳಿವಯಸ್ಸಿನಲ್ಲಿಯೂ ವಿಶೇಷ ಪರಿಶ್ರಮ ವಹಿಸಿ ಈ ಕೃತಿಯ ಸಂಕಲನವನ್ನು ಮಾಡಿ ಪ್ರಕಾಶನ ಮಾಡುತ್ತಿರುವುದು ತುಂಬಾ ಪ್ರಶಂಸನೀಯವಾದುದು. ಅವರಿಗೆ ಭಗವಂತ **"ಭಗವನ್ನಿಷ್ಠೆಯಲ್ಲಿ ಭಾಗ್ಯವಂತನಾಗು । ಸಿಗದಲೇ ಸಂಚರಿಸು ಕಾಮಾದಿ ಬಲೆಯಲಿ । ಅಗಲಿದಿರು ನೀ ಉತ್ತಮ ಗುಣದಿಂದ । ಹಗಲಿರುಳು ಹರಿಯ ವ್ಯಾಪ್ತಿ ಬಗೆಯ ನೆನಸು । ಮಿಗಿಲಾಗಿ ವರ್ಣೋಚಿತ ಕರ್ಮವ ಚಿಂತಿಸು"** ಎಂದು ಅನುಗ್ರಹಿಸಿ ಇನ್ನೂ ಹೆಚ್ಚಿನ ಶ್ರದ್ಧೆ, ಸಾಮರ್ಥ್ಯ, ಉತ್ಸಾಹಗಳನ್ನು ನೀಡಿ ಅವರಿಂದ ಇನ್ನೂ ವಿಶೇಷವಾದ ವಾಙ್ಮಯ ಸೇವೆಯನ್ನು ಪಡೆಯಲಿ ಎಂಬುದಾಗಿ ನಮ್ಮ ಉಪಾಸ್ಯಮೂರ್ತಿಯಾದ ಶ್ರೀಮೂಲರಾಮದಿಗ್ವಿಜಯರಾಮ ವೇದವ್ಯಾಸ ದೇವರಲ್ಲಿ ಪ್ರಾರ್ಥಿಸುತ್ತೇವೆ. ಶ್ರೀ ಶೇಷದಾಸರ ೧೩೩ನೇ ಆರಾಧನಾ ಸಂದರ್ಭದಲ್ಲಿ ಈ ಕೃತಿ ಹೊರಬರುತ್ತಿರುವುದು ಬಹಳ ಸಂತೋಷದ ವಿಷಯ. ಈ ಕೃತಿಯ ಲಾಭವನ್ನು ಎಲ್ಲ ಸಜ್ಜನರೂ ಪಡೆಯುವಂತಾಗಲಿ.

ಇತಿ ಅನೇಕ ನಾರಾಯಣ ಸ್ಮರಣೆಗಳೊಂದಿಗೆ

ಶ್ರೀಸತ್ಯಾತ್ಮತೀರ್ಥ

**ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು**
ಶ್ರೀ ಉತ್ತರಾದಿಮಠ

# ಸಂಗ್ರಹಕಾರರ ಮಾತು

ಸುಳಾದಿ ದಾಸರೆಂದೇ ಪ್ರಖ್ಯಾತರಾದ ಭೃಗ್ವಂಶ ಸಂಭೂತರಾದ ಶ್ರೀ ವಿಜಯರಾಯರಿಂದ ರಚಿತವಾದ ಸಾಧನ ಹಾಗೂ ಪ್ರಮೇಯ ಭಾಗ ಸುಳಾದಿಗಳನ್ನು ಸಂಗ್ರಹಿಸಿ ಮುಮುಕ್ಷುಗಳ ಮುಂದಿಡಲು ಆನಂದವಾಗತ್ತದೆ. ಪ್ರಪ್ರಥಮವಾಗಿ ಈ ಸಂದರ್ಭದಲ್ಲಿ ದಾಸ ಸಾಹಿತ್ಯ ಸೇವೆಯನ್ನು ವಿಶೇಷವಾಗಿ ಮಾಡಿದಂತಹ ಪ್ರಾತಃಸ್ಮರಣೀಯರಾದ ಶ್ರೀ ಗೋರೆಬಾಳು ಹನುಮಂತರಾಯರನ್ನು ಸ್ಮರಿಸುವುದು ನನ್ನ ಆದ್ಯ ಕರ್ತವ್ಯ. ದಾಸ ಸಾಹಿತ್ಯ ಇಷ್ಟೊಂದು ಅಗಾಧವಾದ ಸಾಗರವೆಂದು ತೋರಿಸಿಕೊಟ್ಟವರೇ ಅವರು. ಪ್ರತಿ ಮನೆ ಮನೆಗೂ ಹೋಗಿ ಕಾಡಿ-ಬೇಡಿ ಅನೇಕ ಸುಳಾದಿ ದಾಸರಾಯರ ಕೃತಿಗಳನ್ನು ಸಂಗ್ರಹಿಸಿದ್ದಲ್ಲದೆ ಅವುಗಳನ್ನು ಅಚ್ಚು ಹಾಕಿಸಿ ಸಾಧಕರಿಗೆ ಸಿಗುವಂತೆ ವ್ಯವಸ್ಥೆ ಮಾಡಿದಂತಹ ಮಹನೀಯರು. ಇಂದು ದಾಸ ಸಾಹಿತ್ಯ ಇಷ್ಟು ಪ್ರಖ್ಯಾತಿ ಪಡೆಯಲು ಅವರೇ ಕಾರಣರು ಎಂದರೆ ತಪ್ಪಾಗಲಾರದು. ಈ ಹಿಂದೆ ಗುರುವಿಜಯದಾಸಾಶ್ರಮದ ವತಿಯಿಂದ ವಿಜಯರಾಯರ ಸೃಷ್ಠಿ ಪ್ರಕರಣ, ತಾರತಮ್ಯ,

ಪ್ರಾರ್ಥನಾ, ಕ್ಷೇತ್ರಮಹಿಮಾ, ಉಪಾಸನಾ ಇತ್ಯಾದಿ ಸುಳಾದಿಗಳನ್ನು ಮುದ್ರಣ ಮಾಡಿಸಲಾಗಿದ್ದು, ಈಗ ಸಾಧನ ಹಾಗೂ ಪ್ರಮೇಯ ಭಾಗ ಸುಳಾದಿಗಳನ್ನು ಅಚ್ಚು ಹಾಕಿಸಿ ಚಿಪ್ಪಗಿರಿಯಲ್ಲಿ ನಡೆಯುವ ಶ್ರೀಶೇಷದಾಸರ ೧೨೫ನೇ ಆರಾಧನೆ (ಮೇ ೨೦-೨೨, ೨೦೧೦) ಸಮಯದಲ್ಲಿ ಬಿಡುಗಡೆ ಮಾಡಲಾಗುತ್ತಿದೆ. ಈ ಹೊತ್ತಿಗೆಗೆ ಪರಮಪೂಜ್ಯರು, ದ್ವೈತ ಸಿದ್ಧಾಂತದ ಪ್ರತಿಪಾದನೆಯಲ್ಲಿ ಮುಂಚೂಣಿಯಲ್ಲಿರುವ, ತಮ್ಮ ಅಸ್ಖಲಿತವಾಣಿ ಹಾಗೂ ಪಾಂಡಿತ್ಯದಿಂದ ಜಿಜ್ಞಾಸುಗಳು, ಪಂಡಿತರು ಹಾಗೂ ಪಾಮರರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತಿರುವ ಶ್ರೀಉತ್ತರಾಧಿಮಠಾಧೀಶರಾದ ಶ್ರೀ ಸತ್ಯಪ್ರಮೋದ ತೀರ್ಥರ ವರಕುಮಾರಕರಾದ ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು ಆಶೀರ್ವಚನವನ್ನಿತ್ತು ಹರಸಿದ್ದಾರೆ. ಅವರಿಗೆ ಅನಂತಾನಂತ ಭಕ್ತಿಪೂರ್ವಕ ದಂಡ ಪ್ರಣಾಮಗಳು. ಈ ಗ್ರಂಥದ ಪ್ರಕಾಶನದಲ್ಲಿ ವಿಶೇಷ ಪರಿಶ್ರಮ ಮಾಡಿದ ಎಲ್ಲರಿಗೂ, ವಿಶೇಷವಾಗಿ ಶ್ರೀ ಕೌಲಗಿ ರಾಘಣ್ಣ, ಹುಬ್ಬಳ್ಳಿ ಇವರಿಗೆ, ಸುಂದರವಾಗಿ ಮುದ್ರಣ ಮಾಡಿಕೊಟ್ಟ ಸತ್ಯಶ್ರೀ ಪ್ರಿಂಟರ್ಸ್, ಬೆಂಗಳೂರು ಇವರಿಗೆ ಭಗವಂತ ಆಯುರಾರೋಗ್ಯ ಐಶ್ವರ್ಯ ಕರುಣಿಸಲೆಂದು ಪ್ರಾರ್ಥನೆ.

ಅಧಿಕ ವೈಶಾಖ ಶುದ್ಧ ಅಷ್ಟಮಿ<br>೨೨.೦೪.೨೦೧೦

ದಾಸರ ಪಾದಧೂಳಿ<br>**ಗುರುಮಧ್ವರಾವ್ ಉಪ್ಪಲಿ**

## ಪರಿವಿಡಿ

## ಗುರುಮಂತ್ರ

**ಪಾಪ ಪುರುಷ ವಿಸರ್ಜನಾದಿಕ್ರಮವು**

**ರಾಗ-ಸಾವೇರಿ-ಧೃವತಾಳ**

ಬಲವಾರು ಎನಗೆ ಪ್ರಬಲವಾಯಿತು ಕಲಿ। ಬಲು ಹೆಚ್ಚಿ ಬಿಡದೆ ದುಂಬಲ ಬಿದ್ದಿದೆ। ಬಲದಲ್ಲಿ ಉಳ್ಳ (ಇದ್ದಸುರ) ಸುರರು ಬಲರು ನಿರ್ಬಲರಾಗಿ। ಬಲಗುಂದಿದಂತೆ ತೊಲಗಿನಿಂದಾರೆ। ಬಲವಂತ ನೀನು ಅಬಲೆ ಬಾಲಕರಿಗೆ ಬೆಂ। ಬಲವಾಗಿ ಸಾಕಿದ ಸುಬಲನೆಂದು। ಬಲಗೊಂಡು ನಿನ್ನ ಹಂಬಲವ ಮಾಡಿದೆ ನಂ। ಬಲು ಬಡವರಿಗೆ ಬಾಂಧವನೆ ದೇವ ಬಲು ದಯದಿಂದೆಡಬಲದಲ್ಲಿ ಕಾಪಾಡು। ಬಲದೇವನನುಜಾ ಬಲರಾತಿ ದಾತ। ಬಲಿ ಭಂಜನೇಶ್ವರ ವಿಜಯ ವಿಠ್ಠಲ। ಬಲು ದೀನ ನಾನು ತೊಂಬಲಿಗೆ ಬಪ್ಪಂತಿರಲಿ ॥೧॥

**ಮಟ್ಟತಾಳ**

ಕರಿಯ ರೂಪದ ಪಾಪಿ ಅರುಣ ನಯನ ಐ। ದರಿಯಿಂದ ಉದುಭವಿಸಿ ಪರಿಪರಿಯ ಉಪ। ದುರಿತಾಂಗ ರೋಮ ಕರವಾಳ ಹಲಿಗೆ। ಕರದಲ್ಲಿ ಪಿಡಿದು ಶಿರಕೆಳಗಾಗಿ ಈ। ಪುರದೊಳು ಎಡದಲ್ಲಿ ಪರಿಶೋಭಿಸುತ್ತಿಪ್ಪ। ಕರಣಕೆ ಭೀತಿಯನು ಸುರಿದು ಕೆಂಗಡಿಸುವ। ಸುರರಿಪು ರಿಪುನಾಮಾ ವಿಜಯ ವಿಠ್ಠಲ ನಿನ್ನ। ಧೊರೆತನದ ಭೀತಿ ಅರಿಯದ ದುರುಳನು ॥೨॥

## ರೂಪಕ ತಾಳ

ಮೂರು ಹುರಿಯಾನಿಟ್ಟ ಪಾಶದಲ್ಲಿ ಕಲಿಯಾ। ಆರು ಕೋಣಿಗೆ ಶಳ ತಂದು ನಿಲ್ಲಿಸಿ। ಭೋರನೆ ಬೀಸುವ ಸಮೀರದಲ್ಲಿ ಅವನ। ಶರೀರ ಶೋಷಿಸಿ ಮೇಲಕ್ಕೆ ಎಳತಂದು। ಕ್ರೂರಪುರುಷನಾಕಾರವ ನೇಗಲಿ। ಧಾರನಾಕೃತಿಯಿಂದದಹಿಸಿ ಕಳೆಯೊ। ವಾರಣನಾಮ ಸಿರಿವಿಜಯ ವಿಠ್ಠಲ ಸುಧಾ। ಧಾರಿಯಾಮ್ಯಾಲಿಂದ ಗರದು ಶುದ್ಧನ ಮಾಡು ॥೩॥

## ಝುಂಪಿ ತಾಳ

ಪತಿಯ ಮಗ್ಗಲವೊಳಗೆ ಪತಿವ್ರತೆ ಕುಳತಿರಲು। ಪತಿತನೊಬ್ಬನು ಬಂದು ಶರಗ ನೆಳಿಯೆ। ಮತಿವಂತಳಿಗೆಷ್ಟು ಖತಿಯಾಗುವದದಕೆ। ಶತಪಾಲು ಅಧಿಕವಾಗಿದೆ ದಾತಾರ। ಪತಿಗಳೈವರು ಇರಲು ಹಿತವಂತನಾಗಿ ದ್ರೌಪದಿಯ ಕಾಯಿದ್ಯೆಯ್ಯ ಕಾರುಣ್ಯಸಿಂಧು। ಶತಮೂರುತಿನಾಮ ವಿಜಯ ವಿಠ್ಠಲ ನೀನೆ। ಪತಿಯಾದ ಬಳಿಕೆನ್ನ ಪತಿತಗೊಪ್ಪಿಸುವರೆ ॥೪॥

## ತ್ರಿವಿಡಿ ತಾಳ

ಸ್ವಸ್ತಿ ಶ್ರೀಮತು ಎಂದು ನಿನಗೆ ನಾಚಿಕೆ ಸ। ಮಸ್ತಲೋಕದ ಒಡತಿ ಶ್ರೀ ವಿರಂಚಿ ಮಗ। ಮಸ್ತಕದಲ್ಲಿ ನಿನ್ನ ಪಾದೋದಕವಿಟ್ಟ। ಹಸ್ತಿ ಚರ್ಮಾಂಬರ ಸುರರಾದ್ಯರು ನಿನಗೆ। ಹಸ್ತಿಯಂತೆ ಭಕ್ತರಿರಲಿಕ್ಕೆನೊಣದಿಂದ। ಆಸ್ತಿಯಾಗುವದೇನು ಎಂದೆಂಬೆಯಾ। ವಿಸ್ತರಿಸುವೆ ಸ್ವಸ್ತಿ ವಿಜಯ ವಿಠ್ಠಲ ದೇವ। ಹಸ್ತವ ಮುಗಿದು ವಿಸ್ತರ ಭಿನ್ನಹವು ॥೫॥

## ಅಟ್ಟ ತಾಳ

ಸಾಧು ಭಾಗ್ಯನು ಸಮಾರಾಧನೆ ಮಾಡಲು। ಆದರದಿಂದ ಸಹೋದರ ಬಾಂಧವ। ಪೋದವರನೆ ಕಾಯಾದಿಗಳು ಬಲು। ಮಾಧುರ್ಯದಲಿ ಪಂಙ್ತಿ ಸಾಧಿಸಿ ಕುಳಿತಿರೆ। ಮಾಧ (ಮಧು) ಕಾರದವ

ಪೋದಕ್ಷಣದಲ್ಲಿ। ಮಾಧಕಾರದನ್ನ ಆದರಿಸಿ ಕೂಡಿಸಿ। ಸಾಧುಗಳುಣಿಸುವ ಗಾದಿಯಂತೆ ಎನಗೆ। ನೀದಯವನು ಮಾಡಿ ಬಾಧಿಪ ಪಾಪಿಯ ಬಾಧಿಯ ಪರಿಹರಿಸು। ಆದಿತ್ಯ ವಿಜಯವಿಠ್ಠಲ ನಿನ್ನ ಪ್ರಸ್ತದ। ಮಾಧಕಾರದವನೆಂದು ಅಭಯಗಿರವನಿಯೋ ॥೬॥

**ಆದಿ ತಾಳ**

ಕೊಟ್ಟರೆ ಒಳ್ಳೇದು ಸುಖ ಬಿಟ್ಟು ನಿನ್ನ ನೆನವೆ ಮನ। ಮುಟ್ಟಿಯಿಲ್ಲದಿರೆ ಮುಂದೆ ನೋಡು ಒಂದು ಹೆಜ್ಜೆ। ಧಿಟ್ಟ ಗುರುವಿನ ಗೆರೆ ಇಟ್ಟು ಬಿಡುವೆ ದಾಟದಂತೆ। ಕೆಟ್ಟವಗೆ (ಅಟ್ಟಿದವಗೆ) ಉಂಟು ಮೂರು ಬಟ್ಟೆಯಿಲ್ಲದೆ ಕಡಿಮೆಯಿಲ್ಲ। ಇಟ್ಟ ತೊಟ್ಟ ಹೊಂದಿಕೆ ವಸ್ತ ಪೆಟ್ಟಿಗೆಯೊಳಗಿಟ್ಟರೆನ್ನ। ಮೆಟ್ಟುವ ಪಾಪೋಸುದೂರ ಬಿಟ್ಟು ಬಿಡುವರೆ ರಂಗ। ಸೃಷ್ಟ ಅಕ್ಷರ ವಿಜಯು ವಿಠ್ಠಲ ಭಕ್ತರ ಪ್ರೀಯು। ಮೊಟ್ಟ ಮೊದಲಿಗಿಂದು ನಿನಗೆ। ಕೊಟ್ಟ ಕೊನೆತನಕ ಬಿಡದು ॥೭॥

**ಜತೆ**

ಸಂತತ ಕ್ರೂರನ್ನ ಕೊಂದು ನಿನ್ನ ನಾಮ ।
ಅಂತೆ ಕಾಲಕೆ ನೀಯೋ ಶಾಂತ ವಿಜಯ ವಿಠ್ಠಲ ॥೮॥



## ಸುಳಾದಿ-೨

**ಆಸನ ಪ್ರಾಣಾಯಾಮಾದಿ ಸಾಧನ**

**ರಾಗ-ಸಾರಂಗ-ಧ್ರುವತಾಳ**

ಪ್ರಣವ ಪೂರ್ವಕದಿಂದ ಆಸನವಿಟ್ಟು ಮೂರರೊಳೊಂ। ದನೆ ತಿಳಿದು ವಾಯುಧಾರಣೆ ಮಾಡು ವಿವೇಕನಾಗಿ। ಬಿನಗು ಇಂದ್ರಿಯಗಳು

ಮನದಲ್ಲಿ ಕೂಡಿಟ್ಟು। ಆನುನಯದಿಂದ ಸಾಧನಕೆ ಮಾರ್ಗವ ಬಯಸೊ।
ಘನಿ ಭೂತವಾದ ಭಕುತಿಯನು ಸಂಪಾದಿಸಿ ನಿತ್ಯ। ತನುವೆ ನಿರ್ಮಲನಾಗಿ
ಜನ ರಹಿತ ಸ್ಥಳದಲ್ಲಿ। ಅನುದಿನ ದುಷ್ಟ ಯೋಚನೆಗಳ ತೊರೆದು।
ಚಿನುಮಯನಾಗಿಪ್ಪ ವಿಜಯ ವಿಠ್ಠಲನ್ನ। ಮನದಣಿಯ
ನೀಕ್ಷಿಸುವಾಲೋಚನಿಯ ಮಾಡು ಬಿಡದೆ ॥೧॥

## ಮಟ್ಟ ತಾಳ

ಹಿರಿಯ ನಾಡಿಯಿಂದ ಮರುತನ ಮೆಲ್ಲನೆ। ಶಿರಸ ಪರಿಯಂತರ
ತರಲು ಪಾಯವನ್ನು। ಅರಿದು ಎರಡು ಎಂಟು ಪರಿಮಿತವಾದ ಮಾ।
ತುರ ತನಕ ರೇಚಕ ಆತರುವಾಯದಲಿ ಮೂವ। ತ್ತೆರಡು ಮಾತುರತನಕ
ವರಪೂರಕ ತಿಳಿದು। ಅರವತ್ತುನಾಲಕು ಮೆರೆವ ಮಾತ್ರಕದನಿತು। ಇರುತಿಪ್ಪ
ಕುಂಭಕ ಎರಡು ಅದರಅರ್ಧ। ಪರಿಯಾಯವ ನೋಡೀ ಪರಿಯಲಿ
ಸಾಧಿಸುತ್ತ। ನಿರುತರ ಬಿಡದಲೆ ವರ ಸಮಾಧಿಯಲ್ಲಿ। ಕರಣ ಶುದ್ಧನಾಗೀ
ಪರಿಚಿಂತಿಸಬೇಕು। ಪರಮಮೂರ್ತಿ ಧ್ಯಾನ ವಿಜಯ ವಿಠ್ಠಲ ಹರಿಯ।
ಕುರುಹು ನಿಕ್ಷಿಸಿ ಪತಿ ಕರಿಸಿ ಸಜ್ಜನಸಂಗ ॥೨॥

## ತ್ರಿವಿಡಿ ತಾಳ

ಇದಕಿಂತ ಮೊದಲಿಗೆ ತುರಿಯ ನಾಮಕನ ಶ್ರೀ। ಪದದಲ್ಲಿ
ವನಧಿಯ ಸತಿಯನ್ನು ನೆನೆದು। ಒದಗಿ ಹನ್ನೊಂದನೆ ದ್ವಾರದಲ್ಲಿ ಇಳಿಸಿ।
ಹೃದಯ ದಾಕಾಶಕ್ಕೆ ಕೊಂಡು ಒಯ್ದು। ಮುದದಿಂದ ಮಂಗಳ ಸ್ನಾನವನ್ನೆ
ಗೈದು। ಉದರದೊಳಗಿದ್ದ ಕಾಮಾದಿಗಳ ಕಳದು। ಗುದ ಭಾಗ ಪಿಡಿದು
ಶಿರದಮೂಲ ಪರಿಯಂತ। ತುದಿ ಮೊದಲು ಒಂದೇ ಸಮಾನವಾಗಿಪ್ಪ।
ಸದುಮಲ ಪ್ರಧಾನ ನಾಡಿಯ ಮಧ್ಯದಲಿ। ಪದುಮರಾಗ ಮಯವಾದ
ಎಂಟು ದಳದಿ। ಅಧೋ ಮೊಗವಾಗಿ ಇರುತಿಪ್ಪ ಪದುಮಾನೆತ್ತಿ। ಉದಯಾ
ಭಾಸ್ಕರನೆಂಬೋ ಜ್ಞಾನದಿಂದ। ಚದುರ ಮನಸಿನಿಂದ ವಿಕಸಿತ

ಮಾಡೋದು। ಇದೆ ಬಿಂಬಾ ಮೂರುತಿ ಇಪ್ಪಸ್ಥಾನ। ಸದಾಚಾರನಾಗಿ ಶ್ರೀ ವಿಜಯ ವಿಠಲನ್ನ। ಅದು ಭೂತ ಅಣುರೂಪ ಧ್ಯಾನ ಪಡಿಯಬೇಕು॥೩॥

### ಅಟ್ಟ ತಾಳ

ಅರೆಗಣ್ಣು ಮಾಡಿ ಪಲ್ಲುಗಳು ಕೂಡಿಸದಲೆ। ಕೊರಳು ಬಾಗದೆ ಕದಲದಂತೆ ಕುಳಿತು। ಕರಗಳು ತೊಡಿಯ ಮೇಲಿಟ್ಟು ತೀವ್ರದಿಂದ। ಬೆರಳುಗಳು ಸ್ವಲ್ಪ ಮಾತ್ರ ತಗ್ಗಿಸಿ। ನಿರುಪದ್ರವಾಗಿದ್ದ ಭೂಮಿಯನ್ನು ಸೇರಿ। ಸರಿಸದಲ್ಲಿ ತನ್ನ ಮೂರ್ತಿ ಎದುರಿಲಿಟ್ಟು। ಮರಳೆ ನಾಸಿಕ ಕೊನೆಯಲ್ಲಿ ದೃಷ್ಟಿ ಇಟ್ಟು। ಪರಬೊಮ್ಮನಾದ ಶ್ರೀ ವಿಜಯ ವಿಠಲನ್ನ। ಚರಣ ಮೊದಲು ಮಾಡಿ ಸ್ಮರಿಸು ನಿನ್ನೊಳಗೆ ॥೪॥

### ಆದಿ ತಾಳ

ಮಧ್ಯ ಮಧ್ಯದಲ್ಲಿ ಮನ ಎದ್ದು ಪೋಗಲಾಗಿ। ಅಧೈರ್ಯವಿಲ್ಲದೆಯಿದ್ದು ವಿನಯದಿಂದಲಿ। ತಿದ್ದಿ ಮನಮೆಲ್ಲನೆ ಮೊದ್ದಿಸಿಕೊಂಡು ದುರಾಸಿಯ ಗೆದ್ದು। ಸ್ವಧರ್ಮ ಬಿಡದೆ ಸಿದ್ಧನಾಗೋ ಧ್ಯಾನದಲ್ಲಿ। ಶುದ್ಧ ಮೂರುತಿ ನಮ್ಮ ವಿಜಯ ವಿಠ್ಠಲರೇಯಪೊಳದು। ಉದ್ಧರಿಸುವ ತನ್ನ ಚಿದ್ದ ರೂಪವ ತೋರಿಕೊಳುತ ॥೫॥

### ಜತೆ

ಬಹಿರ ಶೂನ್ಯವಾಗಿ ಚರಿಸು ಅಂತರದಲ್ಲಿ ।
ಮಹದೈವ ವಿಜಯ ವಿಠಲನ್ನ ಪಾದವೆ ಕಾಣು ॥೬॥



# ಸುಳಾದಿ-೩

ತಾರ ಓಂಕಾರ, ವ್ಯಾಹೃತಿ ಅಷ್ಟಾಕ್ಷರಾದಿ ಮಂತ್ರಗಳು
ಮಂತ್ರ ಮಾಡುವ ಕ್ರಮ ನ್ಯಾಸವಿಚಾರ

## ರಾಗ-ರೇಗುಪ್ತಿ ಧ್ರುವತಾಳ

ತಾರ ಮಂತ್ರವೆ ಜಪಿಸು ತವಕದಿಂದಲಿ ಭವ। ತಾರವಾಗುವದು ಲಾಲಿಸು ಚನ್ನಾಗಿ। ಈರೆರೆಡು ಶೀರ್ಷ ಪಿಂಡಿಕೃತವಾದ ಓಂ। ಕಾರ ನಿರಂತರ ಸಾರವೆನ್ನು ಏಕಾವರ್ಣ। ಶ್ರೀರಮಣ ನಾರಾಯಣನ ಪ್ರತಿಪಾದಿಸುತ್ತಿದೆ। ಮೀರಿದ ದೈವವೆಂದು ಒಲಿಸಿ ಒಲಿಸಿ। ತಾರತಮ್ಯವೆ ಉಂಟು ಇದನೆ ಗ್ರಹಿಸುವಲ್ಲಿ। ಆರಾರ ತಕ್ಕ ಯೋಗ್ಯತ ಸಾಧನ। ಭಾರತದಲ್ಲಿ ಕೇಳು ವೈದಿಕ ಲೌಕಿಕ ವ್ಯವ। ಹಾರ ಮಾತಿಗೆ ಇದೆ ಪ್ರಥಮ ವ್ಯಕ್ತಿ। ಕಾರಣ ಕಾರ್ಯದಲ್ಲಿ ವ್ಯಾಪ್ತವಾಗಿದೆ ವಿ। ಸ್ತಾರ ಬೊಮ್ಮಾಂಡದೊಳು ನಿಬಿಡಿಯಾಗಿ। ದ್ವೀರಷ್ಟ ಪಂಚ ಪಂಚ ಚತುರಷ್ಟಾಚಮುತಾಗಿ। ಚಾರು ಪ್ರಕಾಶದಿಂದ ಅಭಿವ್ಯಕ್ತಿಯೊ। ಆರು ಎರಡರಿಂದ ತಿಳಿಯಬೇಕು। ಮೂರುತಿ ವಿಶ್ವ ತೈಜಸ ಪ್ರಾಜ್ಞ ತೂರ್ಯಾತ್ಮ ಅಂತರಾತ್ಮ। ಪರಮಾತ್ಮ ಜ್ಞಾನಾತ್ಮ ಹರಿಯಾ। ಈ ರೀತಿಯಲ್ಲಿ ನೆನೆಸು ಒಂದೊಂದು ಸ್ಥಾನದಲ್ಲಿ। ವಾರವಾರಕೆ ಬಿಡದೆ ಹೃದಯಾದಲ್ಲಿ ನಾರಾಯಣ ದೇವ ವಿಜಯ ವಿಠ್ಠಲರೇಯ। ಪಾರತಂತ್ರರಹಿತ ಸರ್ವ ಭೂತಸ್ಥ ಕಾಣೋ ॥೧॥

## ಮಟ್ಟ ತಾಳ

ಪ್ರತಿ ಪ್ರತಿ ಮಂತ್ರಕೆ ಪ್ರಣವ ನುಡಿಯಬೇಕು। ಅತಿಶಯವನೆ ಕೇಳು ಆನಾದಿ ಇದೆ ಸಿದ್ಧ। ಯತಿಗಳಿಗೆ ಪ್ರಣವ ಮುಖ್ಯ ಸಾಧನ ಕಾಣೋ। ಇತ ರಾಶ್ರಮ ಜನಕೆ ಯೋಗ್ಯತ ತಕ್ಕನಿತು। ಸತತ ಚರಿಸಬೇಕು ಮನ ನಿರ್ಮಳನಾಗಿ। ಕ್ಷಿತಿಯೊಳಗೆ ಕೇಳಿ ಒಂದಾರಂಭಿಸಿ। ಚತುರ್ದಶ ಪರಿಯಂತ ಪ್ರಣವ ಪೇಳಲಿಬೇಕು। ಅತುಳ ಉಚ್ಚಾರಣೆ ಸಗರ್ಭ

ಅಗರ್ಭವೊ। ಗತಿ ಚಿಂತಿಸುವದು ಆದಿ ಮಧ್ಯಾಂತದಲಿ। ಕೃತ
ಭುಜರೊಡೆಯಾ ಸಿರಿ ವಿಜಯ ವಿಠಲರೇಯನ ತುತಿಸಿಕೊಂಡಾಡುವದು
ಸಮೂರ್ತ್ಯಾದಿವೊಡನೆ ॥೨॥

## ತ್ರಿವಿಡಿತಾಳ

ಪ್ರಣವದಿಂದಭಿ ವ್ಯಕ್ತಿವ್ಯಾಹೃತಿ ನಾರಾಯಣ ಮಂತ್ರ ಈರ್ವದಲ್ಲಿ
ವಾಸುದೇವ ಮಂತ್ರ। ತ್ರಿಣಿವ್ಯಾಹೃತಿ ಬಿಟ್ಟು ಗಾಯಿತ್ರಿ ಮಾತೃಕ।
ಗುಣಪೂರ್ಣ ಪೂಂಸೂಕ್ತ ವಿಷ್ಣು ಪರಮಮುಖ್ಯ। ಇನಿತಷ್ಟಾ
ಮಹಾಮಂತ್ರ ನಾಲ್ಕೆಂಟು ಹನ್ನೆರಡು। ಮುನಿಸಪ್ತಾದಶ ನಾಲ್ವತ್ತೆಂಟು
ಮ್ಯಾಲೆರಡು। ಎಣಿಸು ಹತ್ತು ಹತ್ತು ಆರು ಭಗವದ್ರೂಪ। ದಿನದಿನದಲಿ
ವರ್ಣದೇವತಿಗಳನ್ನನೆನಿಸು ಅನುಕ್ರಮದಿಂದ। ಗುಣಪೂರ್ಣ
ಹರಿನಾರಾಯಣ ವಾಸುದೇವ ಸವಿತೃನಾಮಕ ವ। ರಣಾಖ್ಯ ನಾಮಕ
ಪುರುಷ ವಿಷ್ಣು ದೈವವ ಉ। ಚ್ಚರಣೆಯಿಂದ ಮಂತ್ರ ಸಿದ್ಧಿ ಮುನಿ ಛಂದಸ್ಸು
ಉಂಟು ಪ್ರತ್ಯೇಕ ಪ್ರತ್ಯೇಕ। ವಿನಿಯಂತ ಶಿರಸು ಮುಖ ಹೃದಯಾದಲ್ಲಿ
ದೇವತ। ಮನೋವಾಚ ಕಾಯದಲ್ಲಿ ಧ್ಯಾನಗೈದು। ಮಿನಗುವ
ರವಿಕಾಂತಿದ್ವಯ ಚತುರ್ಭುಜ। ಸುದರ್ಶನಕಂಬು ಗದಾಂಬುಜ ಅನ್ಯ ಹಸ್ತ
ಮಣಿಭೂಷಣ ಸಚ್ಚಿದಾನಂದ ಗಾತ್ರ ಧ। ರಣಿ ರಮಾ ಉಭಯ
ಪಾರ್ಶ್ವದಲಿ ವೊಪ್ಪೆ। ವನಜಭವಾದ್ಯರು ಸೇವಿಸೆ। ಜನನ ಶೂನ್ಯ ನಮ್ಮ
ವಿಜಯ ವಿಠ್ಠಲರೇಯನ। ಘನವಾಗಿ ಯೋಚಿಸುವದು ಶ್ಯಾಮವರ್ಣಾ ॥೩॥

## ರೂಪಕತಾಳ

ಇದಕಿಂತ ಮೊದಲೆ ಆಸನ ಶುದ್ಧಿ ಕರಶುದ್ಧಿ। ಪದೊಪದಿಗೆ ಬರುವ
ಭೂತೋಚ್ಚಾಟನೆ। ಮುದದಿಂದ ಉದಕ ಸ್ಪರಿಶ ಪ್ರಣವ ಮಿಗಿಲಾದ
ವಿಧಿಗಳು ತಿಳಿದು। ವಿಧಿಪೂರ್ವಕದಿ ಸದಮಲ ಮೂಲ ಗುರುಗಳ
ನಾಮದಿಂದಲಿ ವದಗಿ ನಮಸ್ಕರಿಸಿ ರೇಚಕ ಪೂರಕ। ತದನಂತರದಲ್ಲಿ

ಕುಂಭಕ ಮೂರರಲ್ಲಿ ವಿಷ್ಣು। ವಿಧಿ ಶಂಭುದೇವತೆಗಳ ಭಜಿಶಿ। ಇದಕೆ ಅವರವರ ಸಂಪ್ರದಾಯವೆ ಉಂಟು। ಉದಧಿ ಎಂದದಿ ಕಾಣೊ ಕರ್ಮ ಗತಿಯು। ಮದಮತ್ಸರ ಬಿಟ್ಟು ತಮ್ಮ ಗುರುಗಳು ಪೇಳಿದ ತೆರದಿ ಪ್ರವರ್ತನ ಮಾಡಲು। ಪದವಿ ಆಹುದು ಸಿದ್ಧ ಇದಕೆ ಸಂಶಯ ಸಲ್ಲ। ಹೃದಯದಲಿ ವಿಷ್ಣು ಬುದ್ಧಿ ಇರಲಿಬೇಕು। ಯದುಕುಲೋತ್ತಮ ನಮ್ಮ ವಿಜಯ ವಿಠ್ಠಲನು ಸನ್ನಿಧಿಯಾಗಿ ಇಪ್ಪನೊ ಪಂಚಭೇದದ ಮತಿಗೆ ॥೪॥

### ಝಂಪಿ ತಾಳ

ಮಂತ್ರೋಚ್ಚಾರಣ ವಿಹಿತಾ ಇಂತು ಇಪ್ಪದಾದಿ। ಅಂತೆ ನಾಮಃ ಸ್ವಾಹಃ ತದ್ದೇವ ತ್ರಿಪಾದ। ಮುಂತೆ ಸೂಕ್ತಗಳು ಏಕೇಕಾವರ್ಣಾಭಿಧಾನ ಸಂತತ ಪ್ರಣವ ಸಂಯೋಗದಿಂದ ಕೆಲವು। ಇಂತಿವೆ ಕೆಲವು ವಿಹಾಯ ಪ್ರಣವದಿಂದ। ಸಂತ ಸಾರಹುದು ಮಧ್ಯ್ಯತಾರಕವುಂಟು। ಸಂತು ಜನ ಜಪಿಸುವದು ಯಾವತ್ತು ಪ್ರಕಾರ। ಕಂತು ಪಿತರ ಸಮ್ಮಂಧ ನಾರಾಯಣಾದಿ। ಪಿಂತೆ ಶ್ರೀ ಅಜ ವಾಯು ವಾಣಿ ಭಾರತಿ ಗರುಡ। ಮುಂತಾಹ ದಿಕ್ಪಾಲಕ ಷಣ್ಮೊಗ ಗಣಪ ಪರಿ। ಯಂತ ಇತರ ಉನ್ನತ ಅಧಿಕಾರ ತಾರತಮ್ಯ। ಚಿಂತಾಮಣಿ ನಮ್ಮ ವಿಜಯ ವಿಠ್ಠಲ ಬಂದು। ಅಂತರಂಗದಲ್ಲಿ ಪೊಳೆವ ಕರ್ನಿಕೆಯಲ್ಲಿ ॥೫॥

### ಅಟ್ಟ ತಾಳ

ಅಂಗ ಅಂಗುಲಿ ನ್ಯಾಸ ಹೃಚ್ಚಿರ ಸರ್ವಾಂಗ। ಇಂಗಡ ನಾಲ್ಕೈದು ಆರೆಂಟು ಹತ್ತು ಸಹಿತು। ತ್ತುಂಗವಾಗಿ ಗಾತುರದಿಂದಲಿ ದ್ವಾತ್ರಿಂಶತಿ। ಇಂಗಿತವಾಗಿ ನ್ಯಾಸಗಳು ಬಗೆ ಬಗೆ। ಮಂಗಳವಾಗಿ ದೇಹಾಧಾರಲಿ ಕೃದ್ಧೋಲ್ಕಾದಿ। ತುಂಗಮಂತ್ರ ವರ್ಣ ಏಕೇಕಾದಿವ್ಯ ರೂ। ಪಂಗಳು ವಿಶ್ವಾಕಾಶವ ಕೇಶವಾದಿ। ಕಂಗೊಳಿಸುತಿಪ್ಪ ಜ್ಞಾನ ಐಶ್ವರ್ಯಾದಿ। ಶ್ರೀಂಗಾರ ಸೂಕ್ತ ತತ್ವ ಮಾತ್ರಕಾನ್ಯಾಸ। ಸಿಂಗೀತಲೋಲ ಶ್ರೀವೈಷ್ಣವೋಕ್ತಿಗೆವುಂಟು

ಸಾಂಗೋಪಾಂಗದಿಂದ ಅನ್ಯ ಮಂತ್ರಕೆ ಕೆಲವು। ತಿಂಗಳನಂತೆ
ಶೋಭಿಸುತಿವೆ ಈ ಮಂತ್ರ ಮಂಗಳ ಮೂರುತಿ ವಿಜಯ ವಿಠ್ಠಲಗೆ। ಉ।
ತ್ತುಂಗ ಪ್ರತಿಮೆಯನ್ನು ಸರ್ವ ವರ್ಣಗಳು ॥೬॥

**ಆದಿ ತಾಳ**

ನ್ಯಾಸ ವ್ಯಸ್ತ ಸಮಸ್ತ ಮಾಡುವ ಬಗೆವುಂಟು। ಭಾಸುರದಿಂದಲಿ
ಅಂಗಾ ಆಂಗುಲಿಯಲಿ। ಲೇಸು ಲೇಸು ಓಂಕಾರ ಪೂರ್ವೋತ್ತರ
ನುಡಿಯೆ। ಈಸು ಮಂತ್ರಗಳನ್ನು ಪಾಲಿಸುತಿಪ್ಪದು। ದೇಶದೊಳಗೆ ಇವೆ
ದೊರಕವು ಗುರು ಉಪ। ದೇಶವಾಗದ ತನಕ ಅನಂತ ಜನುಮಕ್ಕೆ। ಲೇಶ
ಬಿಡದೆ ಕೇಳು ಉಪಕ್ರಮ ಉಪಸಂಹಾರ। ದೋಷರಹಿತರಾಗಿ
ಧ್ಯಾನಮಂತ್ರಾರ್ಘ್ಯವಿತ್ತು। ಶ್ವಾಸಮಂತ್ರ ಹಂಸ ಮಂತ್ರಾಕ್ಷರ ಧೇನಿಸು। ನ್ಯಾಸ
ಮಾಡಿಕೊಳದೆ ಜಪವ ಜಪಿಸದಿರು। ಆಶೆ ನೇಗುವದಲ್ಲ ಕಾರಣ ಬಿಡು
ಸರಸಿ। ಜಾಸನ ಬಲ್ಲನು ಇದರ ವಿಚಾರವ। ಈಸು ಮಂತ್ರಗಳಲ್ಲಿ
ಅಷ್ಟಮಹಮಂತ್ರ ವಿ। ಶೇಷ ಫಲಕೆ ಕಾರಣ ಇಹ ಸೌಖ್ಯ ಕೊಡವಯ್ಯ।
ಶಾಶ್ವತ ಇವಕೆ ಮಹಾ ಪೆಸರು ಬಂದಿದೆ ನೋಡಿ। ಶ್ರೀಶ ಸ್ವ
ಮೂರ್ತಿಯೊಳು ಒಪ್ಪುತಿಹನೆಂದು ದಾಸೋಹಂ ಎಂದವನಿಗೆ ಮಂತ್ರಸಿದ್ಧಿ
ಕಾಣಿರೊ। ಲೇಸು ಬೇಕಾದರೆ ದೋಷವ ಕಳೆದು। ಭೂಸುರಾಗ್ರಣಿ
ತಾಂತ್ರಿಕದಂತೆ ಜಪಿಸಬೇಕು। ವ್ಯಾಸವತಾರ ನಮ್ಮ ವಿಜಯ ವಿಠ್ಠಲ ಸ್ವಪ್ರ
ಕಾಶದುಗ್ಧಾಬ್ಧಿ ಮಂಡಲ ಹೃದಯನ್ಯಾವಾಸುದೇವ ॥೭॥

**ಜತೆ**

ಪರಮ ಮುಖ್ಯಾಮುಖ್ಯ ಅಮುಖ್ಯ ಮಂತ್ರಗಳ।
ಕರಣ ಶುದ್ಧಿಲಿ ಮಾಡು ವಿಜಯ ವಿಠ್ಠಲನೊಲಿವ ॥೮॥

೧. ನ್ಯಾಸಾಂಗ- ವಿವರ- ಚಿಪ್ಪಗಿರಿ (ಹಳೆ ವುಸ್ತಕದಲ್ಲಿ ಬರೆದಂತೆ)
೧. ವ್ಯಾಹೃತಿ ವ್ಯಸ್ತ ಸಮಸ್ತ ಮಂತ್ರೋಚ್ಚಾರ.

ಚತುರಂಗನ್ಯಾಸ (೪) ಪಂಚಾಂಗ ನ್ಯಾಸ (೫) (೭) ನ್ಯಾಸವಿವರ

೧. ಸೃಷ್ಟಿ; ೨. ಸ್ಥಿತಿ; ೩. ಸಂವೃತ್ತಿ; ೪. ಸಯೋಗ; ೫.ವಿಯೋಗ; ೬. ಮಧ್ಯಾಸಿಯೋಗ.

೧. ಅಸಂಪುಟಾಕಾರ, ಸಂಪುಟಾಕಾರ.

೧. ಅನಿರುದ್ಧಾದಿ; ೨. ಕೃದ್ಧೋಲ್ಕಾದಿ; ೩. ಅಕ್ಷರನ್ಯಾಸಾ ಏಕಾರಂಭಿಸಿ ೧ರಿಂದ ೩೨ ರವರೆಗೆ, ೪. ಸೂಕ್ತ (೩); ೫. ತತ್ವ (೩೬) ೬ ಮಾತೃಕಾ (೫೧); ೭. ಐಶ್ವರ್ಯಾದಿ (೬) ೮ ಆದಿನಮಃ; ೯.ಅಂತೆನಮಃ; ೧೦. ಸ್ವಹಾ; ೧೧. ತನ್ನಾಮಗಾಯತ್ರಿ; ೧೨. ಸೂಕ್ತ; ೧೩. ಏಕವರ್ಣ; ೧೪. ಸಗರ್ಭ; ೧೫. ಅಗರ್ಭ; ೧೬. ಪ್ರಣವತ್ರಯ; ೧೭. ಪ್ರಣವದ್ವಯ; ೧೮. ಮಧ್ಯಮ ಪ್ರಣವ; ೧೯. ಶೀರ್ಷಪದ; ೨೦.ಸರ್ವಾಗ; ೨೧. ಹೃದಯ; ೨೨. ಪ್ರಣವ.



## ಸುಳಾದಿ-೪

ಮಂತ್ರದೇವತಾ, ಮಂತ್ರಗಳ ಬಗೆಗಳನರಿವುದು

### ರಾಗ-ಕಲ್ಯಾಣಿ ಧ್ರುವತಾಳ

ವಾಸುದೇವನ ಚರಣ ಸರಸಿಜ ಧೂಳಿ। ಯಾಶಿರಸಿನಲಿ ಸುಸೂವದು। ಆ ಸುಮನಸಾರಾರಿ ಸಮಾನನು ಕಾಣೊ। ವಾಸವಾಗುವ ಮೀಸಲ ಪದವಿಲಿ। ದೋಷ ವರ್ಜಿತರಾದ ದಾಸರ ನನುಸರಿಸಿ। ರಾಶಿ ಗುಣದಲ್ಲಿ ಲೇಸನಾಗಿ। ವಾಸೆ ಪಂಥವಬಿಟ್ಟು ಬ್ಯಾಸರಕಿಯ ಮನ। ಬೀಸಿ ಬಿಸಾಟು ಸಂತೋಷದಲ್ಲಿ। ಸಾಸಿರಾರ್ಚಿಸೆನಾಮ ವಿಜಯ ವಿಠ್ಠಲನ್ನಾ ಕಾಶ ಹೃದಯದಿ ನಿಲಿಸಿ ನೀ ನಮಿಸು ॥೧॥

## ಮಟ್ಟತಾಳ

ಪಂಚಭೂತದ ಪ್ರಾಪಂಚವನಳಿದು। ಪಂಚೇಂದ್ರಿಯಗಳೆಂಬ ವಂಚನಿಯ ತೊರೆದು। ಪಂಚಭೇದ ತಿಳಿದು ಸಂಚಿತ ಪ್ರಾರಬ್ಧ। ಮುಂಚಿನ ಕರ್ಮಕ್ಕೆ ಸಂಚಗಾರವ ಪಿಡಿದು ಕೊಂಚಮನಾಗದಲೆ। ಲಂಚೆಗೂಳಿ ಗುಪ್ತ ವಿಜಯ ವಿಠ್ಠಲ ಹರಿಯ। ಪಂಚದಶನೆಂದು ಅಂಚೆಗಂಚಿಗೆ ಭಜಿಸೊ ॥೨॥

## ರೂಪಕ ತಾಳ

ಮಡದಿ ಮಕ್ಕಳು ನಿನ್ನ ಒಡಿವೆ ವಸ್ತದ ಮ್ಯಾಲೆ। ಕಡುನೇಹ ಮಾಡಿ ಬೆಂಬಿಡದೆ ಮನವಿಟ್ಟಂತೆ। ಪಿಡಿದರ ಘಳಿಗೆ ವಿಕ್ಕಡಿ ಚಿತ್ತನಾಗದೆ। ಪೊಡವೇಶ ರಂಗನ ಅಡಿಗಳಲಿ ಆವಾಗ। ತಡಿಯದೆ ಭಕುತಿಯ ನಡಿಸಿ ಆತನ ಕರುಣ। ಪಡದು ವಶೀಕರಿಸೋದು। ಧೃಡದೈವ ವಿಹಾಯಾಸ ಹಿತ ವಿಜಯ ವಿಠ್ಠಲ। ಕಡು ಮೆಚ್ಚಿ ಬೆನ್ನನು ಬಿಡದೆ ಪಾಲಿಸುವನು ॥೩॥

## ಝುಂಪಿ ತಾಳ

ಇಂಧನ ಮಥನಿಸಿ- (ಮಥಿಸಿ) ಪಾವಕನ ಪಡೆದಂತೆ। ಇಂದು ನಿನ್ನಯು ಹೃದಯ ಮಧ್ಯದಲಿ । ಇಂದಿರೇಶನ ಪಾದ ನಖದ ಸಂದರುಶನಕೆ। ಛಂದವಾಗಿ ಮನಸು ಮಥನ ಮಾಡಿ। ಕಂದೆರದು ಜ್ಞಾನಾಂಕುರದಿಂದ ನೋಡಿ। ಗೋ। ವಿಂದನ್ನ ಪೂಜಿಪದು ಹರುಷದಲ್ಲಿ। ಸಂದೇಹ ಸಲ್ಲ ಲಕ್ಷ್ಮಿವಿಜಯ ವಿಠ್ಠಲನ್ನ। ವಂದಿಸಿ ನೀ ಬಪ್ಪ ದ್ವಂದ್ವವನು ನೀಗು ॥೪॥

## ತ್ರಿವಿಡಿ ತಾಳ

ತಂತುನಾಳಿಲಿಂದ ಮದವೇರಿ ತಿರಗುವ। ದಂತಿಯ ಎಳತಂದು ಕಟ್ಟದಂತೆ। ನಿಂತ ಭಕುತಿ ಎಂಬ ತಂತು ನಾಳಿಲಿಂದ। ಕಂತುಪಿತನೆಂದೆಂಬ ಮದಕರಿಯಾ। ಸಂತತ ಹೃದಯವೆಂಬಾಖ್ಯಾನ ಪುರದೊಳು। ಅಂತರಾತ್ಮ

ಕನಾ ನಿಲಿಸಿ ನಿಲಸಿರೊ। ದಂತಿವರದ ಊರ್ಧ್ವ (ಉದ್ವಂಗ) ವಿಜಯ ವಿಠ್ಠಲರೇಯ। ಸಂತರಿಸುವನು ಆದ್ಯಂತ ಕಾಲದಲ್ಲಿ ॥೫॥

### ಅಟ್ಟ ತಾಳ

ಆವಾವ ದುಃಶಾಸ್ತ್ರ ಆವವ ದುಃಸಂಗ। ಆವಾವ ದುರ್ಮಿಥ್ಯ ಆವಾವ ಮೋಹಕ। ಆವವ ದಾದರು ಜೀವಾಧಮರಿಂದ। ದೇವದೇವರ ವಾಸು ದೇವಗೆ ಪೇಳುವ। (ಕೂ) ಕುವಾದ ಬರಲದ ನೀ ಒದದು ಕಳ। ದಾವಾವ ಪರಿಯಲ್ಲಿ ಪಾವಮಾನಿಯುಮತ। ಭಾವದಲ್ಲಿ ಮೆಚ್ಚಿ ಕೋವಿದನಾಗೋದು। ಶ್ರೀವರನಾಮಕ ವಿಜಯವಿಠ್ಠಲನ್ನ। ತಾವರೆ ಪದಗಳ ಪಾವನನೋಡೊ ॥೬॥

### ಆದಿ ತಾಳ

"ಆಮೇತ ಸಹಿತ ದೃಷ್ಟಾಪ್ರೀಂಯುತಾ ಸರ್ವತೊ" ಪ್ರಮೇಯಗಳನರಿದು ಶುದ್ಧ। ಸಮಚಿತ್ತದಲ್ಲಿ ಇದ್ದು। ಮಮತೆಯನ್ನು ಬಿಟ್ಟು ನಿಜ। ಸಮಾಧಿಯಲ್ಲಿ ಕುಳಿತು ಆ। ತುಮ ಮೂರ್ತಿರೂಪವರಿತು। ಶಮೆದಮೆ ಮನದಲ್ಲಿ ಸಮಾಧಾನವಾಗಿ ನೋಡಿ। ಅಮೇಯಾತ್ಮನಾಮಾ ನಮ್ಮ ವಿಜಯ ವಿಠ್ಠಲ ನಂಘ್ರಿ। ಕಮಲವನ್ನು ಕಮಲದೊಳು ನಮಿಸಿ ನವಭಕುತಿಯಲ್ಲಿ ॥೭॥

### ಜತೆ

ದ್ವಾದಶ ಮೂಲ ಮಂತ್ರದಲ್ಲಿ ಸಾಧಿಸಿ ಮನ।
ಸಾಧುವೆ ವಿಜಯ ವಿಠ್ಠಲನ ಪಾದವ ಕಾಣೊ ॥೮॥



## ಸುಳಾದಿ-೫

ಮಂತ್ರದೋಷ ತ್ಯಜಿಸಿ ಮಂತ್ರ ಜಪ ಮಾಡತಕ್ಕ ವಿಸ್ತಾರ ವಿಚಾರ

### ರಾಗ-ಭೈರವಿ ಧ್ರುವತಾಳ

ಮಂತ್ರ ಮಾಡೆಲೊ ಮನುಜಾ ಮನೊ ವಾಚಕಾಯದಲ್ಲಿ। ಸಂತತ ಮೂರು ಬಗೆ ಗುಣವ ತಿಳಿದು। ತಂತು ಬಲಿಸಿದಂತೆ ತ್ವಕುವೇಂದ್ರಿ ಮೊದಲಾದ। ಇಂತಿಪ್ಪ ಕರಣಂಗಳು ಪಿಂಡಿ (ತೆ) ಮಾಡಿ। ಚಿಂತ ಸಂತಾಪ ಲೇಪದೂರ ದುರ್ಜಯ ಸಿರಿ। ಕಾಂತನ್ನ ಪಾದಪದ್ಮ ಕ್ರಾಂತನಾಗಿ। ಮುಂತೆ ಬರುವ ಜನುಮ ಕಳಕೊಂಬೊದೊಂದೆ ಮರಳೆ। ಪಿಂತೆ ದುಷ್ಕರ್ಮವೆಂಬೊ ಮಹಸಾಗರ। ಶಾಂತವಾಗುವದೊಂದು ಈರ್ವಗೆ ಯೋಗ। ಏಕಾಂತ ಭಕ್ತಿ ಸಂಪಾದಿಸಿ ಜಪಿಸು ಮಂತ್ರ। ಅಂತರಂಗದಲ್ಲಿ ಸದ್ಗುರು ರವಿಮಂಡಲ। ಮಂತ್ರಿಪ್ರಧಾನ ಮುಖ್ಯ ಪ್ರಾಣನಲ್ಲಿ। ಅಂತರಾತುಮ ಶ್ವೇತದ್ವೀಪ ನಿವಾಸಿಯಲ್ಲಿ। ಚಿಂತಿಸು ಉತ್ತರೋತ್ತರ ಶುಭತರಂಗ। ಮಂತ್ರಾರ್ಥವನ್ನೆ ತಿಳಿದು ಹೃದಯಾದಲ್ಲಿ ತತ್ತನ್ಮೂರ್ತಿಗ। ಛಾಂತು ಧ್ಯಾನವಿಪ್ಪದೊ ತತ್ಪ್ರಕಾರ। ಸಂತು ಸದ್ವಿಚಾರ ಮಾಡುವ ಬಗೆ ಅನಾ। ದ್ಯಂತ ಕಾಲದಲ್ಲಿ ಪ್ರತ್ತ್ಯೇಕವೊ। ಸಂತಿವೆ ಪಂಚಾಶದ್ವರ್ಣಗಳೊಂದೊಂದು। ಅಂತು ಮೊದಲು ಇಲ್ಲದೆ ಗುಣಕಾಲದಿ। ಎಂತೆಂತು ವ್ಯಾಪ್ತಿಯುಂಟು ಅಲ್ಲಲ್ಲಿ ಪರಿ। ಯಂತ ಸಮಸ್ತ ವರ್ಣ ಸಮವ್ಯಾಪ್ತಿಯು। ಚಿಂತಿಸು ಮೊದಲಾವರ್ಣ ಅತಿ ವಿಚಿತ್ರಾನಂದಾ। ನಂತಗುಣ ಸಂಪೂರ್ಣವುಂಟಾಗಿದೆ। ಎಂತು ಪೇಳಲಿ ಒಂದೊಂದು ವರ್ಣದ ಮಹಿಮೆ। ಅಂತರ ಬಾಹಿರ ಭರಿತವಕ್ಕು। ಭ್ರಾಂತಿಯಿಲ್ಲವೊ ಕಾಣೊ ಪ್ರಳಯದಲ್ಲಿ ನಿತ್ಯ। ಎಂಥವೆಂದರೆ ಗುರುತು ಪೇಳಲೊಶವೆ। ಎಂಥವೊ ಚಕ್ಷುರಾದಿ ಇಂದ್ರಿಯಂಗಳು ಕಾಣವು। ಎಂಥವೊ ಜ್ಞಾನೈಕಗಮ್ಯದಿಂದಲಿ ಶಬ್ದ। ಇಂಥ ವರ್ಣಗಳಿಂದ ಭಾರತಾದಿ ಸರ್ವ। ಗ್ರಂಥಗಳಿಹವು ಅತಿ ವಿಸ್ತಾರ। ಪಂಙ್ತಿ ಭ್ರಮಣವಾಗೆ ಪಾಪ ಪ್ರಾಪುತ ಸ।

ತ್ಪಂಥವಾಗದು ಕಾಣೊ ಎಂದೆಂದಿಗೆ। ಇಂಥ ವರ್ಣಾತ್ಮಕವೇದಂಗಳೆನ್ನು ಅ। ನಂತ ಸ್ವರಾತ್ಮಕ ಶಬ್ದ ಜನ್ಯಾ। ಇಂಥಾದೇ ಏನಂಬಿಯೊ ಹರಿಇಚ್ಛೆ ಇಂಥಾದ್ದೆ ಸ್ವ ತಂತ್ರ ಸ್ವಶಕ್ತಿ ಪುರುಷ ಅನಾಮಕ। ಸಂತು ಜನವರಣಾತ್ಮಕ ಏಕೈಕ ವಿಧವಾದ ಮಂತ್ರ ಜಪಿಸಿ ಬದ್ಧವಾದ ಹೃದಯಾ। ಗ್ರಂಥಿ ಬಿಡಿಸಿಕೊಂಡು ಕೈ ಹೊಯ್ದು ಕೈ ಹೊಯ್ದು। ಸಂತತಿ ಸಮೇತ ನಗುತ ನಗುತ। ಅಂತಕ ನಾಳಿಗೆ ಸೋಜಿಗ ತೋರುತ್ತ। ಅಂತಕ ದೇವನೆಂದು ಭಳಿರೆ ಎನೆ। ದಂತಿ ತೂಗುವಂತೆ ತೂಗುತ್ತ ನಡವುತ್ತ। ನಿಂತಲ್ಲಿ ನಿಲ್ಲದಲೆ ಹರಿಗೆರಗುತ್ತ। ಸಂತೋಷದಲ್ಲಿ ಪೋಗೆ ಮುಕ್ತಿಯಾ ಸಾರುವರು। ಮಂತ್ರಾಭಿಮಾನಿಗಳು ಜಯ ಜಯವೆನೆ। ಕಂತು ಜನಕ ನಮ್ಮ ವಿಜಯ ವಿಠ್ಠಲನ ನಿ। ರಂತರ ಜಪಿಸುವದು ಅನುಭವಸಿದ್ಧನಾಗಿ ॥೧॥

## ಮಟ್ಟ ತಾಳ

ವರಣಾಭಿ ಮಾನಿಗಳನೆನಿಸು ಆರಂಭದಲ್ಲಿ। ಸಿರಿಭೂಮಿ ದುರ್ಗವಾಣೀ ಭಾರತಿ ಷಟ್‌ಸ್ತ್ರೀ। ಯರು ಸೌಪರಣಿ ವಾರುಣಿ ರುದ್ರಾಣಿ। ಗುರು ಸಮ ನಾರಿಯರು ಚಂಡಿ ಚಾಮುಂಡಿಕ। ಸರುವ ನಾರಿಯರು ಅಭಿಮತದವರೆಂದು। ಪರಿ ಪರಿಯಿಂದಲಿ ಕೊಂಡಾಡುವದಿದಕೊ। ಹರಿರೂಪಗಳುಂಟು ಒಂದೊಂದು ನಾಮದಲಿ। ಕರಿಸಿಕೊಳುತಲಿವೆ ಅನಾದಿಯಲ್ಲಿ ಸಾಮ್ಯ। ಇರುತಿಪ್ಪದು ನೋಡಿ ವರಣ ವ್ಯತ್ಯಾಸಗಳೆ ಸೃಷ್ಟಿ ಎನಿಸುವದು। ತರುವಾಯ ಕ್ರಮದಿಂದ ಕೂಡುವದೆ ವಿಲೀನ। ವರಣನಿಯಾಮಕ ವಿಜಯ ವಿಠ್ಠಲರೇಯ। ವರಣ ನಾಮಕಾ ವರಣರೂಪ ಭಿನ್ನ ॥೨॥

## ತ್ರಿವಿಡಿ ತಾಳ

ಆದಿಯಲ್ಲಿ ನೀನು ಮೂರು ಬೀಜಗಳಿಂದ। ಕ್ರೋಧನ್ನ ಸಂಹರಿಸು ಇದರೊಳು ತಿಳಿದು। ಭೇದ ಜ್ಞಾನದಿಂದ ಭಕ್ತಿಯ ಮಾಡಿ। ಸಂಪಾದಿಸು

ಪುಣ್ಯ ಪುರುಷ ಧ್ಯಾನವ। ಈ ದೇಹದ್ವಲ್ಲಿ ತಿಳಿದು ಮಂತ್ರಕ್ಕೆ ಮಹದೋಷ
ಕಾದಿಪ್ಪವು ಎಂಟು ನೀಕ್ಷಿಸು ಮನುಜಾ। ಶೋಧಿಸು ಪೆಸರುಗಳು (೧)
ಮೃತ (೨) ಸುಪ್ತ (೩) ಮೂಕನೆಂಬೋದು (೪) ನಗ್ನಾ (೫)
ವೀರ್ಯಹೀನ (೬) ಶೂನ್ಯ (೭) ಭುಜಂಗ (೮) ವೃಥಾಯಿತಃ ಕ್ಷರಾಹಿ
(೯) ಅರಿತವೆನ್ನಿ (೧೦) ಕೀಲಿತಾ। ಹೃದಯದಲಿ ಎಣಿಸು ಈ ಪರಿ
ತೊರದು। ಸಾಧನ ಸಾಧ್ಯಸಿದ್ಧನಾಗೆಲೊ। ಪಾಡಮಂತ್ರಗಳಿಂದ ಮಾಡಿದ
ಜಪಕೆ। ಕ। ಲ್ಲ್ಯಾದಿಗಳು ಪಹತಿ ಬಾರದದಕೊ। ಈ ದೋಷ ಗುಣ ಮಂತ್ರ
ಮಾಡಿದರೆ ವಿ। ಷಾದವಲ್ಲದೆ ಲೇಶ ಲಾಭ ಕಾಣೊ। ಬಾಧೆಯಲ್ಲದೆ ಅವಗೆ
ಎಂದಿಗೂ ಮನಸು ಪ್ರ। ಸಾದವಾಗದು ಹಗಲಿರುಳು ಜಪಿಸೆ। ಹಾದಿ
ಪಿಡಿದು ಪೋಗಿ ಮಹಾರಣ್ಯ ಸೇರಿದಂ। ತಾದದಲ್ಲದೆ ನಿರ್ಭಯನಾಗನೊ।
ಮೈದೋರನೋ ವರಣ ಮಂತ್ರ ದೇವತಸ್ವಾಮಿ ಸಾಧು ಜ್ಞಾನಿಯ ಕೇಳು
ಪುಶಿಯಲ್ಲವೊ।। ಪಾದ ಮಸ್ತಕ ಸರ್ವಾಂಗ ಪರಿಪೂರ್ಣ ಜ್ಞಾ ನೋದಧಿ
ಹರಿಮಂತ್ರ ಸಂತೇಸರಕೆ। ವೇದವಂದಿತ ನಮ್ಮ ವಿಜಯ ವಿಠ್ಠಲರೇಯನ।
ಪಾದವೆ ನೆರೆನಂಬು ಒಂದೆ ಮಂತ್ರವ ಜಪಿಸು ॥೩॥

### ಅಟ್ಟತಾಳ

ವಮನದೊಳಗೆ ಯಿದ್ದ ಷಡ್ರಸದಂತೆ ಯಿ। ಕ್ರಮವನ್ನು ತಿಳಿದು
ಮಾಡದ ಮಂತ್ರ ಸಮಸ್ತಾ। ಅಮಿತ ತೇಜಸನಾಗಿ ಪ್ರಾರಂಭದಲಿ।
ಹೃತ್ಕಮಲದ ವಿಚಾರ ವಿಸ್ತಾರಸಂಗ್ರಹಿಸಿ। ಗಮನಾಗಮನ ಸಂಧಿ ಕಾಲವೆ
ಗ್ರಹಿಸಿ। ಅಮರೇಶಾದಿ ವಾಸ ಏಕಾದಶಭಾಗ। ದಮೆ. ಶಮೆ. ಗುಣದಿಂದ
ದ್ವಾದಶ ಸಂಕೇತ। ಅಮಲಪ್ರಭಾ ಮೂರ್ತಿ ಹೃಷಿಕೇಶಗೆ ಮುಂಚೆ। ನಮಿಸಿ
ನಿರ್ಮಳಮನದವನಾಗು ಸರ್ವದಾ। ತುಮದೊಳು ಉಳದೇಂದ್ರಿಯಂಗಳು
ಕೂಡಿಸಿ। ಅಮಮ ಪ್ರಾಣವ ಒಂದೊಂದು ತತ್ವದಲ್ಲಿಟ್ಟು। ರಮೆ ರಮೆಯರಸ
ಮಿಕ್ಕಾದ ತತ್ವೇಶ್ವರ। ರಮಣೀಯ ಮತಿಯಿಂದ ಮೇಲು ಮೇಲು
ವ್ಯುತ್ಕ್ರಮದಲ್ಲಿ ತಾಹದು ಮೂವತ್ತಾರು ಸಾರಿ। ಉಮೆಯುರಸನ್ನ

ಮಧ್ಯದಲಾಗ ಬಲಗೊಂಡು। ಚಮತ್ಕೃತಿಯಿಂದ ಜಿಹ್ವಾಗ್ರದಲಿ ನಿಲಿಸಿ। ತಮೊರಜಭಾಗ ವಿಶಿಷ್ಟಗುಣ ಬಿಟ್ಟು। ಸಮಬುದ್ಧಿಯಿಂದ ಮಂತ್ರಗಳ ಮಾಡುವದು। ತಿಮಿರ ದೋಷ ಭಾನು ವಿಜಯವಿಠ್ಠಲನಂಘ್ರಿ। ಕಮಲವಧ್ಯಾನಿಸು ಸರ್ವಾತ್ಮಕನೆಂದು ॥೪॥

**ಆದಿತಾಳ**

ಜಪವ ಜಪಿಸು ಬಹು ಜತನ ಜಿತೇಂದ್ರಿಯದಿಂದ। ಸ್ವಪನ ಜಾಗ್ರತದಲ್ಲಿ ದೇಹದಂಡಿಸು ತಪದಿ। ತಪಿಸು ತ್ರಯತಾಪಧರಿಸಿ ಭೇದವಭೇದ ಜ್ಞಾನ। ಗುಪುತವಾಗಿರಲಿ ಗುರುಗಳ ಉಪದೇಶ ದೇಶದಿಂದ। ಜಪಮಣಿ ಖಂಡಾ ಖಂಡ ತುಲಸಿ ಪದುಮಮಿಗೆ। ಸುಪವಿತ್ರ ಹಸ್ತದಲ್ಲಿ ಪಿಡಿದು ಯಣಿಸಬೇಕು। ಕುಪಿತನಾಗದೆ ಮಣಿಸಂಯೋಗ ಮಂತ್ರೋಚ್ಚಾರ। ವಿಪರೀತವಾಗಗೊಡದೆ ನ್ಯಾಸಾವಿಷ್ಟಪೂರ್ವಕ। ಅಫಲಾಕಾಂಕ್ಷಿತದಲ್ಲಿ ರಚಿಸು ಯಿದೆ ಸೂಚಿಸು। ಉಪಶ್ರುತಿ ಪೇಳುವೆನು ಸಮುದ್ರದೇವಾಲಯ। ತಪಸಿ ಪರ್ವತ ಪರ್ವತ ನದೀವಿಪ್ರ ಸಮುದಾಯ। ನೃಪತಿ ಆಚ್ಯಾರ್ಯ ಪುಣ್ಯಕ್ಷೇತ್ರ ಗೋಸಂಕುಲ। ಉಪದೇಶ ಗುರುವು ಶ್ರವಣ ಯಾಗ ವೈವಾಹಮಂ। ಟಪದೀಪಾ ಉತ್ತುಮ ಸಂಗೀತ ಜ್ಞಾನಿ ಚೆಂದ್ರಾ ತಪನ ಮಾತೃಪಿತೃ ಭ್ರಾತಾದಿ ಹಿರಿಯಾರು। ತಪನೀಯಾದಿ ವಿಭೂತಿ ವಸ್ತದ ಅಭಿಮುಖವಾಗಿ। ಜಪವ ಮಾಡೆಲೊ ಬಹು ಮರಿಯಾದಿಯಿಂದಲಿ। ತೃಪುತಾಗುವರಿವರು ಅನೇಕ ಬಗೆಯಿಂದಾ। ಉಪಚ್ಯಾರವಲ್ಲ ಕಾಣೊ ಸರ್ವಕ್ಕು ಗುರುಗಳ। ಉಪಸಮ್ಯದಲ್ಲಿ ಮುಖ್ಯ ಭೀತಸ್ಥನಾಗಿ ಬಾಳು। ಜಪ ನೂರಾರು ಸಾವಿರಲಕ್ಷಾಯುತ ಕೋಟಿ ಆ। ತಪದೊಳು ಮಾಡಲ್ಯಾಕೆ ಬೆರಳು ಮಣಿಸಿ ಬಳಲಿ। ದಿಪುತಮನದಲ್ಲಿ ಹಿಂದೆ ನುಡಿದಂತೆ ಸ್ಮರಿಸಿ ವಂದೆ। ಜಪವ ಮಾಡಿದರೆ ಮುಕ್ತಿ ಕರತಳದಲ್ಲಿ। ಸಪರಿವಾರ ಸಹಿತಾ ಪೋಗುವರು ಸಾಧನದಿಂದ। ಚಪಲಪ್ರಕಾಶ ನಮ್ಮ ವಿಜಯವಿಠ್ಠಲ ವೊಲಿದು। ಅಪರೋಕ್ಷ ಮಾಡಿಕೊಡುವ ವಂದೊಂದು ಮಂತ್ರಕ್ಕ ॥೫॥

### ಜತೆ

ಒಂದೊಂದು ಮಣಿಯಲ್ಲಿ ಒಂದೊಂದು ಭಗವದ್ರೂಪ। ಪೊಂದಿವೆ ಜಪಿಸೋದು ವಿಜಯವಿಠ್ಠಲನ ಮಂತ್ರಾ ॥೬॥ ಮಂತ್ರದೋಷಗಳ ವಿಚಾರ ತ್ರಿವಿಡಿತಾಳದಲ್ಲಿ ಪ್ರಮಾಣಗ್ರಂಥ ॥ವಿಷ್ಣುತಿಲಕ ತಂತ್ರ॥ ಶ್ಲೋಕ॥ ಮೂಕಃ ಸುಪ್ತೋಮೃತೋನಗ್ನೋವೀರ್ಯಹೀನ ವೃಥಾಯಿ(ಹಿ)ತಃ॥ ಭುಜಂಗ ಕೀಲಿತಂ ಶೂನ್ಯೋದಶದೋಷಾ ಪ್ರಕೀರ್ತಿತಾ॥೬॥

❖ ❖ ❖

## ಸುಳಾದಿ-೩

ಸಾಧನಕ್ಕೆ ಮೊದಲು ಹರಿದಾಸನಾಗಿ ಅನೇಕ ವಿಧವಾದ ಕರ್ಮಗಳ ವಿಚಾರ ಪೂರ್ವಕ. ಸಾಧನ ಶ್ರೀಚರಣ ಭಜನೆ

### ರಾಗ-ಭೈರವಿ ಧ್ರುವತಾಳ

ಹರಿದಾಸನಾಗು ಸಂಚರಿಸು ಸಂತೋಷದಲ್ಲಿ। ಗುರು ಹಿರಿಯರ ಪಾದಕ್ಕೆರಗುತಿರು ಬಿಡದೆ। ಎರಡೊಂದು ತಿಳಿದು ಮತ್ತೆರಡೊಂದು ಅಳಿದು। ಎರಡೊಂದು ಸಂಪಾದಿಸಿ ಎರಡೊಂದು ಶುದ್ಧಿಯಲ್ಲಿ। ಎರಡೊಂದು ಸೈರಿಸುತ್ತ ಎರಡೊಂದು ಕಾಲದಲ್ಲಿ। ಎರಡೊಂದು ಗುಣಗಳಿಗೆ ಎರಡೊಂದು ರೂಪನೆಂದು। ಎರಡೊಂದು ಲೋಕವನ್ನು ಎರಡೊಂದು ಮಾಳ್ಪನ್ನ। ಎರಡೊಂದಾರಿಂದಾವಸ್ಥಿ ಎರಡೊಂದು ಉಳ್ಳಾ ಮೇಲು। ಎರಡೊಂದು ಕಾಯಾನೋಡು ಎರಡೊಂದು ಕರ್ಮಾಕಳಿಯೊ। ಎರಡೊಂದಕ್ಷರಗಳ ಎರಡೊಂದುಸಾರೆ ನೆನದು। ಎರಡೊಂದು ಸ್ಥಾನ ಸೇರು ಎರಡೊಂದು ಗುಣ ಶೂನ್ಯ ವಿಜಯ ವಿಠ್ಠಲ ಹರಿಯ। ಎರಡೊಂದು ರೂಪಾಭಜಿಸೆ ಎರಡೊಂದಾವರ್ತಿ ಪೊರೆವ ॥೧॥

**ಮಟ್ಟತಾಳ**

ಮೂರೊಂದು ಯುಗದಲ್ಲಿ ಮೂರೊಂದು ವರ್ಣದ। ಮೂರೊಂದು ಕಡೆ ಬಿಂಬ ಮೂರೊಂದಾದಿ ಭಜಿಸಿ। ಮೂರೊಂದು ಪುರುಷಾರ್ಥ ಮೂರೊಂದಾದದಿ ಬೇಡೆ। ಮೂರೊಂದು ಮೊಗನಯ್ಯಾ ವಿಜಯ ವಿಠ್ಠಲರೇಯ। ಮೂರೊಂದುಪಾಯದಲ್ಲಿ ಮೂರೊಂದು ಪ್ರಳಯನಾದೆ ॥೨॥

**ತ್ರಿವಿಡಿತಾಳ**

ನಾಲ್ಕೊಂದು ಭೇದವ ಆವಲ್ಲಿ ನಿಜವೆಂದು। ನಾಲ್ಕೊಂದಾತ್ಮಕವಾದ ಬೊಮ್ಮಾಂಡದಿ। ನಾಲ್ಕೊಂದು ಬಗೆಯವರು ಯೋಗ್ಯವಂತರೆಂದು। ನಾಲ್ಕೊಂದು ಸಮಪದವಿ ಇಪ್ಪವೆಂದು। ನಾಲ್ಕೊಂದು ಕೋಶದಲ್ಲಿ ವಾಸವಾಗಿ ಇದ್ದು ನಾಲ್ಕೊಂದು ಪರ್ವದಲಿ ತಿರಗದಲೆ। ನಾಲ್ಕೊಂದು ಊರ್ಧ್ವಪುಂಡ್ರವ ಮುದ್ರಿಯೆ ಧರಿಸು। ನಾಲ್ಕೊಂದು ಯಜ್ಞವ ತಿಳಿದು ಮಾಡಿ ನಿತ್ಯ। ನಾಲ್ಕೊಂದು ಇಂದ್ರಿಯಂಗಳ ಬಂಧನವ ಮಾಡು। ನಾಲ್ಕೊಂಧಾದಿಗೆ ಎರಗದೀರು। ನಾಲ್ಕೊಂದು ಭೇದವ ತಿಳಿಯೋ ನೀನು। ನಾಲ್ಕೊಂದವರ ಪಾಲ ವಿಜಯವಿಠ್ಠಲ ಪ್ರ। ನಾಲ್ಕೊಂದು ಬಿಡಿಸುವ ನಾಲ್ಕೊಂದು ಕೊಡುವನೊ ॥೪॥

**ಅಟ್ಟತಾಳ**

ಐದೊಂದುರಿಪುಗಳುಪದ್ರವ ಮುಗ್ಗಿಸು। ಐದೊಂದು ಕರ್ಮವ ಮಾಡುತಲಿರು। ಐದೊಂದು ಮತಕೆ ನಮ್ಮ ಮತವಧಿಕವೆನ್ನು। ಐದೊಂದು ರುಚಿ ಬಿಡು ಹರಿನಾಮಾ ರುಚಿಯೆನ್ನು। ಐದೊಂದು ರಥಿಕರ ಜರಿದ ವಿಜಯವಿಠ್ಠಲನ್ನ। ಐದೊಂದು ಸ್ಥಳದಲ್ಲಿ ತಿಳಿಯೋ ನಿರ್ಮಲನಾಗಿ ॥೫॥

### ಆದಿ ತಾಳ

ಅರೊಂದು ಜಡವುಳ್ಳ ಗ್ರಾಮನಿನ್ನದಲ್ಲ। ಆರೊಂದಂಬುಧಿ ಯಷ್ಟು ಕರ್ಮವೆ ನಿನ್ನದು। ಆರೊಂದವರ ಕೇಳಿ ಯಮನು ಶಿಕ್ಷಿಸುವನು। ಆರೊಂದು ದ್ವೀಪವನಾಳಿದವರೆಲ್ಲ। ಆರೊಂದು ಹಯನ ಕಾಲಕೆ ಎದ್ದ ಸ್ನಾನಾದಿ। ಆರೊಂದು ಜಿಂಹಕೆ ಉಣಿಸಿ ಕರ್ಮಜ್ಞಾನ। ಆರೊಂದು ಗೋತ್ರ ಉದ್ಧಾರ ಮಾಡುತ। ಆರೊಂದು ಅಂಗವುಳ್ಳ। ವಿಜಯ ವಿಠ್ಠಲ ಹರಿಯ। ಆರೊಂದವರೊಳು ನಿಮಿಷ ದಾಸನಾಗೊ ॥೫॥

### ಜತೆ

ಕೊಡಬ್ಯಾಡ ಕೊಳಬ್ಯಾಡ ಸಿರಿವಿಜಯ ವಿಠ್ಠಲನ್ನ ।
ಅಡಿಗಳರ್ಧಾ ನಿಮಿಷಾನಂಬಲು ಕೈವಲ್ಯ ॥೬॥



## ಸುಳಾದಿ-೭

ಹರಿದಾಸನಾಗುವದು ಮುಖ್ಯ -ಏನು ಶ್ರಮ ಬಂದರೂ ಸಹಿಸಿ
ದಾಸ್ಯಭಾವವೊಹಿಸು

### ರಾಗ-ಕಾಂಬೋದಿ ತಾಳ ಧ್ರುವ

ದಾಸನಾಗುವದು ಅಶೇಷ ಜನ್ಮದ ಪುಣ್ಯ। ರಾಶಿ ಬಾರದಲೆ ಫಲಿಸೋದೇನೋ। ಸಾಸಿರ ಕೋಟಿ ಧನ ತಾಸೂರೆ ಬಿಟ್ಟರು। ಕಾಶಿರಾಮೇಶ್ವರ ತಿರುಗಿದರು। ಮಾಸ ಮಾಸ ಉಪವಾಸವನ್ನೆ ಮಾಡಿ। ದೇಶ ಪ್ರದೇಶವನ್ನು ಸುತ್ತಿದರೂ। ವಾಸರೋಸರ ಬಿಡದೆ ಶರೀರ ದಂಡಿಸಿ। ಘಾಸಿಯಾಗಿ ಪಲ್ಲುಗರಿದರೇನು। ವಾಸುದೇವನ ಪಾದ ಸೇವೆ ದೊರಿಯದು। ಸಾಸಿವಿ ಕಾಳಿನಿತು ಸಂಶಯ ಯಾಕೋ। ಸಾಸಿರಾರ್ಚಿಸೆ ನಾಮ ವಿಜಯ ವಿಠ್ಠಲನ್ನ। ದಾಸನಾಗುವ ಭಾಗ್ಯವಾಸುಕಿ ಎಣಿಸುವನು ॥೧॥

### ಮಟ್ಟತಾಳ

ಅಂದಣವನು ಏರಿ ಅರಸು ಎನಿಸಿಕೊಂಡು। ಹಿಂದೆ ಮುಂದೆ ಹಿತದ ಪರಿವಾರದವರ। ಸಂದಣಿ ಸಹಿತದಲಿ ಮೆರೆದು। ಕುಂದದೋಲಗವನ್ನು ಕುಶಲದಿ ಕೊಳಬಹುದು। ಇಂದು ಮೋಹನ ಗುರು ವಿಜಯ ವಿಠ್ಠಲ। ಎಂದಿಗೆಂದಿಗೆ ಭಕುತಿ ಈಯನೊ ಪರೀಕ್ಷಿಸದೆ ॥೨॥

### ತ್ರಿವಿಡಿತಾಳ

ಷಡುರಸನ್ನವ ಕೊಡುವ ಒಡವಿ ವಸ್ತು ಒಳ್ಳೆ। ಉಡಗಿ ವಸನಾಭರಣ ತಡಿಯದೆ ಕೊಡುವ। ಮಡದಿ ಮಕ್ಕಳು ತನ್ನ ಒಡನೊಡನೆ ಬಂದು ಸುಖ ಬಡುವ ಬಾಂಧವರನ್ನ ಎಡೆ ಬಿಡದಲೆ ಕೊಡುವ। ಅಡಿ ತೊಲಗದಲೆ ಅನೇಕ ಕಡಿಯಲಿಂದ। ಕಡೆ ಇಲ್ಲದ ಭಾಗ್ಯ ಸಡಲಾದಂತೀವ। ಕಡುಮುದ್ದು ಚತುರ್ಭಾವ ವಿಜಯ ವಿಠ್ಠಲರಂಗ। ಧೃಡ ಭಕುತಿ ಕೊಡನಯ್ಯಾ ಅಡಿಮೇಲ ಗಳಲಿದರು ॥೩॥

### ಅಟ್ಟತಾಳ

ದಾಸನಾಗುವೆನೆಂದು ಆಶೆಯ ಮಾಡಲು ಕ್ಲೇಶವ ಬಡಿಸುವಾ। ಭಾಸವ ಮಾಡಿಸುವ ನಾಶನ ಮಾಡಿಸುವ ಸಕಲ ಐಶ್ವರ್ಯವ। ಗ್ರಾಸವಾಸಕೆ ತರಲೀ ಸಾನು ಪರರಿಂದ। ದ್ವೇಷವ ಮಾಡಿಸುವ ಮಾನಿಸರ ಕೈಯಿಂದ। ಮೋಸವಾದ ಭವ ಪಾಶದಲ್ಲಿ ಬಿಗಿವ। ಬೀಸಿ ಬೀಸಾಟುವ ಕಾಸಿನವನ ಮಾಡಿ। ಲೇಸು ಜೋತಿಸೆ ನಾಮ ವಿಜಯ ವಿಠ್ಠಲನ್ನ। ದಾಸನಾಗುವನಿಗೆ ಕ್ಲೇಶಬಡಿಸದೆ ವೊಲಿಯನು ॥೪॥

### ಆದಿತಾಳ

ಏನು ಹೀನ ಹಾನಿ ಬರಲು ತಾನಳುಕಿ ಹಿಂದಾಗದಲೆ। ನೀನು ನೀನು ನಿನ್ನದೆಂದು ಮಾನಸ್ಥಾನ ಮೌನಧ್ಯಾನ ಜ್ಞಾನ। ನಾನೀಗ ನಿನ್ನವನೆ

ಎಂದು ಮಾನಾನಂದ ನಾ। ಪ್ರಾಣ ಧಿಟ್ಟ ತ್ರಾಣನಾಗಿ ನೀನೆ ನೀನೆ ನೀನೆ ಎಂದು ಆನಿಗಾನೆ ಪೊಸದಾಡಿ ಏನು ವಿಪರೀತದನ್ನ। ನಾನೆ ನಿನ್ನ **ಬಿಡನೆಂಬೊ ಜಾಣತನ** ವೊಂದಿರಲಿ। ತ್ರಾಣಗೆಡನೆಂದು ಪ್ರಮಾಣನಾಮ ವಿಜಯವಿಠ್ಠಲ ಗೇಣುದೂರ ಪೋಗದಲ್ಲೆ ಪ್ರಾಣಪದಕವಾಗಿಪ್ಪ ॥೫॥

**ಜತೆ**

ಶ್ರಮವೇನು ಬಂದರೆ ಬಿಡೆನೆಂಬೊದಾಸಗೆ ।
ಯಮ ನಾಮ ವಿಜಯ ವಿಠ್ಠಲನು ತೆತ್ತಿಗನೊ ॥೬॥

❖ ❖ ❖

## ಸುಳಾದಿ-೮

ಹರಿಯೆ ಮುಖ್ಯ ಕರ್ತೃನು ಸರ್ವೋತ್ತಮನೆಂಬ ತಿಳುವಳಿಕೆಯಿಂದ ಹರಿಯ ದಾಸ್ಯಭಾವವೊಹಿಸೆ ಸಕಲ ದೇವತೆಗಳು ಮನ್ನಿಸುವರು.

**ರಾಗ- ಭೈರವಿ ತಾಳ ಧ್ರುವ**

ನೀನಾಳುವ ಬಂಟರ ಕಣ್ಣೆತ್ತಿ ನೋಡಿ ಬದುಕಿ। ಬಾಳುವ ದುಷ್ಟದೇವತೆಗಳುಂಟೆ?। ತ್ರಿಲೋಚನಾದಿಗಳು ನಿನ್ನವರೆಂದಡೆ। ಮೇಲಾಗಿ ಕಾವುತಿಪ್ಪರು ಭೀತಿ ತಿಳಿದು। ಪೇಳಲೇನಯ್ಯಾ ಕಟ್ಟಾಳೆ ಎಣಿಸುತ್ತ। ಕೇಳುತ್ತ ಕೇವಲ ಬೆರಗಾಹರೋ। ಏಳೇಳು ಲೋಕವನ್ನು ಆಳುವ ಸಮರ್ಥರು। ಶ್ರೀಲೋಲ ನಿನ್ನ ದಾಸರೆಂದರಾಗೆ ಪಾಲಿಸುತಿಪ್ಪರು। ಎಲ್ಲೆಲ್ಲಿ ಚರಿಸಿದರು ವಾಲಾಯ ಬೆನ್ನ ಬಿಡದೆ ನಿತ್ಯ। ಕೀಳು ದೈವಂಗಳ ಭೀತಿಗಂಜುವನಾರು। ಏಳಲ ವಲ್ಲದೆ ನಿನ್ನವರಿಗೆ ಊಳಿಗವೆಂದರೆ ಮೊಂದಿಮಾಳ್ಪ। ಊಳಿಗವಲ್ಲದೆ ಮತ್ತಾವದೈ। ತೇಲಿಸಬೇಕಾದರು ಈಸಗಾಯಿಯಲ್ಲದೆ। ತೇಲಿಸುವದೇ ಕಲ್ಲು ಕಟ್ಟಿಕೊಳ್ಳಲು। ಬಾಲಕ್ರೀಡೆಯಾಡುವ ವಿಜಯ ವಿಠ್ಠಲ ನಿನ್ನ। ಪೋಲುವ ದೈವಕಾಣೆ ಪೊಡವಿಯೊಳಗೆ ॥೧॥

### ಮಟ್ಟತಾಳ

ಪೃಥಿವಿ ಪಾಲನ ಪುತ್ರ ಶತಧಡ್ಡನಾದರು। ಪ್ರತಿದಿನದಲ್ಲಿ ಪಂಡಿತ ಪಾಮರರು। ಅತಿಶಯವಾಗಿ ಅಂಜುತಲಿಪ್ಪರು ಕೆಲವು। ಸ್ತುತಿಸುವರೂ ಕೆಲವು ಗತಿದಾತ ಲಕ್ಷುಮಿ। ಪತಿನಿನ್ನ ಪಾದವ ನುತಿಸುವ ಮಾನವನು। ಚತುರನಾಗಲಿ ಅಚತುರನಾಗಲಿ ಅವನ। ಹಿತದೊಳಗೆ ದೇವತೆಗಳು ಇದ್ದು ಸಂ। ತತ ಕೊಂಡಾಡುವರು ಖತಿಗೊಳಿಸುವ ದುರುಳ। ತತಿಗಳು ಇವನ ಕಾಣುತಲೆ ಪಲಾಯನ ಪ್ರತಿ। ಮಾತಾಡದಲೆ ಯತಿಗಳಮನೋಹರವಿಜಯ ವಿಠ್ಠಲ ನಿನಗೆ। ಸುತರೆಂಬರು ಭಕುತ ಜನವಲ್ಲದೆ ಇತರಾದಿಗಳಾರು ॥೨॥

### ತಾಳ ತ್ರಿವಿಡಿ

ನಡಿವದು ನುಡಿವದು ಕೊಡುವದು ಕೇಳುವದು। ಹಿಡಿವದು ಬಿಡುವದು ಇಡುವದು ತಡವದು। ಕೊಡುವದು ತೊಡುವದು ಕೆಡುವದು ಉಳಿವದು। ಅಡಿಯಿಟ್ಟು ಮತ್ತಡಿತೆಗೆದು ಮುಂದಿಡುವದು। ಬಡತನ ಭಾಗ್ಯವು ಕಡು ದುಃಖ ಸುಖಂಗಳು। ಎಡಿಗಡಿಗೆ ನಾನು ಪಡದಕಾರಣಗಳು ಕಡಲ ಥೆರೆ ಒಡಗೂಡಿ ಬರುತಿಪ್ಪ ಸಡಗರವೆಲ್ಲವು। ಒಡಿಯಾ ನಿನ್ನಾಧೀನ ಉಡಿಯಲ್ಲಿ ಶಿಶುವಿನ। ಕೆಡಹಿ ಕಟ್ಟಿಕೊಂಡು ಪಡದ ಜನನಿ ಸಾಕು। ತ್ತಡಿಗಡಿಗೆ ನಸನಗುವಂತೆ। ಜಡಮತಿಹರ ನಮ್ಮ ವಿಜಯ ವಿಠ್ಠಲ ನೀನೆ। ಧೃಡ ಭಕುತರಿಗೆ ಬಿಡದೆ ಲಾಲಿಸಿ ಪಾಲಿಪೆ ॥೩॥

### ಅಟ್ಟತಾಳ

ಮನೆಯ ಕಟ್ಟಿಸಲಿಲ್ಲ ಮಾಳಿಗೆ ತೊಯಿಸಲಿಲ್ಲ। ಹಣ ತರಿಸಲಿಲ್ಲ ಉಪವಾಸವಿಡಲಿಲ್ಲ। ಧನಿಕನೆನಿಸಲ್ಲಾ ಬಡವನ್ನ ಮಾಡಲಿಲ್ಲಾ। ವನಜನಾಭನೆ ನಿನ್ನ ನೆನದ ಭಕ್ತರಿಗೆ। ಅಣುಮಾತ್ರ ಪ್ರಯಾಸವನೆ ತಂದುಕೊಡದಲೆ। ಅನುದಿನ ಸಲಹುವ ಅನಿಮಿತ್ಯ ಬಂಧು। ಮನಮೆಚ್ಚ ಫಲವೀವ ವಿಜಯ ವಿಠ್ಠಲ ತನ್ನ ಕನಸಿಲಿ ಕೊಂಡಾಡೆ ಮನಸಿಲಿ ನಿಲುವ ॥೪॥

### ಆದಿತಾಳ

ಸ್ವಾತಂತ್ರ ನಮ್ಮಸ್ವಾಮಿ ಮತ್ತಾವನಾದರುಂಟೆ। ಈತನ ಸೇವಕರಾಗಿ ಪಾತಕ ಕಳಕೊಳ್ಳಿ। ಯಾತಕೆ ಸಂಶಯ ಮಾಡುವದೇಸಲ್ಲ। ಭೀತಿ ನಿಮಗೆ ಇಲ್ಲ ಭೂತಳದೊಳಗೆಲ್ಲ। ಪೀತಾಂಬರ ಧರ ವಿಜಯ ವಿಠ್ಠಲರೇಯನ ದೂತನಾದವಂಗೆ ದುಷ್ಕರ್ಮನಿಲ್ಲೋ(ಲ್ಲ) ವೆ ನೋಡಾ ॥೫॥

### ಜತೆ

ಧೊರೆ ಎಂದರೆ ನಮ್ಮ ಸಿರಿ ಅರಸನೆ ಧೊರೆ
ದೊರಕುವಂತೆ ಭಜಿಸಿ ವಿಜಯ ವಿಠ್ಠಲನ ಪಾದಾ ॥೬॥



## ಸುಳಾದಿ-೬

ದಾಸ್ಯಭಾವವೆ ಸಾಧನಕ್ಕೆ ಮುಖ್ಯವಾದುದು. ಕಾಮಾದಿಗಳ ಮೆಟ್ಟಿ
ಹರಿದಾಸನಾಗು ಲೇಶ ದುಃಖಬಾರದು. ಮಹದಾನಂದ ಪ್ರಾಪ್ತಿ

### ರಾಗ- ಸಾವೇರಿ ತಾಳ ಝಂಪಿ

ಶ್ರೀಚರಣವರ್ಚಿಸುವೆ ವಾಚಾಮಗೋಚರನಿ। ಶಾಚಯ ದಹನ ಖೇಚರೇಶ। ಲೋಚನಾಯುಗಳಕೆ ಗೋಚರನಾಗದೆ। ಸೂಚಿಸು ಮನಸಿಗಾ ಲೋಚನಿಯಾ। ಯಾಚನವಿದೆ ಬೇಕು ಊಚ ಪದವಿಯನೊಲ್ಲೆ। ಯಾಚನಾ ಗೊಳಿಸದಿರು ನೀಚ ನರನ। ಭೂ ಚೋರಹರ ವಿಜಯವಿಠ್ಠಲ ಸರಸಿಜ ಲೋಚನ ಪಾಪ ವಿಮೋಚನನೆ ॥೧॥

### ಮಟ್ಟತಾಳ

ಕಾವಳ ಉಳ್ಳಗಲ ದೀವಿಗೆ ಪೆಚ್ಚಿಸಿದ। ಈ ವಸುಧಿಯೊಳಗೆ ಆವನಾದರು ಉಂಟೆ। ಆವಾವ ಜನನದ ಆವಾವ ಕರ್ಮದ। ಆವಳಿಗಳು

ಇರಲು ಸಾವಿರ ಬಗೆಯಿಂದ। ದೇವ ನಿನ್ನಯ ಚರಣ ಸೇವಿಯನು ಒಮ್ಮೆ। ಸೇವಿಸಲು ಪಾಪ ಉಳಿಯವೊ ಕಾಣೊ। ದಿವಸ್ಪ್ರಶ (ದಿವಸ್ಪತಿ) ನಾಮಾ ವಿಜಯ ವಿಠ್ಠಲರೇಯ। ದೀವಿಗಿ ಸ್ವಲ್ಪಕ್ಕೆ ಕಾವಳ ನಿಲುವದೇ ॥೨॥

### ತಾಳ ರೂಪಕ

ಒಂದೊಂದು ಜನನದಲಿ ಒಂದೊಂದು ಪಾಪಗಳು। ಬಂದು ಪೊಂದಿದವೆಲ್ಲ ಗಣನೆ ಮಾಡೆ। ಎಂದಿಗೆ ಸವಿಯದ ಅಂಧಕ ಮರೆವದೇ। ನೆಂದು ಪೇಳಲಿ ಎನ್ನ ಕುಂದುಗಳ। ಮಂದಿರದೊಳಗೆಲ್ಲ ಅಂಧಕಾರವೆ ತುಂಬಿ ಒಂದೊಂದು ಮೂಲಿಗೆ ಒಂದೊಂದು ದೀಪವ। ತಂದಿಡುವರೆ ಮುಕುಂದ ವಿಜಯ ವಿಠ್ಠಲಾ। ದ್ವಂದ್ವ ಪಾಪಕೆ ನಾಮ ಒಂದೆ ಸಾಲದೆ ದೇವ ॥೩॥

### ಧ್ರುವತಾಳ

ಜನಿಸಬೇಕಾದರೆ ಜನಿಸಬೇಕಯ್ಯಾ ಪಂ। ಚಾನನ ಗರ್ಭದಲ್ಲಿ ಬಂದು ಜನಿತವಾಗಿ। ವನದೊಳು ತಿರುಗುವ ಘನಗಜಕುಂಭಸ್ಥಳ। ವನು ಸೀಳಿ ಎದುರಿಲ್ಲೆನುತ ಚರಿಸಿದಂತೆ। ಮನೊ ವಾಚಾದಲ್ಲಿ ದಾಸತನ ಪಡಿವೆನೆಂಬುವ ವನಜ ನಾಭನೆ ನಿನ್ನ ವೊಲಿಸಿಕೊಂಡು। ಘನ ಮಾಯವನು ಹಿಂದನು ಮಾಡಿ ಕಾಮ ಕ್ರೋಧ। ವನು ಸೀಳಿ ಮೃಗನಂತೆ ತನುವಿನೊಳಿರಬೇಕು। ನೆನೆವರ ಪರಿಪಾಲ ವಿಜಯ ವಿಠ್ಠಲ ನಿನ್ನ। ಅನುಸರಿಸಿ ಜ್ಞಾನ ತನುಜೋತಿ ಪಡಿಯಬೇಕು ॥೪॥

### ತಾಳ ತ್ರಿವಿಡಿ

ದಾಸನಾದರೆ ನಿನ್ನ ದಾಸನಾಗಲಿ ಬೇಕು। ಏಸೇಸು ಜನನ ಸಂಪಾದಿಸಿಕೊಂಡಾದರು। ಮೋಸ ಪೋಗದೆ ದುರವಾಸನಿ ಗೆರಗದೆ। ಸಾಸಿರ ದೈವಗಳ ಸೇರದೆ ಬಯಲಾಸಿಗೆ ಮನವುಬ್ಬಿ। ಹ್ರಾಸನಾಗದೆ ಪುಣ್ಯ

ರಾಶಿಗಳಳಿಯದೆ। ಲೇಸು ಭಕುತಿಯಲ್ಲಿ ಈಶಗಿರೀಶನೆ ವಿಜಯ ವಿಠ್ಠಲ ನಿನ್ನ। ದಾಸನಾದರೆ ದುಃಖ ಲೇಶವಾದರು ಇಲ್ಲ ॥೫॥

### ಅಟ್ಟತಾಳ

ನಿನ್ನಯ ಮೂರ್ತಿಯ ನೋಡುವದು ಒಂದಾನಂದ। ನಿನ್ನ ಕೀರುತಿ ಕೇಳುವದು ಒಂದಾನಂದ। ನಿನ್ನ ವಾರುತಿ ಕೇಳವದು ಒಂದಾನಂದ। ನಿನ್ನ ವಾರುತಿಯ ಪೇಳುವದು ಒಂದಾನಂದ। ನಿನ್ನ ಆರುತಿಯ ಕೊಂಬುವದು ಒಂದಾನಂದ। ನಿನ್ನ ಚರಿತೆಯ ಆಡುವದು ಒಂದಾನಂದ। ನಿನ್ನವನಾಗಿ ಮೆರೆವದು ಒಂದಾನಂದ। ಅನಂತವತಾರ ವಿಜಯ ವಿಠ್ಠಲರೇಯ। ನಿನ್ನ ಪಾದದಲಿ ಸೇರುವದು ಒಂದಾನಂದ ॥೬॥

### ಆದಿತಾಳ

ಒಳಗೆ ಬಲು ತುಂಬಿದ ಕತ್ತಲೆಯೆಂಬ ಅಜ್ಞಾನ। ಕಳಿಯದಿರು ಕಳಿಯಾದಿರು ನಿಲವಾಗಿದ್ದರೆ ಇರಲಿ। ಕಲ ಕಾಲಾ ನಾನದಕೆ ಅಳಿಕಿ ಅಂಜುವನಲ್ಲಾ। ಚಲುವ ದೇವನೆ ನಿನ್ನ ಪೊಳೆವ ಪಾದದ ನಖ। ಬೆಳಗು ಎನ್ನೊಳಗೊಮ್ಮೆ ಪೊಳೆದ ತರುವಾಯ। ಬಲವಂತವಾದ ಕತ್ತಲಿ ಎಂಬೊ ಅಜ್ಞಾನ। ಉಳಿವದೇನಯ್ಯಾ ಲೇಶ ಒಳಗೆ ಇದ್ದು ತೊಲಗದೆ। ಬಲುದೈವಾ ವೃಷಭಾಕ್ಷ ವಿಜಯವಿಠ್ಠಲ ನಿನ್ನ ಬೆಳಗು ತೋರಿಗೊಡಲು ಕತ್ತಲೆ ತಾನೆ ಓಡುವದೋ ॥೭॥

### ಜತೆ

ಕ್ಷಣ ಒಂದು ಬದುಕಿದರು ನಿನ್ನ ದಾಸನೆನಿಸಿ ।
ತನುವ ಧರಿಸುವೆನು ಭರ್ಗ ವಿಜಯವಿಠ್ಠಲಾ ॥೮॥



## ಸುಳಾದಿ-೧೦

ದಾಸ್ಯಭಾವದಿಂದ ಸರ್ವದಾ ಹರಿಯನ್ನೆ ಭಜಿಸು ಹರಿ ಸಂಗಡಿಗನಾಗಿ ರಕ್ಷಿಸುವ

### ರಾಗ- ಭೈರವಿ ಧ್ರುವ ತಾಳ

ನಡಗುವದ್ಯಾಕೆ ಮನವೆ ನಡೆನುಡತಿಗೆ ನೀನು। ಒಡೆಯ ರಂಗಯ್ಯ ಬೆಂಬಿಡದಲೆ ಕಾಯುತಿಪ್ಪ। ಅಡಿಗಡಿಗೆ ಶ್ರೀಹರಿ ವೊಡನೆ ಇರುತಲಿರೆ। ಧೃಡ ಸಾಲದೆಂದು ಕೆಂಗೆಡುವ ಬಗೆಯಾವದು। ಹಡಗ ವಾರಿಧಿ ಮಧ್ಯ ನಡಿಸುವ ಮಹ ಚತುರ। ಕೊಡಲು ಅಭಯ ಭಯಬಡುವ ನಿನ್ನಾವದು। ಅಡಿಶಿ ಮೊಕ್ಕಪಮೃತ್ಯು ಬಿಡಿಸುವನನುಗಾಲ। ಪಡೆಗಾಣೆ ನೀತನ ಒಡೆತನಕ್ಕಾವಲ್ಲಿ। ಮಡದಿ ಮಕ್ಕಳು ಸರ್ವ ಒಡಿವೆ ವಸ್ತಕೆ-ಮೋಹ। ವಿಡಿಯದೆ ರಂಗನ್ನಪಡಿ ತೊತ್ತುಗಳು ಎನ್ನು। ಬಿಡಿ ಬೀಸದಲೆ ಕರಪಿಡಿದು ನೀನುಳ್ಳನಕ। ತಡಿಯದೆ ಪಾಲಿಸುವ ಒಡಿಯ ರಂಗನ್ನಪಾದ ನಂಬು। ಸಡಗರ ದೈವವೆ ವಿಜಯವಿಠ್ಠಲ ನಿರುತಿರೆ। ಧೃಡ ಗುಂದದಿರು ನಿನ್ನ ನುಡಿ ಸಲ್ಲಿಸಿ ಕಾಯ್ವಾ ॥೧॥

### ಮಟ್ಟತಾಳ

ನರಹರಿ ದುರಿತಾರಿ ಮುರನರಕ ವೈರಿ। ಸುರರಿಗೆ ಬಲು ಮೀರಿ ಇರುತಿಪ್ಪ ಮಹಾಶೌರಿ। ಪರಮ ಮಂಗಳದಾರಿ ಇರುಳು ಹಗಲು ತೋರಿ। ಪೊರೆವನು ಶ್ರೀನಾರಿಯರಸನಂಘ್ರಿಯ ಸಾರಿ। ಮರಿಯದೆ ಪರಿಪರಿ ಪುರುಷಾರ್ಥ ಕೋರಿ। ಚರಿಸು ಮಹಿಮೆಯ ಬೀರಿ ದುರಿತ ರಾಸಿಯಹಾರಿ। ಪರಿತೋಷವ ಸೇರಿ ನಿರುತರ ಉಪಕಾರಿ ವಿಜಯವಿಠ್ಠಲಹರಿ। ಚರಣಾಂಬುಜವಾರಿ ಧರಿಸೆ ಮುಟ್ಟವು ಮಾರಿ ॥೨॥

### ತ್ರಿವಿಡಿತಾಳ

ಪತಿಯ ತೊರೆದು ನಾರಿಸುತರ ಬಯಸಿ ದೇ। ವತಿಗಳರ್ಚಿಸಿದಂತೆ ಪ್ರತಿದಿನದಲಿ ನೀನು। ಇತರ ಸಂಶಯದಲ್ಲಿ ಕ್ಷಿತಿಯೊಳು ಇದ್ದು ಶ್ರೀ। ಪತಿಯ ಪಾದಕೆ ನಮಿತನಾಗದೆ ಮತಿಮಂದದಲಿ ಕಾಲೋ। ಚಿತ ಪೋಗಾಡುವ ತೆರದಿ ಹಿತವೀಯದವರನ್ನುತಿಸಲಾಗೆ। ಗತಿಗೆ ಪಥವಕಾಣೆ ಶತಕಲ್ಪಕ್ಕಾದರು। ಅತಿಶಯವಿಲ್ಲ ಸಂತತ ಮನಸೆ। ಪತಿತ ಪಾವನ ಕಾಯ ವಿಜಯವಿಠ್ಠಲ ನಿತ್ಯ। ಗತಿ ಎನ್ನೆ ನಿನ್ನ ಸಂತತಿಗೆಲ್ಲ ಗತಿವಕ್ಕು ॥೩॥

### ಅಟ್ಟತಾಳ

ನಡಗುವದ್ಯಾತಕೊ ಎಲೊ ಮನವೆ ನಡಗುವದ್ಯಾತಕೊ। ಕಡಲ ಶಯನನ ನಾಮ ಬಿಡದ್ವಜ್ರಪಂಜರ ನಡಗುವದ್ಯಾತಕೆ। ತೊಡವಿತ್ತು ನಿನ್ನ ಸಂಗಡಲೆ ತಿರುಗುತಿಪ್ಪ। ಕೊಡಗಯ್ಯ ಕಾರುಣ್ಯನಿಧಿ ಪೊಲಿದಿರೆಲಿಕ್ಕೆ। ನಡಗುವದ್ಯಾಕೆ ಬಡವನಲ್ಲ ನಮ್ಮ ವಿಜಯವಿಠ್ಠಲ ಧೊರೆ। ಕುಡಿ ಪಲ್ಲವಿಸಿದಂತೆ ತಡಿಯದೆ ಬೆಳಸುವ ॥೪॥

### ಆದಿತಾಳ

ಹರಿ ಇತ್ತದು ಸರ್ವ ಹರಿದಾಸರು ಎಂದು। ಅರೆ ಮರೆ ಇಲ್ಲದೆ ಹರಿಯಾಧೀನವೆ ಎನಲು। ಹರಿ ನಿನ್ನವರ ಪರಿಪೂರ್ಣಾಯುರಮಾಡಿ। ಪೊರೆವನು ಪೊಂದಲಿಟ್ಟು ಪರಿಪರಿ ವಿಧದಲ್ಲಿ। ಹರುಷ ವೀವುತ್ತ ತನ್ನ ಶರಣರಮಾಡಿ ಭಕ್ತಿ। ಪರಮ ಜ್ಞಾನದಿಂದಾದರದಲಿ ರಕ್ಷಿಸುವ। ಸರಸ ಮೂರುತಿದೇವಾ ವಿಜಯವಿಠ್ಠಲನಂಘ್ರಿ। ನೆರೆನಂಬಿದವಗೆ ಉಗುರು ಮಾಸದು ಕಾಣೊ ॥೫॥

### ಜತೆ

ಫಣಿಶಾಯಿ ಸರ್ವದ ಹೊಣೆಆಗಿರಲಿಕ್ಕೆ।
ಅನುಮಾನ ಬಿಡುವದು ವಿಜಯ ವಿಠ್ಠಲನೊಲಿಸು ॥೬॥



## ಸುಳಾದಿ-೧೧

ಶ್ರೀ ಹರಿಕರ್ತೃತ್ವಾನು ಸಂಧಾನದಿಂ ಭಾಗವತ ಧರ್ಮದಿಂ ಭಾಗೀರಥಿ ಸ್ನಾನ ಮಾಡಿ ಯೋಗಿಗಳ ಅರ್ಚಿಸಿ ತತ್ವಸಾರ ಬುತ್ತಿಯನ್ನು ಕಟ್ಟಿ ಮನೊ ನೈರ್ಮಲ್ಯ ಸ್ಥಾಸ್ಥ್ಯದಿಂ ಶ್ರೀಹರಿಕರುಣಾ ಕವಚ ತೊಡು

### ರಾಗ- ಕಲ್ಯಾಣಿ ತಾಳ ಧ್ರುವ

ಹರಿ ಪರಮ ಪುರುಷಾ ಇಂದಿರಾ ದೇವಿಅಂತುರಸ। ಪರಿಪೂರ್ಣಾವತಾರ ಪಾಪವಿದೂರ। ನಿರುತ ಸಾಕಾರ ಸದ್ಗುಣ ಪಾರಾವಾರ। ಚರಿತವ ಪ್ರಾಕೃತ ಶರೀರಲಂಕೃತ। ಜರ ಜಡ ದುರಿತ ಜನನ ಮರಣ ರಹಿತ। ಸುರರಿಗೆ ದಾತಾರ ಆಗಮ ಗೋಚರ। ಪರಶಕ್ತಿರಾನಂತ ಗುಣ ಪರಮಶಾಂತ। ಸರುವೋತ್ತಮ ಹರಿ ಎಂದು ಸಾರಿಗೆ ಸಾರಿ। ಕರದು ಪಾವನನಾಗು ಕರ್ಮವನ್ನು ನೀಗು। ಅರೆ ಮರೆ (ನೀಗು) ಬಿಡು ಕಿಂಕರನಾಗಿ ನೋಡು ದಾ। ಸರ ದಾಸನಾಗು ನಿನ್ನ ಶಿರವನ್ನು ಬಾಗು। ಪರಮೇಷ್ಠಿ ನಾಮ ಶಿರಿ ವಿಜಯವಿಠ್ಠಲ ಕರುಣಿ। ಮರಿಯದೆ ಸ್ಮರಿಸಲು ನೆರವಾಗಿ ಬರುವ ॥೧॥

### ತಾಳ ಮಟ್ಟ

ಮಂಧರ ಧರ ಗೋವಿಂದ ಮುಕುಂದ। ಚಂದಿರವದನ ವೈಕುಂಠವಾಸ। ನಂದ ನಂದನ ಉಪೇಂದ್ರ ವಾಮನ್ನ। ಶಿಂಧು ಶಯನ ಎನ್ನ ವಿಜಯವಿಠ್ಠಲ। ಬಂಧು ಎಂದೆನಲು ಬಂದೀಗ ನಿಲುವ। ಎಂದೆಂದಿಗೆ ನೀ ವಂದಿಸಿ ಬೇಡೊ ॥೨॥

### ತಾಳ ತ್ರಿವಿಡಿ

ಕೇಶವ ಎನ್ನು ನಾರಾಯಣ ಎನ್ನು। ಕೇಸಿ ಮರ್ಧನ ನರಕೇಸರಿ ಎನ್ನು। ವಾಸುದೇವ ಎನ್ನು ವಾಸುದೇವ ಎನ್ನು। ಈಶ ವಂದಿತ

ಕಾಶಿವಾಸನೆನ್ನು। ದೋಷರಾಶಿ ಗಿರಿಗೆ ಕುಲಿಶ ಎನ್ನಿರೊ। ಮೀಸಲ ಪದವೀಯ ನೀವನೆನ್ನು। ಶಾಶ್ವಿತ ವಿಜಯ ವಿಜಯ ವಿಠ್ಠಲನೆ ದೈವವೆನ್ನು। ನೀ ಸುಖಿಯಾಗಿ ನಿಷ್ಕಾಮವ ಬಯಸೂ ॥೩॥

### ತಾಳ ಅಟ್ಟ

ಭಾಗವತನಾಗು ಭಾಗೀರಥಿಗೆ ಪೋಗು। ಸಾಗರವನು ಮಿಂದು ಕೃತಾರ್ಥನೆಂದು। ಯೋಗಿಗಳರ್ಚಿಸು ಯತಾರ್ಥಭಾವಿಸು। ಭೋಗಾನುಸಾರದಿ ಭೋಗದೊಳು ಪೊಂದಿ। ಲೋಗರಿಗೆ ಶಿರವಾಗಿ ಬೇಡದಿರೂ। ವಾಗ್ಮಿನೆ ವಿಜಯ ವಿಠ್ಠಲನ್ನ ನಂಬಲು। 'ಯೋಗಕ್ಷೇಮ ವಹಾಮ್ಯಹಂ' ಎಂಬ ಮಾತಿಲಿ। ವೇಗದಿಂದಲಿ ಬಂದು ಭಾರವಹಿಸು ॥೪॥

### ತಾಳ ಆದಿ

ತತ್ವಸಾರದ ಬುತ್ತಿಯ ಕಟ್ಟು। ಉತ್ತಮ ಮಾರ್ಗದ ಸೋಪಾನ ಮೆಟ್ಟು। ಮಿಥ್ಯಾಚಾರದ ವಚನವ ಬಿಟ್ಟು। ಹತ್ತಿದ ದುರಿತದ ಭಯಗಳ ಕುಟ್ಟು। ಸತ್ಯವಿಜಯ ವಿಠ್ಠಲನ್ನ ಪಾದ। ಚಿತ್ತ ಮದ್ಯದಲಿ ಚನ್ನಾಗಿಇಟ್ಟು ॥೫॥

### ಜತೆ

ಬಿಡು ಬಿಡು ಹಲವಂಗ ಆವಾವ ಕಾಲಕ್ಕೆ ।
ತೊಡು ತೊಡು ತೊಡು ವಿಜಯ ವಿಠ್ಠಲನ ಕರುಣಕವಚ ॥೬॥



## ಸುಳಾದಿ-೧೨

ಹರಿದಾಸ್ಯ ಮುಖ್ಯ ಲಕ್ಷಣ ತಾರತಮ್ಯ ಪಂಚಭೇದ ಜ್ಞಾನ ಸಕಲ ವಸ್ತುಗಳಲ್ಲಿ
೨೪ ತತ್ವ ತದಭಿಮಾನಿ ದೇವತೆಗಳು ಶ್ರೀಹರಿಕರ್ತೃತ್ವ

### ರಾಗ ಕಾಂಬೋಧಿ ತಾಳ ಧ್ರುವ

ಸಾಧನವೆಂಬೊದಿದೆ ಸಕಲ ಕಾಲದಲ್ಲಿ। ಆದರದಿಂದಲೆ ಕೇಳೊ ಎಲೊ ಜೀವವೆ। ಭೂದೇವ ದೇಹವಿನ್ನು ಬಾಹೋದೆದುರ್ಲಭ। ಮೇದಿನಿಯಲ್ಲಿ ಪುಟ್ಟಿ ಬಂದು ಪೂರ್ಣ। ಬೋಧರ ಮತದಲ್ಲಿ ಪೊಂದುವದೆ ನಿರ್ಜ। ರಾದಿಗಳಿಗೆ ಬಲು ದೂರ ಕಾಣೊ। ವೇದ ಭಾಗವತ ರಾಮಾಯಣ ಭಾರತ। ಓದುವ ಪುರಾಣ ಮಿಕ್ಕಾದದಲ್ಲಿ ಪಂಚ ಭೇದ ಮಾರ್ಗವೆ ತಿಳಿದು ಕಂಡ ಮತಿಗೊಡದೆ। ಸಾಧಿಸುವ ಹರಿಯ ಪಾದ ಧೃಡತರದಲ್ಲಿ। ಸಾಧನ ನೋಡಿದರು ಸುಲಭದೊಳುಂಟು ಅ। ಗಾಧವಿಲ್ಲವೊ ಕಾಣೊ ತಿಳಿದ ಮೇಲೆ। ಪೋದ ದಿನಗಳಲ್ಲಿ ಮಾಡಿದ ಕರ್ಮಪುಣ್ಯ। ವಾದದ್ದು ಎನ್ನು ನಿಶ್ಚಲ ಗುಣದಲ್ಲಿ। ಖೇದವ ಬಡದಿರು ವೈಕುಂಠನಗರಿಗೆ। ಹಾದಿಯಾಗುವದೊ ಇಲ್ಲೆಂದು ನೀನು। ಆದಿಯಲ್ಲಿ ಹರಿ ಮಾಡಿದ ಕ್ಲಪ್ತಿಗೆ। ಬಾಧೆ ಬಾರದೆಂದು ಕಾಣೊ ಏನಾದರು। ನೀ ಧೈರ್ಯದಲ್ಲಿರು ಮಧ್ವದಾಸರು ನಿತ್ಯ। ವಾದ ತಮಸ್ಸಿನಲ್ಲಿಗೆ ದೂರರೆಂದೂ। ಕ್ರೋಧರಹಿತ ನಮ್ಮ ವಿಜಯ ವಿಠ್ಠಲರೇಯನ। ಪಾದವೇ ಕೇವಲ ನಂಬು ನಂಬು ಬಿಡದೆ ॥೧॥

### ಮಟ್ಟತಾಳ

ಭಗವನ್ನಿಷ್ಠೆಯಲ್ಲಿ ಭಾಗ್ಯವಂತನಾಗು। ಸಿಗದಲೆ ಸಂಚರಿಸು ಕಾಮಾದಿ ಬಲಿಯಲ್ಲಿ। ಅಗಲದಿರು ನೀನು ಉತ್ತಮ ಗುಣದಿಂದ। ಹಗಲಿರಳು ಹರಿಯ ವ್ಯಾಪ್ತಿ ಬಗೆಯ ನೆನಸು। ಮಿಗಿಲಾಗಿ ವರ್ಣೋಚಿತ ಕರ್ಮವ ಚಿಂತಿಸು। ಜಿಗದಾಡಿದರೇನು ಕುಣಿದಾಡಿದರೇನು। ತ್ರಿಗುಣವ ಮನೆ ಮಾಡಿ ಅಂತರ್ಯಾಮಿಯಲ್ಲಿ। ನಗೆ ಮೊಗ ಉಳ್ಳ ಶ್ರೀಹರಿಮೂರ್ತಿ ಜೀ। ವಿಗಳ ಚೇಷ್ಟೆಗಳೆಲ್ಲ ನಡಿಸುವದಹುದೆಂದು। ಜಗದೊಳಗಾದ್ಯಂತ ಬಗೆಗಳ ಕೃಪೆತಿಳಿದು ದುಗುಡ ಸಂತೋಷವನು ಹಚ್ಚಿಕೊಳ್ಳದಿರು। ಖಗವಾಹನ ನಮ್ಮ ವಿಜಯ ವಿಠ್ಠಲನ್ನ। ಅಗಣಿತ ಸೇವೆಯನು ತಿಳಿದುಕೊಂಡಾಡುವದು ॥೨॥

### ತ್ರಿವಿಡಿ ತಾಳ

ಒಂದು ಪ್ರಕೃತ (ಪ್ರಾಕೃತ) ವಾದ ವಸ್ತುವಿನಲಿ ಸಂ। ಬಂಧವಾಗಿಪ್ಪುದು ಚತುರವಿಂಶತಿ ತತ್ವ ಮಂದಿಗಳು ತಮ್ಮ ಸತಿಯರೊಡನೆ ಬಿಡದೆ ಮುಂದೆ ಈರಾರು ದ್ವಾದಶ ಜಡಗಳು। ಕುಂದದಲಿಪ್ಪವು ಇದೆ ಸಿದ್ಧವೆಂಬೋದು। ನಂದ ಮೂರುತಿ ಲಕುಮಿ ನಾರಾಯಣ। ಒಂದಾಗಿ ಇಪ್ಪರು ಎನೆಂಬೆ ಇದೆ ಗುಣಿಸು। ಎಂದಿಗೆ ನಿನಗೆ ಪಾತಕವಾಗದು। ಕುಂದಣಕ್ಕೆ ಪುಟವೆ ವಿಜಯ ವಿಠ್ಠಲರೇಯನ। ಹೊಂದಿದ ನರರಿಗೆ ಪ್ರಥಕು ಪೂಜೆಗಳುಂಟೆ ॥೩॥

### ಅಟ್ಟತಾಳ

ಅಡಿಗಳಿಡುವದು ಕರವ ಬೀಸುವದು। ನುಡಿವದು ನಾಲಿಗಿಂದಾ ಡೋದು ಓಡೋದು। ಎಡೆಯಲ್ಲಿ ಕುಳಿತು ತುತ್ತು ಎತ್ತಿ ಮೆಲುವೋದು। ಒಡಲ ತೃಪ್ತಿಯಾಗಿ ತೇಗೋದು ನಲಿವದು। ವಡನೆ ಕರ್ಣಗಳಿಂದ ಕೇಳುವ ಸಂಭ್ರಮ। ಕುಡುವ ಉದಕ ಮಿಕ್ಕಾದ ಚೇಷ್ಟೆಗಳೆಲ್ಲ। ಪೊಡವೇಶರಂಗನ ಆರಾಧನೆಯನ್ನು। ಅಡಿಗಡಿಗೆ ಇದೆ ಮರಿಯದೆ ಯೋಚಿಸು। ಬಡವರಾ ಧಾರಕ ವಿಜಯವಿಠ್ಠಲರೇಯ। ಕೆಡಗೊಡ ಸುಕೃತತೋರುವಧಿಕಮಾಡಿ ॥೪॥

### ಆದಿತಾಳ

ಕೊಡಿಸುವ ಬೇಡಿಸುವ ಕೊಡಿಸ ಬೇಡಿಸನು। ಕೊಡಿಸುವ ಬೇಡಿಸನು ಕೊಡಿಸ ಬೇಡಿಸುವ। ಬಡಿವಾರ ದೀನತನ ಧೃಡ ಚಂಚಲ ವೃತ್ತಿ। ನಡುಗುವದು ನಿರ್ಭಯ ತಡೆಯದೆ ಈ ಬಗೆ। ಕಡೆ ಮೊದಲಿಲ್ಲದೆ ಬಿಡದೆ ಧ್ಯಾನಿಸಿದರೆ ಜಡ ಮತಿಗಾದರು ಕಡುಜ್ಞಾನ ಪುಟ್ಟುವದು। ಒಡಿಯ ರಂಗನ ವ್ಯಾಪಾರ ಅಡಿಗಡಿಗಿಪ್ಪದು। ನುಡಿಗೆ ವೊಲಿವ ನಮ್ಮ ವಿಜಯವಿಠ್ಠಲರೇಯ। ಕೊಡನು ತಾಮಸ ಬುದ್ಧಿ ಪಡಕೊಂಡ ಜ್ಞಾನಿಗಳಿಗೆ ॥೫॥

### ಜತೆ

ವಿಧಿ ನಿಷೇಧಗಳೆರಡು ಕರ್ಮಕ್ಕೆ ಪ್ರೇರಕ ।
ವಿಧಿ ಪಿತ ವಿಜಯ ವಿಠ್ಠಲ ನೀನೆ ಸಾಧನಾ ॥೬॥

❖ ❖ ❖

## ಸುಳಾದಿ-೧೩

ಭಾಗವತ ಧರ್ಮ ಪ್ರವೃರ್ತಕ ಮಾರ್ಗದಿಂದಲೆ ಶ್ರೀಹರಿಯ ಪ್ರಸನ್ನತೆ
ಬಿಂಬಾರೋಕ್ಷಕ್ಕೆ ಕಾರಣ

### ರಾಗ- ಬೈರವಿ ಧ್ರುವತಾಳ

ಇಂದಿರಳು ಎನ್ನ ಹೃದಯ ಮಂದಿರದೊಳಗೆ ತಾನೆ। ನಿಂದಿರಗೋಸುಗ ಹರಿ ಇಂದಿರಾ ಸಹಿತ ಬಂದ। ಮುಂದಿರುವ ನೋಡಿ। ಪಾಪ ವೊಂದಿರದಂತೆ ಕಳೆದ। ಹಿಂದಿರವು ನಾನಾಯೋನಿ ಬಂದಿರಲು ತಾನೆ ಅಲ್ಲಿ। ಪೊಂದಿರಗಲಿ (ರಗಲದೆ) ಕಾಯಿದ ಅಂದಿರಾಸಗಳು (ಶಬ್ದಾದಿವಿಷಯ) ಬಾರದಂತೆ। ಚಂದಿರವದನ ವಿಜಯ ವಿಠ್ಠಲ ನಮಗಣ್ಣತ। ಮ್ಮಂದಿರೋಪಾಯದಲ್ಲಿ ಸಂಬಂಧ ರಾಜ್ಯ ರಾಜ್ಯರಲ್ಲಿ ॥೧॥

### ಮಟ್ಟತಾಳ

ಅಂತರಿಯಾಮಿಯಲ್ಲಿ ನಿಂತು ಪೂಜಿಯಗೊಂಬ। ಸಂತತ ಸುಮನಸ ಸಂತತಿಗಳ ಕೈಯ್ಯ। ಚಿಂತಾಮಣಿ ಕಾಣೊ ಚಿಂತಿಸುವ ಜನಕೆ। ದಂತಿವರದ ನಮ್ಮ ವಿಜಯವಿಠ್ಠಲರೇಯಾ। ಕುಂತಿ ನಂದನಗೆ ಎಂತುವೊಲಿದ ನೋಡು ॥೨॥

## ತ್ರಿವಿಡಿ ತಾಳ

ಕಮ್ಮೆಣ್ಣೆ ಕಸ್ತೂರಿ ಪುನಗು ಜವ್ವಾದಿ ಅ। ಗಮ್ಯವಾಗಿದ್ದ ಕರ್ಪೂರ ಪಚ್ಚಗಿಂಧ। ಘಮ್ಮ ಘಮ್ಮ ಎಸೆವ ಅಗರು ಪರಿಮಳ ದ್ರವ್ಯ। ಸುಮ್ಮಾನದಲಿ ಪೊಳೆವ ದೇಹಕ್ಕೆ ಅನುಲೇಪ। ಒಮ್ಮಾಡಿಕೊಂಡಿಪ್ಪ ಪರಮ ಚರಿತ ಚಮ್ಮಳಗಿಯ ಮೆಟ್ಟಿ ವಾರೆ ದುರುಬು ಕಟ್ಟಿ ಆ ಮಹಾ ಕುಸುಮಗಳ ಜಾತಿವಪ್ಪೆ। ಹೆಮ್ಮೆಗಾರನು ತನ್ನ ಬಗಲಲ್ಲಿ ಇಟ್ಟಿದ್ದ। ಹೆಮ್ಮನೆ ಹಾಕಿದ ಕಠಾರಿಯ। ಧುಮ್ಮ ಗೈಸಿ ನಡೆವ ಹೆಜ್ಜೆಗಳ ಶೃಂಗಾರವ। ಉಮ್ಮೆಯರಸು ನೋಡಿ ತುತಿಸುತಿಪ್ಪ। ಹಮ್ಮಿನವರ ಗಂಡ ವಿಜಯ ವಿಠ್ಠಲ ಪರ। ಬೊಮ್ಮ ಬೊಮ್ಮಾಂಡದೊಡಿಯ ನಮ್ಮನೆ ಮನದೈವ ॥೩॥

## ಅಟ್ಟತಾಳ

ವೇದ ಶ್ರುತಿ ಶಾಸ್ತ್ರ ಓದಿದರೇನು। ಸಾಧುಗಳಿಗೆ ಸೋತು ನಡಿಯದನಕ ಶೋಧಿಸಿ ವ್ರತಗಳ ಚರಿಸದರೇನು। ವೇದಾರ್ಥ ಜ್ಞಾನವೆ ಇಲ್ಲದನಕ। ಓದನ ಷಡುರಸ ಉಂಡರೆ ಏನು। ಮಾಧವಗೆ ಅರ್ಪಿಸಿದನ್ನಕ। ಮೇದಿನಿಯಲ್ಲಿ ತಿರುಗಿದರೇನು। ಯಾದವ ಕೃಷ್ಣನ್ನ ನೋಡದನ್ನಕ। ಸಾಧಿಸಿ ತಪವನೆ ಮಾಡಿದರೇನು। ಕ್ರೋಧವ ತೆಗೆದು ಈಡ್ಯಾಡದನಕ। ಶ್ರೀದೇವಿಯರ ಸನ್ನ ನೆನಸಿದರೇನು। ಮೋದ ತೀರ್ಥರಲ್ಲಿ ಕೂಡದನಕ। ನೀಧಾನದಲ್ಲಿ ಈ ಪರಿಯಲ್ಲಿ ನಡೆದರೆ। ವೋದಪಾಥೇಯಾಗುವದು ವೈಕುಂಠಕ್ಕೆ। ಭೂಧರರೂಪ ಶ್ರೀವಿಜಯ ವಿಠ್ಠಲ ಹರಿಯ ಪಾದವೆ ನೆರೆನಂಬು ಪುಣ್ಯವೆ ಉಂಬುವಿ ॥೪॥

## ಆದಿತಾಳ

ನೋಡು ಕಣ್ಣಿಲಿ ಆಡು ಜಿಹ್ವೆಲಿ। ಬೇಡು ಬಾಯಿಲಿ ಮಾಡು ಕೈಯಲಿ ಸೇವೆ ಶ್ರವಣ। ತ್ರಾಡವಾಗಲಿ ಕರ್ನಂಗಳಿಗೆ। ನಾಡೊಳಗೆ ಚರಿಸಿಯಾತ್ರೆಯ। ಮಾಡು ಚರಣದಲಿ ವಾಸನೆ। ಮಾಡು ನಾಸಿಕದಲ್ಲಿ

ನೀಡು ನಮಸ್ಕಾರ ದೇಹದಿ। ಈಡು ಇಲ್ಲದ ಹರಿಯನೆ ಕರದಾಡು ಪ್ರತಿದಿವಸದಲ್ಲಿ। ಕೇಡು ಮನವೆ ನಿನಗೆ ಬಾರದು। ಪಾಡರಿದು ತಿಳಿದು ತಿಳಿಗಾಢ ದೈವ ವಿಜಯ ವಿಠ್ಠಲ। ಕಾಡುವದುರಿತಗಳ ಬಿಡಿಸಿ। ಗಾಢಗತಿಯ ನೀವವೊಲಿದು। ಬಾಡಲೀಯ ಬಂದ ಪುಣ್ಯ ॥೫॥

**ಜತೆ**

ತರ್ಕೈಸಿ ಬಿಡದಿಪ್ಪ ವಿಜಯ ವಿಠ್ಠಲರೇಯನ ।
ಪಕ್ಕೆಯೊಳಗಿರು ನಿನಗಾವ ಭಯವಿಲ್ಲ ॥೬॥

❖ ❖ ❖

## ಸುಳಾದಿ-೧೪

ಶ್ರೀ ಹರಿಯನ್ನು ನಂಬಲು ಸಂಸಾರ ನಿವೃತ್ತಿ.

**ರಾಗ- ಧಾಟಿ ತಾಳ ಧ್ರುವ**

ನಂಬದಿರು ಸಮಸಾರವೆಂಬೊದೆ ಕಾಳಕೂಟ। ದಂಭುಧಿಗೆ ಅತಿ ಮಿಗಿಲು ಹಂಬಲಿಸದಿರು। ಡಿಂಬವು ತ್ರಿವಿಧವೆಂಬೋದು ವೇದಸಿದ್ಧ। ಡಂಭಕ ಮಾಯ ಕದಂಬ ತಿಳಿಯಲೊಶವೆ। ಶಂಬರಾರಿ ಕುಟುಂಬಕೆ ಸಿಲುಕಿ। ಗುಂಭವಾದ ಜ್ಞಾನ ಭಕುತಿಯ ಮರೆದು। ಉಂಬೊ ತಿಂಬದರಲ್ಲಿ ಸಂಭ್ರಮವಾಗಿ ನಲಿವೆ ಕುಂಭಿಣಿಯೊಳು ವಿಷವೆಂಬೊದೆ ಬಯಸುತ। ಅಂಬುಜ ಪಾಣಿ ಸದಾ ವಿಜಯವಿಠ್ಠಲನ ಪಾ। ದಂಬುಜ ನೆನೆಯದೆ ಕುಂಭಿಪಾಕಕ್ಕಿಳಿವೆ ॥೧॥

**ಮಟ್ಟತಾಳ**

ಉಸಗಿನ ಮನೆಮಾಡಿ ಕುಶಿಯಗುದ್ದಿದರದು। ವಸುಧಿಗೆ ಬೀಳದಲೆ ಹಸನಾಗಿ ನಿಲ್ಲುವದೆ। ಅಸುವು ನಿನ್ನದು ಎಂದು ಅಸುರ ವಿಜ್ಞಾನದಲಿ।

ಅಸಜ್ಜನ ನಡತೆಯಲಿ ಕುಶಲದಲ್ಲಿರದಿರೂ। ಅಸುರಾಂತಕ ದಾತ ವಿಜಯವಿಠ್ಠಲ ಹರಿಯಾ। ರಸನೇಂದ್ರಿಯಲಿ ನೆನಸದಿದ್ದಡೆ ಮಾಹಿಷ ಗಮನನು ಖಂಡ್ರಿಸದಿಪ್ಪನೆ ಮರುಳೆ ॥೨॥

**ತ್ರಿವಿಡಿತಾಳ**

ಆದಿಮೂಲ ಮೂರ್ತಿ ನಾರಾಯಣ ಜಗ। ದಾದಿಕರ್ತ ಸಿದ್ಧಿ ಸರ್ವ ಸಮರ್ಥ। ಕ್ರೋಧನಲ್ಲ ದಯಾವಂತನೊಬ್ಬರಿಗಲ್ಲ। ಭೇದವಖಿಳಜೀವಕ ಪಾರ ಮಹಿಮನು। ಸಾಧನವರಿತು ಅವರವರಿಗೆ ಫಲವೀವಾ। ವ್ಯಾದಿಶ ನಾಮರಂಗ (ಪಾಂಗ) ವಿಜಯವಿಠ್ಠಲರೇಯನ। ಆದರಿಸಿ ಸಂಸಾರ ರೋದನ ಗೆಲ್ಲು ॥೩॥

**ಅಟ್ಟತಾಳ**

ಶಾರೀರ ಧಾರಿಯಾದ ಮೇಲೆ ದೋಷ। ಪಾರವಾಗಿ ಒಂದು ತೊಲಗದಲ್ಲಿಪ್ಪವು। ಘೋರ ಕರ್ಮದ ನಿಬಡಿಯಾರಾಧಿಸಲು ಪುಣ್ಯ। ಜ್ಯಾರಿ ಪೋಗುವಾದು ಪ್ರಾವುತವಾಗದೆ। ನಾರಾಯಣನ ಪಾದ ವಾರಿಜ ಮರದರೆ। ತೀರದು ಸಂಸಾರ ಬಂಧನವು। ಕ್ರೂರ ವಿಷಯಂಗಳ ದಾರಿಯ ಮೆಟ್ಟದೆ। ಸೂರೆ ಗೊಡುಮನ ಸದ್ಭಕ್ತಿಗೆ। ಬೀರು ಸ್ವಭುಜನಾಮ ವಿಜಯ ವಿಠ್ಠಲನೆಂದು ಪಾರಾಗು ಸಂಸಾರ ವಾರಿಧಿ ವೇಗ ॥೪॥

**ಆದಿತಾಳ**

ಕಂಡದೇವರಿಗೆ ಬಾಗೆ ಮಂಡೆ ಪರಟಿಗಟ್ಟುವದು। ಪಿಂಡಾಂಡದಲ್ಲಿ ಬಂದು ಭಂಡು ಬಿಳೋದು ತಪ್ಪದು। ತಂಡ ತಂಡದ ಸಂಸಾರ ದಂಡ ಕೊಳದಿ ಬಾಳಬೇಕು। ಮಂಡಲೇಶನಗ್ರೋಧ ವಿಜಯ ವಿಠ್ಠಲರೇಯಗೆ। ದಂಡಾಕಾರವಾಗಿ ನಮಿಸೆ ಹಿಂಡುಪಾಪದಿಂದ ಮುಕ್ತಿ ॥೫॥

**ಜತೆ**

ನಮ್ರ ಭೂತನಾಗೆ ಸಂಸಾರ ಪರಿಸುವಾ ।
ಅಮೃತಾಂಶವೆ ನಾಮ ವಿಜಯ ವಿಠ್ಠಲ ಸ್ವಾಮಿ ॥೬॥

❖ ❖ ❖

## ಸುಳಾದಿ-೧೫

ಕಮಲವು ನೀರಿನಲ್ಲಿದ್ದಂತೆ ಸಂಸಾರದಲ್ಲಿ ನಿರ್ಲಿಪ್ತನಾಗಿ ಇದ್ದು ವೈರಾಗ್ಯ ಭಾಗ್ಯ ತಾಳಬೇಕು

### ರಾಗ- ವರಾಳ ಧ್ರುವತಾಳ

ಇರಬೇಕು ಸಂಸಾರದೊಳಿಲ್ಲಾದಿರಬೇಕು। ತರುಣಿ ಮಕ್ಕಳು ಮನೆ ಧನ ಪಶು ಬಂಧು ಬಳಗ। ಪರಿವಾರದೊಡನೆ ಆಸಕ್ತನಾಗಿ ಮುಳುಗಿ। ಹರಿದ ಕಾಲಕ್ಕು ನಾನಾ ವಿಷಯ ಲಂಪಟದಲ್ಲಿಚರಿಸುತ್ತಿದ್ದರು। ಬಲು ಚತುರವಂತನಾಗಿರೆ। ಇರಳು ಹಗಲು ಉದಾಸೀನನಾಗಿ ನೋಳ್ಪರಿಗೆ। ಸರುವ ಕೋಟಲೆ ಇವನೆಂದೆನಿಸಲಿ ಬೇಕು। ನಿರುತ ಸೌಭಾಗ್ಯ ಬಲುದಾರಿದ್ರ ಬಂದಡರೆ। ಶರಧಿಯೆಂದದಿ ಸುಖ ಪೂರ್ಣನಾಗಲಿಬೇಕು। ಶಿರ ನಯನ ನಾಸಾ ಕರ್ನಾವದನ ಹಸ್ತಾಂಘ್ರಿಮಿಕ್ಕ। ಎರಡು ಕೂಡಿಂದಾಗುವ ಗಾತ್ರದ ವ್ಯಾಪಾರ ಹರಿ ಪ್ರಕೃತಿ ತಾತ್ವಿಕರಲ್ಲೆಲ್ಲಿ ನಿಂದು ನಿಂದು। ಅರಘಳಿಗೆ ತೊಲಗದಲೆ ಮಾಳ್ಪರು ಬಿಡದೆಂದು। ಅರಿದು ಕ್ಷಣ ಕ್ಷಣಕೆ ಹಿಗ್ಗಬೇಕು ತನ್ನೊಳಗೆ। ಪರಮ ಕ್ಲೇಶ ಸಂತೋಷ ಬರಲಾಗಿ ಒಂದೇ ಸಮ। ಹರಿತತ್ಕಾಲಕ್ಕೆ ಸ್ವಯೋಗ್ಯತಾನುಸಾರ ಪರಿಪರಿಕರ್ಮಗಳು ಒಳಗಿದ್ದು ಮಾಡಿಸುವ। ಅರಮರೆತಿಳಿದು ಸಂಶಯ ಬಡಬಾರದು। ನೆರದು ಮಾನವರೊಳು ಕುಳಿತಿದ್ದರು ಮನಸು। ಹರಿಪಾದದಲ್ಲಿ ಇಟ್ಟು ಧೇನಿಸುತ್ತಿರಬೇಕು। ಹೊರಗೆ ನೋಡಿದರು ದುಗ್ಗಾಣಿಗೆ ಸಲ್ಲಾನೆಂದು।

ಪರರಿಂದೆನಿಸಿಕೊಂಡು ನಗಬೇಕು ಪ್ರೀತಿಯಲ್ಲಿ। ಹರಿಗುರುಗಳ ದಾಸರಿಗೆ ದತ್ತಪ್ರಾಣ। ತರತಮ್ಯದಿಂದಲಿ ಎಣಿಪದು ಮನದೊಳಗೆ। ಮರುಳು ಬಂದವನಂತೆ ಸಕಲ ಪುಣ್ಯಭೂಮಿಯ। ಚರಿಸಬೇಕು ತಾನು ನಿಂದಲ್ಲಿ ನಿಂದಿರದೆ। ಹರಿ ಇಚ್ಛೆಯಿಂದ ಬಂದ ಲಾಭಾ ಲಾಭಗಳನುಕರಿಸಾಬೇಕಲ್ಲದೆ ಹತ್ತದೆಂದೆನಸಲ್ಲ। ಹರಿ ಸ್ಮರಣೆಗೆ ವಿಘ್ನವಾಗದಂತೆ ಆತನ್ನ ಕರುಣ ಪಡಿಯುಬೇಕು ಒಂದೆ ಭಕ್ತಿಯುಲ್ಲಿ। ಸುರರಾದಿಗಳ ದೆಸೆಯಿಂದ ಫಲಐದಿದರೂ। ಹರಿ ಪ್ರೇರಣೆಯಲ್ಲದೆ ಸ್ವಾತಂತ್ರ ಒಬ್ಬರಲ್ಲ। ಬರಿದೆ ಆವಾವವರ ಪ್ರೇರಣೆ ಪಾಲಣೆಯು। ಹಿರಿಯರು ನಮಗಿಂದನೀಚರಿಗಹುದೆನ್ನಿ। ಬಿರಿಮಳಿಯೊಳಗೆಹೆಳ್ಳೆ ಸಾಲು ಇಕ್ಕಿದಂತೆ। ಕುರುಹು ನೋಡಲಿ ಬೇಕು ಸಂಸಾರದ ಸ್ಥಿತಿ। ಪರಕೆ ಮತ್ತಾವದೊ ಸಾಹಾಯು ಎಂಬೋವೀವಾ। ಯುರ ವಾಗುವದಲ್ಲದೆ ಫಳಿಸಿದ ಸರ್ವೋಪಾಯ। ಧರಣಿ ವಿಬುಧ ಜನುಮ ಬಯಸೊ ಮತ್ತೆಬಯಸೊ। ಮರುತ ದೇವನ ಮತ ಪೊಂದೊಸತತನಿಂದೂ। ಗುರುಗಳಿಗೆ ಗುರು ನಮ್ಮ ವಿಜಯ ವಿಠ್ಠಲರೇಯನ। ಶರಣರ ಸಂಗದಲ್ಲಿ ಮನದೆಗಿಯದೆ ನಿಲ್ಲು ॥೧॥

## ಮಟ್ಟತಾಳ

ಉಂಡರೆ ಉಣಲಿಲ್ಲ ಉಟ್ಟರೆ ಉಡಲಿಲ್ಲ। ಕೊಂಡರೆ ಕೊಳಲಿಲ್ಲ ಕೊಟ್ಟರೆ ಕೊಡಲಿಲ್ಲ। ಕಂಡರೆ ಕಾಣಲಿಲ್ಲ ಕರೆದರೆ ಕರೆಯಲಿಲ್ಲ। ಹೆಂಡತಿ ಎನಗೇನು ನಾನು ಅವಳಿಗಾರು। ಗಂಡುಗಲಿಯಾರೊ ಗತಿಗೆಡುವನಾರೊ। ಥಂಡ ಥಂಡದ ಮಾತು ಪೇಳಿ ಕೇಳುವನಾರೊ। ಭಂಡು ಸಂಸಾರದೊಳು ಇಟ್ಟು ತಗುವನಾರೊ। ದಂಡನೆ ಮಾಡಿಸುವ ಬಿಡಿಸಿಕೊಂಬುವನ್ಯಾರೊ। ಮಂಡನಾದಿ ವಸ್ತುಕೊಡಿಸಿ ಧರಿಪನಾವ। ಮಂಡಲದೊಳಗಿದ್ದು ಇದೆ ಖಚಿತವು ತಿಳಿದು। ಬೆಂಡು ಮತ್ತೆ ಕಲ್ಲು ತೇಲಿಪ ಮುಳಿಗಿಸುವ। ಪುಂಡರಿಕಾಕ್ಷನ್ನ ಮಹಿಮೆ ಇನಿತೆಂದು। ಕೊಂಡಾಡುತ ಸೊರಗಿ ನಲಿ ನಲಿದು ತಿರುಗಿ। ಕೆಂಡವನೆ ನೋಡಿ ಶಿಶುಭಯ ಬೀಳದಲೆ। ಅಂಡಿಯಲ್ಲಿ

ಪೋಗಿ ತುಡುಕುವಂತೆ ಉ। ದ್ದಂಡ ಭವದಲ್ಲಿ ಭವಣಿಗಳಟ್ಟಿದರು। ಕೆಂಡಕ್ಕೆ ಸಣ್ಣವನು ಭಯ ಬೀಳದಂತಿರೊ। ಹಿಂಡು ದೈವದ ಗಂಡ ವಿಜಯ ವಿಠ್ಠಲರೇಯನ್ನ। ತೋಂಡರ ಬಳಿಯಲ್ಲಿ ತೊಲಗದೆ ಓಲ್ಯಾಡು ॥೨॥

## ತ್ರಿವಿಡಿ ತಾಳ

ಅಂಗಣದೊಳು ಪಕ್ಕಿ ಕುಳಿತು ಹಾರಿದಂತೆ। ಅಂಗಡಿಯ ನೆರಹಿ ತಿರುಗಿ ಜನ ಪೋದಂತೆ। ಮುಂಗುಡಿ ಮಕ್ಕಳು ಮನೆಗಟ್ಟ ಕೆಡಿಸಿದಂತೆ। ಹಿಂಗದರ ವಂಟಿಗೆಯ ಮಂದಿ ಸಾಗಿದಂತೆ। ಸಂಗಾತದವರು ತನ್ನ ಕೂಡಲಿದ್ದರು ಅವರ। ಹಂಗಿಗನಾಗದೆ ಅದರಂತೆ ಗುಣಿಸೋದು। ಮುಂಗಾರಿ ಮಿಂಚಿನಂದದಿ ದೇಶದೊಳಗೆ ನಿ। ಸ್ಸಂಗನಾಗಿ ತಿರುಗಿ ಕಾಲ ಕಳಿಯಬೇಕು। ಬಂಗಾರ ಮೊದಲಾದ ದ್ರವ್ಯಗಳ ಕಂಡರೆ। ಮುಂಗಾಲಲಿ ಒದೆದು ದಾಟಿ ಪೋಗುವದಯ್ಯ। ಹಂಗಿಗನಾಗದಿರು ಪರರ ವಶಕೆ ಸಿಲ್ಕಿ। ಭಂಗವಾದರು ಲೇಶ ಖೇದಬಡದಿರು। ಮಂಗಳಮೂರುತಿ ವಿಜಯ ವಿಠ್ಠಲರೇಯನ। ಸಂಗೀತದಲಿ ಬಾಳೆ ಹರಿದಾಸರ ಪಾದಕೆ ಬೀಳೊ ॥೩॥

## ಅಟ್ಟತಾಳ

ಧರಣಿಯಂತೆ ತಾಳೊ ಮರುತನಂತೆ ಸಂ। ಚರಿಸು ಪಾವಕನಂತೆ ಹೊರಗೆ ತೋರದಲಿರು। ಮರಳಿ ಉದಕದಂತೆ ಹರಿದು ಪೋಗುತಲಿರು। ಇರು ಆಕಾಶದಂತೆ ಸರಿಸದಲ್ಲಿ ದೂರ। ಪರರಾಪೇಕ್ಷಿಯ ಬಿಡು ಪರಲೋಕವ ಬೇಡು। ಪರಮನ್ನ ಕೊಂಡಾಡು ಪರಮಾರ್ಗವ ಬೇಡು। ಪರ ಮತವನೆ ಸುಡು ಪರಮಾತ್ಮನ್ನ ಕಾಡು। ಪರದೈವ ವಿಜಯ ವಿಠ್ಠಲರೇಯನ ಲೀಲೆ। ಸ್ಮರಿಸಿ ಧನ್ಯನಾಗು ದುರಿತವನೀಗು ॥೪॥

## ಆದಿತಾಳ

ಒಂದೆ ಪ್ರಯೋಜನ ಮಾಡಿದರದರೊಳು। ಇಂದಿರಾ ಪತಿ ಉಂಟು ಇಂದಿರೆ ಉಂಟು। ಒಂದೆರಡು ಗುಣ ಉಂಟು ಕಾಲ ಪ್ರಕೃತಿ

ಉಂಟು ವೃಂದಾರಕರುಂಟು ಕ್ರಮಾನು ಸಾರದಿಂದ। ಗಂಧರಸ ರೂಪ ಸ್ಪರ್ಶ ಶಬ್ದ ಉಂಟು ಕುಂದದೆ ನಭವಾಯು ಅನಳಪಾವನಿಲುಂಟು। ಇಂದ್ರಿಯಂಗಳುಂಟು ಹನ್ನೊಂದು ಐವತ್ತು ವಂದು ವರ್ಣಗಳುಂಟು ಶ್ರುತಿ ಪುರಾಣಗಳುಂಟು। ಒಂದೊಂದು ಕರ್ಮವುತ್ಪತ್ತ್ಯಾದಿ ಸ್ವಾತಂತ್ರಉಂಟು। ಪೊಂದಿ ದೈತ್ಯರು ಉಂಟು ಶುಭ ಅಶುಭಗಳುಂಟು। ಅಂದು ಮೊದಲಾಗಿ ಕಡೆಭಾಗ ಪರಿಯಂತ। ಸಂಧಿಸಿ ಕೊಂಡಿಪ್ಪವು ಓಂಕಾರ ಸಹವಾಗಿ। ವಂದನೆ ನಿಂದೆ ಇನಿತು ತಿಳಿದು ಪ್ರವರ್ತಿಸಲು। ನಂದವಾಗುವದು ತತ್ತತ್ಕಾಲದಲಿ ಬಿಡದೆ। ಹಿಂದೆ ನಡೆದದ್ದೆಲ್ಲ ಹರಿ ತಾನೆ ಮಾಡಿಸಿದ। ನೆಂದು ನಿನ್ನೊಳು ನೀನು ತಿಳಿದು ದುಶ್ಚಿತ ಬಿಟ್ಟು ಇಂದಿನಾರಭ್ಯ ಅಲ್ಪಕಾಲ ಮೊದಲು ಮಾಡಿ। ನಿಂದಿರದೆಲ್ಲೆಲ್ಲಿ ಆವಾವ ಕರ್ಮವಾಗೆ। ಇಂದಿರಾಪತಿ ತಾನು ಸರ್ವಾಧಿಕಾರನಾಗಿ। ಚಂದ ಚಂದದಲಿಂದ ವ್ಯಾಪಾರ ಮಾಡಿಸುವ। ಒಂದು ಸತ್ಯ ಸಂಕಲ್ಪವಮಾಡಿ ಆವಮಾತಾಗಲಿ ಎಂದು। ಸಂದೇಹ ನಿಸ್ಸಂದೇಹವಂತ ನೀನಾಗದಿರು। ಮಂದರ ಧರ ಒಲಿದು ಆವಾವದು ಕಲ್ಪಿಸಿ। ದಂದಾದಿ ಮಾಡುತಿರು ಹರಿ ಇತ್ತಸ್ವಾತಂತ್ರದಿ। ದ್ವಂದ್ವ ಸೈರಿಸುತ್ತ ಸರ್ವರ್ವೊತ್ತಮಜ್ಞಾನದಲ್ಲಿ। ಮಂದನ್ನ ಉದ್ಧರಿಸುವ ಲೇಶದೋಷ ಬರಗೊಡ। ಅಂದವರಿಗೆ ಜೀವ ವಿಜಯ ವಿಠ್ಠಲರೇಯ। ತಂದೆಯಾಗಿ ಭಕ್ತರ ಬಳಿಯಲ್ಲಿ ತಿರುಗುವ ॥೫॥

**ಜತೆ**

ಕಮಲದೊಳು ಕಮಲ ಇದ್ದಂತೆ ಇರು ಹೃ ।
ತ್ಕಮಲದಲ್ಲಿ ವಿಜಯವಿಠ್ಠಲನ್ನ ಪೂಜಿಪದು ॥೬॥



## ಸುಳಾದಿ-೧೩

ಅಸಾರ ಸಂಸಾರ ದೇಹ ಅನಿತ್ಯ ಸಕಲ ಜಡವಸ್ತು ಅಸಾರ ಶ್ರೀಹರಿಯೆ ಮುಖ್ಯ ಕತೃನೆಂದು ವಿಷಯ ವೈರಾಗ್ಯ ತಾಳುವಿಕೆ (ದಾಸರ ಸ್ವಾನುಭವ)

### ರಾಗ- ಬಿಲಹರಿ ಧ್ರುವತಾಳ

ಪ್ರತಿ ಪ್ರತಿ ದಿವಸಕ್ಕೆ ಬೇಡುವ ಬಗೆಯುಂಟು। ಅತಿಶಯವಲ್ಲ ಕೇಳು ಅನಾದಿಯ। ಪತಿತ ಪಾವನ ನೀನು ನಿನಗೆ ಬಿನ್ನೈಪದೇನು। ಗತಿಮಾರ್ಗ ಒಂದಲ್ಲದೆ ಅಧಿಕ ಉಂಟೆ। ಕ್ಷಿತಿಯೊಳು ನೋಡಿದರು ನಿತ್ಯವಾದ ವಸ್ತುಗಳು ಸತತದಲ್ಲಿ ಕಾಣೆ ಯಾಲೋಚಿಸೆ। ಅತಳಾದಿ ಏಳು ಲೋಕ ಸಪ್ತ ಸಮುದ್ರ ಸ। ಪುತ ದ್ವೀಪ ಮೇರು ಶೈಲಾಗ್ರ ಭಾಗ। ದ್ವಿತಿಯ ಭುವನ ಸ್ವಾಹ ಮಹಜ ನೋತಪೊಸತ್ಯ। ಮಿತಕಾಲವಲ್ಲದೆ ಮೆಚ್ಚಸಲ್ಲ। ಚ್ಯುತವಾಗಿ ಪೋಗುತಿದೆ ಕ್ಲಪ್ತಕಾಲದೇವ। ಹಿತವಾಗುವದೇ ಮಹಾಯೋಗಿ ಜನಕೆ। ಶತಧೃತಿ ಮಹ ಪದವಿ ನಿಶ್ಚಯವಲ್ಲ ಸರ್ವ। ಶ್ರುತಿಯಲಿ ಪೇಳುತಿದೆ ನಂಬುವದಲ್ಲ। ಕ್ಷಿತಿಪ ಚಕ್ರವರ್ತಿಗಳು ಮಹಾಸಂಪತ್ತಿನಿಂದ। ಶತ ಸಹಸ್ರ ನೂರು ಲಕ್ಷ ಕೋಟಿ ವರುಷ। ಪ್ರತಿರಹಿತರಾಗಿ ಏಕ ಛತ್ರಾಧಿಶ್ವರರೆನಿಸಿ। ಕೃತಕಾರ್ಯದಿಂದಲ್ಲಿ ಇದ್ದವರು। ಕೃತಯುಗಾದಿಯಲ್ಲಿ ನಿಂದಿರಲಿಲ್ಲ। ಹತಭಾಗ್ಯ ಮಾನವರ ನೆಣಿಸಲ್ಯಾಕೆ। ಸತಿ ಪುತ್ರ ಬಂಧು ಬಳಗ ಮಿಗಿಲಾದವರು ಸಂ। ಗತಿ ಕಾಣೊ ಇಹದಲ್ಲಿ ತಮ್ಮ ಸುಖಕೆ। ಗತಿಗೆ ಕಾರಣವಲ್ಲ ನಶ್ವರ ಲೋಕ ಪ್ರ ಕೃತಿ ಬದ್ಧ ಜೀವರಯ್ಯಾ ಲಾಭದವರೇ। ರತಿ ಪತಿ ಜನಕ ನಮ್ಮ ವಿಜಯ ವಿಠ್ಠಲ ನಿನ್ನ। ತುತಿಸುವ ಸೌಭಾಗ್ಯ ಅನಂತಕಾಲಕ್ಕೆ ಕೊಡು ॥೧॥

### ಮಟ್ಟತಾಳ

ಭಗವಂತನೆ ಕೇಳು ಅವರಿವರನ ತೋರಿ। ಮಗುಳೆ ಮಗುಳೆ ನುಡಿದು ಬೇಡಿಕೊಂಬುವದ್ಯಾಕೆ। ಜಗದೊಳಗೆನಗೀ ಸಂಸಾರಾಂತರದಿ।

ಮಿಗೆ ಮನಸಿಗೆ ಅನುಭವವದು ಕೇಳು। ಮಗನು ಪೋದದು ಕಂಡೆಮನಕೆ ಒಪ್ಪುವಶಿಷ್ಯ। ಜಿಗಳಿ ಪೋದದು ಕಂಡೆ ಕಾಯದಲ್ಲಿರಲ್ಲಿಕ್ಕೆ। ನಗುತ ನಗುತ ಇನಿತು ಆಗಿ ಪೋದುದಕೆ ಕೈಮುಗಿದು ವಂದಿಪೆನಯ್ಯಾ ಭವದೊಳು ಸುಖವಿಲ್ಲಾ। ಗಗನ ಗಮನ ಸಿರಿ ವಿಜಯ ವಿಠ್ಠಲರೇಯ। ತ್ರಿಗುಣ ಕಾರ್ಯಗಳಿಂದ ತಿರುಗುವದೇ ಸಿದ್ಧ ॥೨॥

## ತ್ರಿವಿಡಿ ತಾಳ

ಅನ್ಯ ಖಂಡಗಳಲ್ಲಿ ಹತ್ತುಸಾವಿರ ವರುಷ। ಪುಣ್ಯ ಪ್ರಭಾದಿಂದ ದೇವ ಮಾನ। ಗಣ್ಯವಿಲ್ಲದೆ ಬಧುಕಿ ಬಲವಂತರಾಗಿ ಸುವರ್ಣ ಪೋಲುವ ಕಾಂತಿಯುಕ್ತರಾಗಿ। ಇನ್ನು ವನಿತೆಯರಿಂದ ನಾನಾ ಕ್ರೀಡೆಗಳಿಂದ। ಚನ್ನಾಗಿ ಸುಖಿಸಿ ಸಂತಾನ ಪಡೆದು। ಮನ್ನಣೆ ಮುದದಲಿ ಇದ್ದ ಜನರು ತಮ್ಮ। ಪುಣ್ಯ ತೀರಿದ ಮೇಲೆ ಭಾರತದಲ್ಲೀ। ಜನ್ಮ ತೆತ್ತವರಾಗಿ ಸಂಸಾರದಲಿ ಶಿಲ್ಕಿ। ಬನ್ನ ಬಡಲಿಬೇಕು ಇಹ ಲೋಕದಿ। ಮುನ್ನೆ ಚತುರಯುಗ ಬಾಳಿದವರು ಮತ್ತೆ। ಸನ್ನದ್ಧರಾಗಿದ್ದ ತ್ರಯೋದಶಮನು। ಭಿನ್ನವಿಲ್ಲದಲೆ ಎಪ್ಪತ್ತೊಂದು ಮಹಾ ಯುಗ। ನನ್ನ ಭೂಮಿಪರಾಗಿ ಇದ್ದವರು। ಕಣ್ಣಿವೆಯನು ಹಾಕಿ ತೆಗುವ ಕಾಲದೊಳು ಸಂ। ಪನ್ನ ಭಾಗ್ಯವಡನೆ ಕೊಂಡೊಯ್ದುರೆ। ನಿನ್ನಿಚ್ಛೆಯಲಿ ತಾನೆ ಪೋಗುವ ಐಶ್ವರ್ಯ। ತನ್ನಿಂದಲಿ ತಾನೆ ನಿಲ್ಲ ಬಲ್ಲದೇ। ಅಣಕವ ಆಗಿದೆ ನಿನಗೆ ಈ ಪರಿಯಲಿ। ಬನ್ನ ಬಡುವವ ನಾನೆ ಬಲ್ಲೆನಯ್ಯಾ। ಮನ್ನಿಸು ಮಹಾರಾಯಾ ವಿಜಯ ವಿಠ್ಠಲರೇಯ। ವಿಣ್ಮೂತ್ರದೊಳು ಬಂದು ಹೊರಳಲಾರೆನೊ ನಾನು ॥೩॥

## ಅಟ್ಟತಾಳ

ಎಂಥೆಂಥ ರಾಯರು ಏನಾವರು ನೋಡು। ಎಂಥೆಂಥ ಮನುಗಳು ಇಂದ್ರಚಂದ್ರಾದ್ಯರು। ಪಂಥವುಳ್ಳ ರುದ್ರ ಸರಿಸಿಜ ಸಂಭವ। ಇಂಥ ಇಂಥವರಿಗೆ ಸಂಸಾರ ನಿತ್ಯವೆ। ಸಂತೆಕೂಟದ ಪ್ರಜೆಯಾರಿಗಾದರು

ನೋಡು। ಕಂಥೆಗೆ ಸೂತ್ರ ಹಾಕೀದಂತೆ ಇಪ್ಪದು। ಪಂಥದಲ್ಲಿ ಬಾಳುವದಕೆ ಕಾರಣ। ಅಂಥಾದ್ದೆ ಸರಿದೇವ ಇಹ ಹೇಯವೆಂದು। ಗ್ರಂಥಮೂಲದಲ್ಲಿ ಪೇಳಿದೆ ಪೇಳಿದೆ। ಮಂಥನವನು ಮಾಡಿ ಸಂಕೀರ್ತನೆ ಸ। ತ್ಪಂಥವ ಪಿಡಿದು ಹೃದಯದೊಳಗಿದ್ದ। ಗ್ರಂಥಿ ಹರಿಸಿಕೊಂಬ ಯೋಗ ಮಾರ್ಗವೆ ಬೇಕು। ಚಿಂತಿತ ಫಲದಾಯ ವಿಜಯ ವಿಠ್ಠಲರೇಯ। ಸಂತರ ಮನೋಹರ ಸಕಲ ಯೋಗೇಶ್ವರ ॥೪॥

### ಆದಿತಾಳ

ಶ್ವಾಸದಂತೆ ಗಾತ್ರ ದಿವಸ ದಿವಸ ಬಿಡದೆ। ನಾಶನವಾಗುತಿದೆ ಕಣ್ಣಿಗೆ ಕಾಣಿಸದು। ದೋಷ ಪುಂಜದಿಂದ ಭರಿತವಾಗಿದೆ। ಹೃಷಿಕೇಶನೆ ಬಿನ್ನಹ ಲಾಲಿಸು ನೀಕ್ಷಿಸು। ಈ ಶರೀರ ಸ್ಥಿತಿ ಈ ಪರಿ ಇರಲಿಕ್ಕೆ। ಆಶೆ ಮಾಡುವ ಮನುಜ ಅವನೇವೇಬಲು ಮೂರ್ಖ। ದೇಶದೊಳಗೆ ಸರ್ವ ವಿಚಿತ್ರ ಪದಾರ್ಥ। ಏಸೇಸು ಇದ್ದರೇನು ನೆಚ್ಚಿಕೆ ಇಲ್ಲವೊ। ವಾಸುದೇವನೆ ನಿನ್ನ ಕರುಣವುಂಟೆ ಸತ್ಯ। ಸುಷುಪ್ತಿ ಕಾಲದ ಪುಣ್ಯ ಬರುವಂತೆ ಮಾಡು। ಭೂಷಣ ಭೂತಿಮಾನ ಬಹುಮಾನ ಬಲತೇಜ। ಭಾಸುರ ಕೀರ್ತಿಧೈರ್ಯ ನಾನಾ ಸಂಪತ್ತು ನಿನ್ನ ದಾಸೋಹಂ ಎಂದೆನಿಪ ಮಾತಿನೊಳಗೆ ಅಕ್ಕು। ಲೇಶವಾದರು ಇದಕೆ ಪ್ರತಿಕೂಲಬಾರದಂತೆ। ಈಶ ಇಂದಿರೇಶ ಪಾಲಿಸು ಬೇಡಿಕೊಂಬೆ। ಭೂಸುರ ದೇಹವಿರಲಿ ಇದೇ ಮತದ ಜ್ಞಾನದಿಂದ। ಶೇಷ ಪೂರ್ತಿಯಾಗಲಿ ಸಾಧನ ಸರ್ವೇಶ। ವಾಸ ವಿಲಾಸ ಉಲ್ಲಾಸ ವಿಜಯ ವಿಠ್ಠಲ। ಮೀಸಲ ಮನ ದೈವ ನಿನ್ನಿಚ್ಛೆ ಎಂತಾಹದೊ ॥೫॥

### ಜತೆ

ಸಂಪತ್ತು ಸ್ಥಿರವಲ್ಲ ಇಹದಲ್ಲಿ ಬಯಸೋದು।
ಸಂಪೂರ್ಣ ಷಡೈಶ್ವರ್ಯ ವಿಜಯ ವಿಠ್ಠಲ ಕೃಷ್ಣಾ ॥೬॥



# ಸುಳಾದಿ-೧೭

ಮಾನವ ಜನ್ಮ ದುರ್ಲಭ ಕಾರಣ ಮಾಯಾಜಾಲ ಗೆದ್ದು ಇದೇ ಮನುಜ ಜನುಮದಲ್ಲಿ ಸಾಧನವು ಮುಖ್ಯ

### ರಾಗ- ಶಂಕರಾಭರಣ ಝಂಪೆ ತಾಳ

ಬಿಡುಬಿಡು ಮಾಂಸವನು ಕಡಿಗೆ ನಿನ್ನನು ವೈದು। ತಡಿಯದಲ್ಲಿಡುವದು ನರಕದಲ್ಲೀ। ದುಡಿಯದಿರು ವ್ಯರ್ಥ ನಿನ್ನ ಒಡಲಿಗೆ ಘನವಸ್ತ। ಒಡಿವೆ ಘಳಿಸೆನೆಂಬ ಸಡಗರದಲಿ। ಜಡರಿಗೆ ಬೇಸರಿಕೆ ಕೊಡುತಲಿ ಅವರಿಂದ ನುಡಿಸಿಕೊಂಡು ಕ್ಲೇಶ ಬಡುವದೇನೊ। ಕೊಡುವ ಕಾಸಿಗೆ ಪೋಗಿ ತುಡುಗ ತನವಾಡಲು। ಕೊಡ ಮೀಸಲ ಪಾಲು ನಾಯಿ ಬಂದು। ಕುಡದಂತೆಯಾಗುವದು ಕಡು ನಿರ್ಭಾಗ್ಯನೆ। ಪೊಡವಿ ಸುರ ಜನುಮವು ಬಿಡದೆ ಬಂದಿರಲಾಗಿ। ಕೆಡಿಸಿಕೊಂಡು ಪಾದದಡೆಯಾಗುವೆ। ಅಡಿಗಡಿಗೆ ವಿಜಯವಿಠ್ಠಲನ ನೆನೆದಡೆ ಭಂಗ। ಬಡದ ಪದವಿ ನಿನ್ನ ಪಡವಣಿಗೆ ಲೇಸೊ ॥೧॥

### ಮಟ್ಟತಾಳ

ಅನಂತ ಜನುಮದಲ್ಲಿ ಅನಂತ ಜೀವಿಗಳ। ಯೋನಿ ಯೋನಿಗಳಲ್ಲಿ ಹೀನಾಯದಲಿದ್ದು। ಏನು ಕಾಣದೆ ಬಳಲಿ ನೀನಿದ್ದದರಿಂದ। ಜ್ಞಾನ ಒಂದಾದರೂ ನೀನರಿಯಲಿಲ್ಲ। ಅನಂತ ಗುಣಪೂರ್ಣ ವಿಜಯವಿಠ್ಠಲನ್ನ। ಧ್ಯಾನಕ್ಕೆ ದೂರಾಗಿ ಮಾನವಧಮನಾದೆ ॥೨॥

### ತ್ರಿವಿಡಿತಾಳ

ಆವಕುಲದ ಪುಣ್ಯವೊ ಆವಸುಕೃತ ಫಲವೊ। ಆವ ಜನ್ಮದಲಿ ಮಾಡಿದ ಸಿದ್ಧ ಸಾಧನವೊ। ಆವ ಧರ್ಮದಲಿಂದ ಬಂದ ಜನನವೊ ಭೂ। ದೇವ ಗರ್ಭದಲ್ಲಿ ನೀನವತರಿಸಿ। ಕೋವಿದನಾಗಿ ಶ್ರೀಹರಿಯ ನಂಬದೆ

ಬರಿದೆ। ಧಾವತಿಯನು ಮಾಡಿ ನೋವನೊಂದೂ। ಆವ ಕಡಿಗೆ ಪೊಂದದಲೆ ವ್ಯರ್ಥನಮ್ಮಯ್ಯ। ಶ್ರೀ ವಿಜಯವಿಠ್ಠಲನ್ನ ಭಾವದಲೀ ಕಾಣೀ ॥೩॥

**ಅಟ್ಟತಾಳ**

ಮಡದಿ ಮಕ್ಕಳು ನಿನ್ನ ಎಡಬಲದವರಿಗೆ। ಉಡುವ ವಸ್ತ್ರವಿಲ್ಲವೆಂದೆಡೆಯಲ್ಲಿ ಕಾಣುತ್ತ। ಕಡುನೊಂದು ಪೋಗಿ ಅಂಗಡಿಎಲ್ಲ ತಿರುಗಿ। ತಡಿಯದೆ ತಂದಿಪ್ಪೆ ಬಿಡದೆ ನಿನ್ನನು ಸಾಕುವ। ಒಡಿಯ ರಂಗಯ್ಯಗೆ ಬಿಡಿವಸ್ತ್ರ ಮಾಡೆನಲು ಮಿಡಕುತ್ತ ಧರಣಿಯ ಪಿಡಿದು ಬೆಂಡಾಗುವೆ। ಕಡಲಶಯನ ನಮ್ಮ ವಿಜಯ ವಿಠ್ಠಲರೇಯ। ಕೊಡನೆಂದು ದೂರಲು ಒಡನೆ ಬಪ್ಪದೇನೊ ॥೪॥

**ಆದಿತಾಳ**

ಮಾಯಾವನ್ನೆ ತೊರಿಯಬೇಕು। ಮಾಯವನ್ನೆ ಬಿಡಲಿಬೇಕು। ಮಾಯಾಶಕ್ತಿ ಬಂಧದಲ್ಲಿ। ನೋಯದಲೆ ಇರಲಿಬೇಕು। ಮಾಯಾಶಕ್ತಿ ಬಂಧನವು। ಶ್ರೀಯರಸನಾಧೀನಾ। ನ್ಯಾಯದಲ್ಲಿ ಅರ್ಚಿಸಲು। ಪಾಯದಲ್ಲಿ ಹರಿಯ ಕಂಡು। ಮಾಯವನ್ನು ದಾಟುವದೂ। ದಾಯಷನ್ನು ಬಯಸದಲೆ। ಮಾಯಾಧರಾ ವಿಜಯವಿಠ್ಠಲ। ರಾಯನಲ್ಲಿ ಮನವಿಟ್ಟು। ವಾಯುವುಳ್ಳಾಗಲಿ ನಿನ್ನ। ಆಯುಸಾರ್ಥಕವೆನಿಸೊ ॥೫॥

**ಜತೆ**

ಈ ದೇಹದಲಿ ಜ್ಞಾನ ಈ ದೇಹದಲಿ ಮಾನ।
ಈ ದೇಹದಲಿ ನಮ್ಮ ವಿಜಯ ವಿಠ್ಠಲನ ಕಾಣೊ ॥೬॥



## ಸುಳಾದಿ-೧೮

ಈ ಸ್ಥೂಲ ದೇಹವು ಅನಿತ್ಯ ಅಸ್ಥಿರವೆಂದು ನಿಶ್ಚವಾಗಿ ತಿಳಿದು ಅನೇಕ ಭಾಗವತ ಧರ್ಮಗಳನ್ನಾಚರಿಸಿ ಈ ಕ್ಷೇತ್ರ ಉಳ್ಳಾಗಲೇ ಗುರುಕರುಣ ಸಂಪಾದಿಸಿ ಸಾಧನೆ ಮಾಡುವದು.

### ರಾಗ-ಕೇದಾರಗೌಳ ಧ್ರುವತಾಳ

ಚಿಂತೆಯಾತಕ್ಕೆ ಜನನ ಅಂತ್ಯಕಾಲವು ಎರಡು। ಎಂಥವನಿಗೆ ತಪ್ಪದಂತಿಪ್ಪದೂ। ಕಾಂತಾರ ಗಿರಿ ವನ ಮುಂತಾದ ಲೋಕಗಳು। ನಿಂತಲ್ಲಿ ನಿಲ್ಲದಲೆ ತಿರುಗಿದರು। ಪಿಂತಟ್ಟಿ ಮೃತ್ಯು ಬಾರದಂತೆ ಇರದು ಕೇಳು। ಅಂತರವಿಲ್ಲ ಸಿದ್ಧಾಂತವೆನ್ನು। ಅಂತರ ಶುದ್ಧಿಯಾಗೇಕಾಂತದಲ್ಲಿ ಬಲು। ಶಾಂತನಾಗಿ ನಿಶ್ಚಿಂತೆಯಲ್ಲಿ। ಸಂತಾಪ ತೊರೆದು ಆದ್ಯಂತ ಜ್ಞಾನದಲ್ಲಿ। ಅಂತರಂಗದಿ ಶ್ರೀಕಾಂತನ್ನ ಪಾದ। ಕ್ರಾಂತನಾಗಿ ಹೃದಯ ಗ್ರಂಥಿಯ ಪರಿಹರಿಸು। ಸಂತತ ಸು ತಂತುವಿಜಯ ವಿಠ್ಠಲನ್ನ। ಅಂತೆ ಕಾಲಕ್ಕೆ ನೆನವಂತೆ ಸಾಧನ ಬಯಸೊ ॥೧॥

### ಮಟ್ಟತಾಳ

ಶರಧಿ ಮೇಲುದಪ್ಪಿ ಬರಲು ತೀವರದಿಂದ ಮಂದಿ। ದಿರದ ಕದವನ್ನು ಇರುಹು ಸಂದಿಸದಂತೆ। ಸರಿದರೆ ಸದನ ನಿಂದರ ಬಲ್ಲದೆ ಮರುಳೆ ಹರಿಯ ನಿರೂಪವನ್ನು ಧರಿಸಿ ಕಾಲಮೃತ್ಯು। ಆರಿಸಿ ಕೊಲ್ಲುತ ಬರಲು ಸುರರಾದರು ವೊಹಿಸಿ ಅರಲವ ಉಳಿಸುವರೆ। ಬರಿದೆ ಬರಿದೆ ನೆಚ್ಚಿ ಮರಿಯದಿರೊ ಹರಿಯ। ಸ್ಮರಣೆಯನು ನಿನ್ನ ಹರಣ ಉಳ್ಳನಕ ಶಾ। ವೈರಿ ಕರನಾವಮಾ ವಿಜಯ ವಿಠ್ಠಲನ್ನ। ಕರಣ ಶುದ್ಧಿಯಲ್ಲಿ ಪರಮಾದರನಾಗೊ ॥೨॥

### ತ್ರಿವಿಡಿತಾಳ

ಮನಸು ನಾಲ್ಕು ಪರಿ ಒಂದು ಘಳಿಗಿಂಒಳಗೆ। ನೆನಸೂವದೊಂದಾಹಂಕಾರ ನಿಶ್ಚಯವೊ ಸಂಶಯ। ಎನಿಸುವದಿದರಿಂದ ಘನ ಶೋಕವೆ ಬಂದು। ಮನ ಶುಚಿಯಾಗದೆ ಕೆಡುತಿಪ್ಪದು। ಮನೆ ಸತಿ ಸುತ ಬಂಧು ಬಳಗ ನಾನಾ ದ್ರವ್ಯ। ಎಣಿಸದಿರೊ ನಿನಗೆಲ್ಲಾಧೀನವೆಂದು। ತೃಣ ಸರಿಯಾಗಿ ಕಾಣುವದು ನೆರೆನಂಬದೆ। ಶಣಿಸು ಸಂಸಾರದ ಮರೆ ಮೋಸವೊ। ಫಣಿ ಶಾಯಿ ಮಹಾಗರ್ತ ವಿಜಯ ವಿಠ್ಠಲರೇಯನ। ನೆನಿಸು ನಿಶ್ಚಯದಿಂದ ಮನುಷ್ಯೋತ್ತಮನಾಗಿ ॥೩॥

### ಅಟ್ಟತಾಳ

ಇಡದಿರು ಪದಾರ್ಥ ಇಂದುನಾಳಿಗೆ ಎಂದು। ಬಡದಿರುದೈನ್ಯವ ಒಬ್ಬರಲ್ಲಿಗೆ ಪೋಗಿ। ಬಿಡದಿರುಶುದ್ಧವೃತ್ತಿಯ ವ್ಯಾಪಾರವ। ಪಿಡದಿರು ವಾಗೇಂದ್ರನಿಗ್ರಹವನು ಮಾಡಿ। ನುಡದಿರು ಹೆಜ್ಜೆ ಹೆಜ್ಜಿಗೆ ಭೇದವೆಂದು। ಹಿಡಿಯದಿರು ಒಕ್ಕುಡುತಿಗೆ ಹೆಚ್ಚಾಗಿ। ಪಿಡಿಯದಿರೂ ದ್ವೇಷಿಗಳ ಮನೆಯ ಧಾನ್ಯ। ಒಡಿಯ ಕಿಶ್ಟಿನೆ ನಾಮ ವಿಜಯವಿಠ್ಠಲನಿಂ। ದೆಡಿಯಲ್ಲಿ ಮರಿಯದೆ ನುಡಿ ಶುದ್ಧ ಭಕುತಿಲಿ ॥೪॥

### ಆದಿತಾಳ

ಜಿಹ್ವೆ ಗುಹೇಂದ್ರಿಯ ಉಪಸಂಹಾರವನ್ನು ಮಾಡುತ್ತ। ಗಹ್ವರ ಭಕುತಿಯಲ್ಲಿ ಸಿಂಹನುಲಂಘಿಣೆಯಂತೆ। ಜಾಹ್ನವಿ ಮಿಕ್ಕಾದ ನದಿ ಜಿಹ್ವಾಗ್ರದಿ (ಜಿಂಹಾಗಾದ್ರಿ) ಕ್ಷೇತ್ರಕೆ। ತ್ವಂಪ್ವರಿದುಪೋಗಿಪಾಪಸಂಹಾರವಗೈಸುತಲಿ। ಸಿಂಹನಾಮ ಪರದೈವ ವಿಜಯವಿಠ್ಠಲನ್ನ। ಜಿಹ್ವಾಗ್ರದಲ್ಲಿ ನೆನೆದು ಬಿಂಹ್ವಾಮಧ್ಯದಲ್ಲಿ ನಿಲಿಸೊ ॥೫॥

### ಜತೆ

ಕ್ಷೇತ್ರವುಳ್ಳಾಗ ಸಂಪಾದಿಸಿ ಗುರುಕರುಣ ।
ಶತ್ರು ತಾಪ ವಿಜಯ ವಿಠ್ಠಲನ್ನ ಬಲಗೊಳ್ಳೊ ॥೬॥

❖ ❖ ❖

## ಸುಳಾದಿ-೧೯

ಸಂಸಾರ ಅಸಾರವೆಂದು ತಿಳಿದು ದೃಢವಾಗಿ ಹರಿಪಾದ ನಂಬಿ, ಮದ್ದಾನೆ ಕರ್ದಮದೊಳಿದ್ದಂತೆ ಸಂಸಾರದಲ್ಲಿ ನಿರ್ಲಿಪ್ತನಾಗಿರುವಿಕೆ.

### ರಾಗ- ಸಾರಂಗ ಧ್ರುವತಾಳ

ಇಂತೀ ಸಂಸಾರದ ಭ್ರಾಂತಿಗೊಳಗಾಗಿ ದು। ಶ್ಚಿಂತಿಯಲ್ಲಿನೀ ಬಳಲದಿರು ಸಂತತದಲ್ಲಿ। ಸಂತಾಪದಲಿ ಕುದಿದು ಕಿಂತು ಕಳೆಯದೆ ಭವದ। ಪಂಥಿಯೊಳು ಹೊರಳಿ ಅಂತನು ಕಾಣದೆ। ಸಂತತಿ ಎನ್ನದ್ಯನ್ನದು ನೀನು ನಾನೆಂಬೊ। ಪಂಥದಲ್ಲಿ ತಿರುಗಿ ಮುಂತೆ ನೆನಿಯದೆ। ಪಾಂಥದರ ವಂಟಿಗೆಯಲ್ಲಿ ನಿಂತ ಜನರಕೂಟ। ದಂತೆಲವೊ ಜೀವ ನೀನೆಂತು ಮರುಳೊ। ಕಂಥೆ ಪಟಕ್ಕೆ ಸುತ್ತ ತಂತಿ ಜೋಡಿಸಿದ ಪರಿ। ತಂತ್ರವಿದು ನೆಚ್ಚದಿರು ಕಂಥೆ ಮಾಯಾ। ಶಾಂತ ಪಾರಾಯಣ ವಿಜಯ ವಿಠ್ಠಲ ಜಗ। ದಂತರಯಾಮಿಯ ಮಂತ್ರವನ್ನು ಪಠಿಸೊ ॥೧॥

### ಮಟ್ಟತಾಳ

ಹೊಳೆಯ ಹರಿಯಿಂದ ಮಳಲು ಹರಿದು ಬಂದು। ಕೆಲವು ದಿನ ನೆಲೆಯಾಗಲು ಮತ್ತೆ। ಜಲವತ್ತಡಿ ಇಂದಾಗಲಿ ಪೋಗಿ ಮಳಲು। ಬಲ ಪರಿಯದಂತೆ ತಿಳಿವದು ನಿನ್ನಯ। ಕುಲದ ಉತ್ಪತ್ತಿಯು ಫಳಿಗೆಯೊಳಗೆ ಮೂ। ದಲಿಸಿ ನುಡಿವರೂ ಮುಳವು ಮಾಡಿಕೊಳದೆ। ಹುಳಕು ಯೋಚನೆ

ತೊರದು। ಕಲಕಾಲ ವಿರಾಮ ವಿಜಯ ವಿಠ್ಠಲನ್ನ ಒಳಗೆ ಮಾಡಿಕೊಂಡು ಸುಳಿದಾಡು ವಿಹಿತದಲ್ಲಿ ॥೨॥

### ರೂಪಕತಾಳ

ಸುಖವಿಲ್ಲ ಸುಖವಿಲ್ಲ ಸಂಸಾರಾಖ್ಯದಲ್ಲಿ। ದುಃಖವೆ ದುಃಖವೆ ಪ್ರಾಪ್ತಿ ಸಕಲ ಕಾಲದಲೀ। ತ್ವಕು ವೇಂದ್ರಿಯಾದಿ ಮೋಹಕದೊಳು ಸಿಗಬಿದ್ದು। ಅಕಟ ಮಮತೆಯಲ್ಲಿ ವಿಕಳ ಮಾನವನಾಗಿ। ಭಕುತಿ ಶೂನ್ಯದಲ್ಲಿ ಬದಕುವದೇನೊ ಜೀವ। ನಿಕಾರ ಬಂಧನದೊಳು ಪುಕ್ಕಟೆ ತಗಲಿಕೊಂಡು। ಮುಖಕೆ ಹೇಡಿಯಾಗದೆ ಕುಕ್ಕುಟ ಜ್ಞಾನದಲಿ ಶೋ। ಧಕನಾಗು ಅನುಗಾಲ ಲಕುಮಿ ವಲ್ಲಭ ವಿ। ಮುಕ್ತಾತ್ಮಾ ವಿಜಯ ವಿಠ್ಠಲನ್ನ ದಿವ್ಯ ಪಾ। ದಕ್ಕೆ ನಮಿಸಿ ಪುಣ್ಯಸಾಧಕನಾಗಿ ಬಾಳೊ ॥೩॥

### ಝಂಪೆ ತಾಳ

ಸಂಕಲೆ ಎಂಬ ಸಂಸಾರ ಕಾಲಿಗೆ ತಗಲಿ। ಸಂಕಟ ಬಡಿಸುವದು ಕೇಳು ಪ್ರಾಣಿ। ಅಂಕುರವಾಗದು ಭಕ್ತಿ ಮಾರ್ಗಕ್ಕೆ ಕ। ಳಂಕವಲ್ಲದೆ ಇನಿತು ಒಳಿತೆ ಇಲ್ಲ। ಡೊಂಕ ನಡತೆಯಲಿ ಅಂಧಕೂಪದಲ್ಲಿ ಕೆಡದು। ಸುಂಕು ಮುಸುಕಿದಂತೆ ಮುಗ್ಧನಾಗಿ। ಪಂಕಜೋದರ ಕುಮುದ ವಿಜಯ ವಿಠ್ಠಲನ್ನ ಅಂಕಿತವ ಜರಿದು ದುರ್ಬಿಂಕಲಿ ಮೆರದೆ ॥೪॥

### ತ್ರಿವಿಡಿ ತಾಳ

ಹಿಂದೆಸಂಸಾರದಾವವೆಂದೆಂಬೊ (ಧಾವೆಂದೆಂಬೊ) ಬಂಧನದೊಳು। ಪೊಂದಿ ಪಾಮರರಾಗಿ ಬಂದು ಪೋದವರೆಲ್ಲ। ತಂದೆ ತಾಯಿ ಭ್ರಾತೃ ಬಂಧು ಬಳಗ ಸಂ। ಬಂಧಿಗಳೇನೊ ನಿನಗಿಂದು ನೆರದವರು। ಮುಂದೆ ನೀನವರಿಗೆ ಬಂಧು ಅತಿ ದೂರನೊ। ದ್ವಂದ್ವ ವಾರ್ತೆಯನು ನಿಸ್ಸಂದೇಹದಲಿ ಪೇಳು। ಇಂದಿರೇಶ ಸತ್ಯಮೇಧ ವಿಜಯವಿಠ್ಠಲ। ಎಂದೆಂದಿಗೆ ಪೊರೆವನಂದನೆಂದುನಂಬೊ ॥೫॥

### ಅಟ್ಟ ತಾಳ

ಹಲವು ಯೋನಿಗಳಲ್ಲಿ ಸುಳಿದು ಸುಳಿದು ಸುತ್ತಿ ಮಲಮೂತ್ರ ಹೊಲಸು ಹೊಲಿಯ ಸೂತಕದಲ್ಲಿ। ಕುಲವೆ ಸಾರಲಿ ಬಂದು ಚಲಿಸಿದ ದುಃಖವ। ನೆಲೆಯಾವದು ಜೀವ ಹುಳುತು ಪೋಗುವದು। ಬಲೆಯಲ್ಲಿ ಬಿದ್ದ ಸಿಂಬಳದೊಳು ನೊಣ ದೇಹ। ಕೆಳಗಾಗೆ ಮೆಲದಂತೆ ಬಳಲುವಿ ಕಲಕಾಲ ತಿಲದರ್ಥನಿತು ಸತ್ಫಲವೀಗ ಒದಗವು। ಹಳವಾದೀ ಸಂಸಾರಹಲವು ರಂಧ್ರವು ಕಾಣೊ। ಬಲವಂತ ದುರ್ಗಮ ವಿಜಯ ವಿಠ್ಠಲ ನಿ। ಶ್ಚಲ ಮೂರಿತಿಯ ವೆಗ್ಗಳ ಮಹಿಮೆಯು ತಿಳಿಯೊ ॥೬॥

### ಆದಿತಾಳ

ಖತಿಗೊಂಬ ಸಂಸಾರ ಕತಿದೂರನಾಗಿ ನಿಲ್ಲೊ। ಮತಿಗೆಡಿಸುವ ಇಂದ್ರಿಜಿತನಾಗೊ ಧೈರ್ಯದಲ್ಲಿ। ಚತುರಾವಿತನದಲ್ಲಿ ಇತರ ದೈವವ ಬಿಟ್ಟು। ಕ್ಷಿತಿಗೊಬ್ಬನುತ್ಪತ್ಯ ಸ್ಥಿತಿಲಯ ಕರ್ತನು ಶ್ರೀಪತಿ ಎಂದು ತಿಳಿದು ನಂಬಿ ಸತತಾರಾಧನೆ ಮಾಡಿ। ರತಿಯಾದ ಭಕುತಿಯಲ್ಲಿ ಲತೆಪಲ್ಲವಿಸಿದಂತೆ। ಪ್ರತಿದಿವಸದಲಿ ವಿಹಿತ ಧರ್ಮದಿಂದ ಸ। ದ್ಗತಿ ಗಭಿಮುಖನಾಗದುಚಿತ ಕುಲದಲ್ಲಿ ಬಂದು ದ್ಯುತಿಧರ ನಾಮ ಪ್ರೇಮ ವಿಜಯ ವಿಠ್ಠಲರೇಯನ ಕಥೆ ಕಲ್ಪ ಕೇಳಿ ನಿರ್ಗತನಾಗೊ ಚಕ್ರದಿಂದ ॥೭॥

### ಜತೆ

ಕರ್ದಮದೊಳಗಿದ್ದ ಮದ್ದಾನೆ ಇದ್ದಂತೆ ।
ಇದ್ದು ಭಜಿಸು ದುರ್ಧರ ವಿಜಯ ವಿಠ್ಠಲನಂಘ್ರಿ ॥೮॥



# ಸುಳಾದಿ-೨೦

ದೇಹ ಅನಿತ್ಯ ಅಸ್ಥಿರ, ಸಂಸಾರ ಅಸಾರವಾದುದೆಂದು ಸಂಸಾರದಲ್ಲಿ ಮುಳುಗದೆ ವೈರಾಗ್ಯ ಪೊಂದು ನಿರಂತರ ಪರೇಶನನ್ನು ಭಜಿಸು

## ರಾಗ-ಭೈರವಿ ಧ್ರುವತಾಳ

ಈಗಲೊ ಇನ್ನಾಗಲೊ ಈ ಗಾತ್ರ ಸ್ಥಿರವಲ್ಲ। ಭೋಗದಾಶೆಯ ಬಿಡು ಜಾಗು ಮಾಡುದಲೆ। ಭಾಗವತರ ಸಂಯೋಗದಿಂದಲಿ ವೀ। ರಾಗ ನೀನಾಗು ಬಲು ಜಾಗರತನದಲಿ। ಭಾಗಾದೆಯರ ಗೆಲ್ಲು ತ್ಯಾಗಿಯಾಗು ಸರ್ವದಲಿ। ಬಾಗಿ ಜ್ಞಾನಿಗಳಿಗೆರಗು ದಾಸನೆನಿಸೀ। ತಾಗುಣದಲಿ ಬ್ಯಾಸಿಗೆ ಬಿಸಲೊಳಗೆ। ಪೋಗುವನು ಮನುಜ ತಂಪಾಗುವನೆಂದು ಒಂದು। ನಾಗನ ಫಣದ ಕೆಳಗೆ ಕುಳಿತಾಗದೆ। ಆಗುವದು ಭವಸಾಗರದ ಸುಖವೊ। ಹೀಗೆಂದು ತಿಳಿ ಜನ್ಮ ರೋಗ ಹಿಂದುಗಳಿಯೊ। ನೀಗು ಸತ್ಕರ್ಮವು ಚನ್ನಾಗಿ ಸಾಧನ ಬಯಸಿ। ಬಾಗೀರಥಿ ಜನಕ ವಿಜಯ ವಿಠ್ಠಲನ್ನ ಲೇ। ಸಾಗಿ ಕಾಣುವದು ಇಂಪಾಗಿ ಸಂಚರಿಸುತ್ತ ॥೧॥

## ಮಟ್ಟತಾಳ

ನಾಚಿಕಿಲ್ಲದ ಮನವೆ ಯೋಚಿಸಿ ನೀ ನೋಡು। ಪ್ರಾಚೀನ ಕರ್ಮ ಆಚರಿಸದು ಬಿಡದು। ವಾಚದಲ್ಲಿ ಕೇಳು ನೀಚ ಮಾರ್ಗವೆ ಕಳಿಯೊ। ಈ ಚರಾಚರದಲ್ಲಿ ಯೋಚನೆ ಪರನಾಗಿ। ಪಾಚಿ ತೆರನಾದ ಪೋಚೆ ಸಂಸಾರದಾಲೋಚನೆ ತೋರುವದು ಸೂಚಿಸುವೆನು ನೆನಗೆ। ಕೀಚಕಾರಿ ಪ್ರೀಯ ವಿಜಯ ವಿಠ್ಠಲ ಭವ। ಮೋಚನನೆಂದು ಶ್ರೀಚರಣವ ನೆನಿಸೂ॥೨॥

## ತ್ರಿವಿಡಿತಾಳ

ಚಂಚಲ ಮನವೆ ನಿನಗೆಷ್ಟು ಪೇಳಿದರೇನು। ವಂಚನೆ ಬಿಡದಲೆ ಚರಿಸತಿಪ್ಪೆ। ಹಂಚು ನೋಡಿಕೊಂಡು ಮೊಗವ ತಿರುಹಿದಂತೆ।

ಕಿಂಚಿತ್ತುವಾದರು ಸುಖಬಪ್ಪುದೇ। ಸಂಚಗಾರಕೆ ಭಕುತಿ ಸಂಪಾದಿಸು ಹುಲ್ಲು। ಗುಂಚೆಯಿಂದಲಿ ಮೋಕ್ಷವಾಗುವದೇ। ಮಿಂಚುವ ಶರೀರ ವಿಜಯ ವಿಠ್ಠಲ ಹರಿಯ। ಪಂಚಭೇದವೆ ತಿಳಿದು ಕೊಂಡಾಡೆ ಬರುವಾ ॥೩॥

### ಅಟ್ಟ ತಾಳ

ಸಂಕಟವಾದ ಸಂಸಾರದೊಳುಬಿದ್ದು। ಪಂಕಮತಿಯಿಂದ ನೋಯದಿರು ಮನವೆ। ಲೆಂಕಾ ಲಂಕಾನಾಗು ಶ್ರವಣವ ಲಾಲಿಸಿ। ಶಿಂಕಳ ನೀಗಾಡು ಶುದ್ಧ ನಡತಿಯಿಂದ। ಶಂಕೆಯಬಿಡು ಬಿಡು ಹೀನನಾದರೆ ನಿನ್ನ। ಕೊಂಕತಿರು ಕಾಣೊ ಕಲುಷವೆ ಬಡುವದು। ಕುಂಕುಮಾಂಕಿತ ಭೂಷ ವಿಜಯ ವಿಠ್ಠಲನ ಅಂಕಿತದವನಾಗಿ ಆನಂದವಾಗೂ ॥೪॥

### ಆದಿತಾಳ

ಮಾಯದೊಳಗೆ ಬಿದ್ದು ಮರುಳಾಗದಿರು ನಿನ್ನ। ಬಾಯ ಮುಚ್ಚದಲೆ ಶ್ರೀಹರಿಯ ನೆನೆಸುವದು। ಕಾಯದಲ್ಲಿದ್ದ ಕರ್ಮ ನಾಶನವಾಗಿ। ನ್ಯಾಯ ಲೋಕದಲಿ ಸಂಚರಿಸೋದು ಸತತದಲ್ಲಿ। ಮಾಯಾರಮಣ ನಮ್ಮ ವಿಜಯ ವಿಠ್ಠಲರೇಯ। ತಾಯಿ ತಂದೆ ಸಾಕುವನಂಬು ನಂಬು ನಮಿಸಿ ॥೫॥

### ಜತೆ

ಕಾಲ ನಿನ್ನದಲ್ಲ ವ್ಯಾಳಿ ವ್ಯಾಳಿಗೆ ಸಿರಿ ।
ಲೋಲ ವಿಜಯ ವಿಠ್ಠಲನ್ನ ಪೂಜಿಸು ಭಕುತಿಲಿ ॥೬॥



## ಸುಳಾದಿ-೨೧

ಅಸ್ಥಿರವಾದ ದೇಹ ನಂಬಬೇಡ, ಸಂಸಾರದಿ ಸುಖವಿಲ್ಲ. ಪರಮ ಸಖನಾದ ಶ್ರೀಹರಿಯನ್ನು ಭಜಿಸು.

### ರಾಗ-ಭೈರವಿ ಧ್ರುವತಾಳ

ಎಚ್ಚರ ಕೇಳೊ ಮನವೆ ನೆಚ್ಚದಿರು ಈ ಕಾಯ। ನಿಚ್ಚಲ ನಿನ್ನಾಧೀನ ಅಚ್ಚಟ ಇಪ್ಪನೆಂದು। ಬಚ್ಚಲಗಲ್ಲಿಗೆ ನೀಚತನವುಂಟೆ। ರೊಚ್ಚಲ್ಲದೆ ನೋಡೆ ಹೆಚ್ಚಳವಾಗದು। ಹೆಚ್ಚಿನ ಮಮಕಾರ ಪಚ್ಚಿಕೊಂಡಿದ್ದರೆ। ಬೆಚ್ಚಿಸಿದಂತೆ ದೇಹ ಕಚ್ಚಿಕೊಳ್ಳತಕ್ಕದೆ। ಎಚ್ಚತ್ತು ತಿಳಿದುಕೋ। ಹುಚ್ಚಾಗದಿರು ನೀನು ಮುಚ್ಚುಮೊರೆ ಇಲ್ಲದೆ। ಚೆಚ್ಚಾರದಲ್ಲಿ ನುಡಿದೆ ಸಚಿತ್ತನಾಗಿ ಬಾಳು। ಕುಚ್ಚಿತ ಪ್ರವರ್ತಿಸೆ ಕೆಚ್ಚೆದೆ ಯಮಭಟರು। ಚೆಚ್ಚೆ ಬಟ್ಟೆಯಾಮಾಡಿ। ಬಿಚ್ಚಿ ಭಂಗಬಂಡಿಪರು ಬಿಚ್ಚಿಟ್ಟರೀದಾರಿ (ಬಚ್ಚಿಟ್ಟರಿದರಿದು)। ಇಚ್ಛಕನಾಗು ಕಾಲೋಚಿತವೆಂದು ಗ್ರಹಿಸು। ರಚ್ಚಿಗೊಳಗಾಗದೆ ಕೊಚ್ಚಿಹರಿವ ನದಿ। ನೆಚ್ಚಿಕೆ ಇಪ್ಪದಕ್ಕೆ ಮಚ್ಚುಗೊಂಡಿರದಿರು। ಎಚ್ಚರ ಕೇಳು ಮನವೆ। ಅಚ್ಚುತಾನಂತ ನಮ್ಮ ವಿಜಯವಿಠ್ಠಲಹರಿಯ। ಸಚ್ಚರಿತವ ನೆನೆದು ಅಚ್ಚಗತಿಯನೈದೂ ॥೧॥

### ಮಟ್ಟತಾಳ

ಹರುವ ಹರಿಯ ಉದಕ ಕರದಿಂದಲಿ ತಡದು। ಹಿರಿದಾಗಿ ನಿಲಿಸಿ ಮರಳೆ ಈಸುವೆನೆಂದು। ಪರಿ ಚಿಂತಿಸಿದಂತೆ ಧರಣಿಯೊಳಗೆ ಬಂದ। ಶರೀರ ಎನ್ನದೆನಲು ಹುರುಳಿಲ್ಲದೆ ಮಾತು। ಬರಿದೆ ಪೋಗುವದು ಹೊರಗೆ ಹೋಗುವ ಉ। ಸರು ನಿನ್ನಾಧೀನ ಇರಬಲ್ಲದೆ ಮನವೆ। ಬರಿದೆ ನಂಬದಿರು ಮರುಳಾಟದ ಲೀಲೆ। ಸುರಪಾಲಕ ನಮ್ಮ ವಿಜಯವಿಠ್ಠಲನ್ನ ಸ್ಮರಣೆಯಲ್ಲಿ ವಾಸರವನೆ ಪೋಗಾಡು ॥೨॥

### ತ್ರಿವಿಡಿ ತಾಳ

ಎಂಥ ದಯವಂತ ಯದುಕುಲ ತಿಲಕಶ್ರೀ। ಕಾಂತನು ಕರುಣಿಸಿ ಇತ್ತ ಸಾಮ್ರಾಜ್ಯವ। ಎಂತು ಪೇಳಲಿ ಮನವೆ ಚನ್ನಾಗಿ ಲಾಲಿಸು। ಸಂತತ ತೊಲಗದೆ ಹಗಲಿರುಳೂ। ಅಂತರಂಗದೊಳು ಅಪಾರ ಮಹಿಮನು। ನಿಂತು ನಿಮಿಷ ಬಿಡದೆ ರಕ್ಷಿಸುವ। ಕಂತು ಜನಕ ನಮ್ಮ ವಿಜಯವಿಠ್ಠಲ ಹರಿಯ। ಚಿಂತಿಸು ಚಿರಕಾಲ ಚತುರಗುಣದಲ್ಲಿ ॥೩॥

### ಅಟ್ಟತಾಳ

ಕರಚರಣ ಚಕ್ಷುನಾಸ ವದನ ಕರ್ನ। ತರುವಾಯ ಜಿಹ್ವೆ ನಾನಾ ಉಪಾಯವ। ಹರಿ ಪ್ರೇರಕನಾಗಿ ದಿನಪ್ರತಿ ನಡೆಸುತ್ತ। ದುರಿತಗಳಟ್ಟಿ ಕಾಡದಂತೆ ಪರಿಪರಿ। ಕರುಣದಿಂದಲಿ ಪರಿಪಾಲಿಸಿ ಸಂಗಡ। ತಿರುಗುತ್ತಲಿಪ್ಪನು ತನ್ನವ ನಿವನೆಂದು। ಮರಳೆ ಮನಸೆ ನೀನು ಹಲವು ಹಂಬಲಿಸಿ ಪಾ। ಮರನಾಗಿ ಕೆಡದಿರು ಸಂಸಾರವೆಂಬೊದು। ಉರಲು ಪಾಶವು ಕಾಣೊ ಗೆಲಿಪರೊಬ್ಬರಿಲ್ಲ। ಹರಣ ಮೊದಲಾದ ಸಕಲ ಒಡವಿವಸ್ತ। ಹರಿಪಾದಕ್ಕರ್ಪಿಸಿ ಸುಖಿಯಾಗು ಮನವೆ। ಪರಮ ಪುರುಷ ನಮ್ಮ ವಿಜಯವಿಠ್ಠಲನ್ನ। ನೆರೆ ನಂಬೊ ನೆರೆನಂಬೊ ನೆರೆದು ಸಜ್ಜನರೊಡನೆ ॥೪॥

### ಆದಿತಾಳ

ಧರ್ಮ ಮರಿಯದಿರು ನಿರ್ಮತ್ಸರದಲ್ಲಿರು। ಕರ್ಮರ ಕೂಡದಿರು ದುರ್ಮತಿಯಾಗದಿರು। ದುರ್ಮದದಿರದಿರು ದುರ್ಮಾಯಾ ಬಯಸದಿರು। ನಿರ್ಮಳ ತೊರಿಯದಿರು ಮಾರ್ಮಲತು ನಡಿಯದಿರು। ಮರ್ಮವ ಪೇಳದಿರು ವರ್ಮವ ಬಿಡದಿರು। ಚರ್ಮ ದೇಹಕ್ಕೆ ಒಂದು ಮಾರ್ಗವ ತಿಳಿಯೋದು। ಕರ್ಮದಾರಿಯ ಬಿಡು ಧರ್ಮನು ಮೆಚ್ಚುವನು। ಪೇರ್ಮಿ ಎಂಬೊದು ದಾಟಿ ದುರ್ಮಾರ್ಗ ಪಿಡಿಯದಿರು। ನಿರ್ಮಳವಾಗಿದ್ದ

ಅರ್ಮಿಪುರವ ಸೇರು। ಕೂರ್ಮಾವತಾರ ನಮ್ಮ ವಿಜಯವಿಠ್ಠಲನ್ನ। ಸತ್ಕರ್ಮವ ನೆನೆದು ಅಧರ್ಮವ ಕಳಿಯೊ ॥೫॥

**ಜತೆ**

ಸುಖವಿಲ್ಲ ಸುಖವಿಲ್ಲ ಸಂಸಾರವೆಂಬೊದು ।
ಸಖನಾದ ವಿಜಯವಿಠ್ಠಲನ್ನನೆನಿಸು ಮನವೆ ॥೬॥

❖ ❖ ❖

## ಸುಳಾದಿ-೨೨

ಮಾನವದೇಹ ದುರ್ಲಭ ಈ ಶರೀರ ತಪ್ಪಿದರೆ ಮುಂದಾವ ಸಾಧನವಿಲ್ಲ. ಮನುಜ ಶರೀರದಿಂದಲೇ ಸಕಲ ಸಾಧನ, ವೃಥಾಕರ್ಮ ಮಾರ್ಗಕ್ಕೆ ಬೀಳದೆ ಶ್ರೀಹರಿ ನಾಮಾಮೃತವನ್ನು ಸವಿ.

**ರಾಗ-ಸಾರಂಗ ಧ್ರುವತಾಳ**

ಸಾಧನವೆಂಬೊದಿದೆ ಜನ್ಮದಲ್ಲಿಯಲ್ಲದೆ। ನಿಧಾನದಿಂದಲಿ ತಿಳಿಯಲೊ ಮನವೆ। ಆದಾನಾದಕರ್ತ ನಾರಾಯಣನ ದಿವ್ಯ। ಪಾದನಖದಲ್ಲಿದ್ದ ಗುಣವೆ ಕೇಳಿ ಆ। ರಾಧನೆ ಮಾಳ್ಪ ಉಪಾಯವೆಲ್ಲ। ನೀದಾನ ಮೊದಲಾದ ಕಾಯ ಬಂದಾಗ ಸಂ। ಪಾದನೆ ಪುಣ್ಯ ಉಂಟೆ ಇನಿತಾದರು। ಓದನಗೋಸುಗ ವಿಚಿತ್ರ ತತ್ವಂಗಳು। ಕ್ರೋಧನರರ ಬಳಿಗೆ ಪೋಗಿ ಕೊಂಡಾಡಿ ದುರ। ರಾಧನ ತಂದು ಕಾಲವನ್ನು ಕಳೆವೆ ಇದ। ನಾದರು ಕೇಳು ಸಿದ್ಧ ವಿಚಾರಪೂರ್ಣ। ಬೋಧರ ಮತವಸಾರಿ ಭಕುತಿಯಿಂದ। ಭೂ ಧನ ಹೇಮ ರಜತ ಉಂಟಾಗಿದ್ದರೆ ಭೂಮಿ। ರೋಧ ಹಚ್ಚಿಕೊಂಡು ಕೆಡಲಿಬೇಡ। ಬಾಧನವೆಂದರೆ ಮುಂದೆ ಬೀಳೋದೆ। ಅಪ। ರಾಧ ನಡತಿಯಿಂದ ಭಾಗ್ಯನಾಗಿದ್ದ ಸೂ। ಯೋಧನ ಸರ್ವರಾಜ್ಯ

ವಾಳಿದನ್ನ ನೋಡು। ಆದ ನರಕಕ್ಕೆ ತೆರವಿಲ್ಲದೆಂದಿಗವ। ವೇದ ನಾನಾ ಪುರಾಣ ಇತಿಹಾಸ ವಚನ ಪ್ರ ಸಾರನಾಗೆಂದು ಪೇಳು ತಿವಕೊ ಕೇಳೊ। ಭೂದಾನ ಬೇಡಿದ ವಿಜಯ ವಿಠ್ಠಲ ಮಧು। ಸೂದನ ನಿರುತಿರೆ ಅನ್ಯ ಹಂಬಲವೇ ॥೧॥

## ಮಟ್ಟತಾಳ

ಕಲಿಯುಗದೊಳು ಕರ್ಮಂಗಳು ಬಲು ಪರಿಯುಂಟು। ತಿಳಿದು ಮಾಡುವನ್ಯಾರು ನೆಲೆಯ ಬಲ್ಲೆನೆಂದು। ಹಲವು ಬಗೆಯಿಂದ ಘಳಿಗೆ ಬಿಡದೆ। ಕರ್ಮಾ। ವಳಿಗಳು ಮಾಡಲದರೊಳಗೆ ದುರಿತವಕ್ಕು। ಕಲಕಾಲಾ ವೆಗ್ಗಳಿಯರಿಗೆ ದೂರ ಜಲನಿಧಿಯೊಳು ಪೊಕ್ಕು। ನೆಲೆಯ ತಂದವರುಂಟೆ ಬಳಲದಿರು ವ್ಯರ್ಥ। ಕಲಿತಾಪ ಪರಿಹರ ವಿಜಯ ವಿಠ್ಠಲರೇಯನ। ಒಲಿಸಿ ಭಜಿಪದಕ್ಕೆ ಸುಲಭ ಮಾರ್ಗವ ಉಂಟು ॥೨॥

## ತ್ರಿವಿಡಿ ತಾಳ

ಬಲು ಸುಲಭ ಬಲು ಸುಲಭವಾಗಿದೆ ನೋಳ್ಪರಿಗೆ। ಛಳಿ ಘಾಳಿ ಮಳೆ ಸಿಡಿಲು ಬಂದರೆ ಬಿಡದಲ್ಲ। ಹಳೆಯದಾಯಿತೆಂದು ಉದಾಸೀನ ಮಾಡಿ। ಕಳೆವದಲ್ಲ ತಿರುಗಿ ಕೊಡುವದಲ್ಲ। ಬೆಲೆಗೆ ತರುವದಲ್ಲ ಭಯಕೆ ಹುಳುವುದಲ್ಲ। ಬಲವಂತರಿಗೆ ಕೊಟ್ಟು ಮಾರಿ ಬರುವದಲ್ಲ। ಕೆಲವು ದಿವಸಯಿದ್ದು ಓಡಿ ಪೋಗುವದಲ್ಲ। ಬಳಲಿಕೆಯಾಗಿ ಸಾಕೆಂಬೊದಲ್ಲ। ಫಲವಾದರೂ ವೆಗ್ಗಳವಾಗಿ ಬರುತಿದೆ। ಹಲವು ಜನ್ಮದ ಪಾಪ ಪರ್ವತಕೆ। ಕುಲಿಶವಾಗಿಪ್ಪದು ನಂಬಿದ ಭಜಕರ। ಕುಲಕೋಟಿ ಉದ್ಧಾರ ಎಲೊ ಮನವೆ। ಸಲೆ ನಂಬು। ವಿಜಯ ವಿಠ್ಠಲರೇಯನ ನಾಮ। ಘಳಿಗೆ ನೆನೆಯೆ ತನ್ನ ಬಳಿಯಲ್ಲೆ ವೈಕುಂಠ ॥೩॥

### ಅಟ್ಟತಾಳ

ಶತಕೋಟಿ ಜನ್ಮವು ಸತತ ಮಜ್ಜನಾದಿ। ವ್ರತಗಳು ಮಾಡಲು ಗತಿಗೆ ಸಾಧನವಲ್ಲ। ಹಿತವಾಗಿ ಇಪ್ಪದು ಅಮೃತ ಕುಡಿದಂತೆ ಶ್ರೀ ಪತಿಯ ಮಂಗಳನಾಮ ಮತಿಯಲ್ಲಿ ಸ್ಮರಿಸಿ ಶಾ। ಶ್ವತ ವೆಸಗಿದ ಪಾಪ ಪತನವಾಗುವದು ಸಂ। ತತಿ ಸಹಿತಕೆ ವೇಗ। ಶತಪತ್ರ ನೇತ್ರ ಶ್ರೀವಿಜಯ ವಿಠ್ಠಲ ಸಾ। ರಥಿ ಯಾಗುವನು ತ್ವರಿತದಲ್ಲಿ ಬಂದು ॥೪॥

### ಆದಿತಾಳ

ಹರಿನಾಮದ ಮಹಿಮೆಯ ಅರಿದವನಾರು ಮನವೆ। ಮರಳೆ ಸಂಸಾರವೆಂಬೊ ತರುವಿನ ಬೇರು ಸರ್ವ। ಧರೆ ಗಗನ ಪಾತಾಳ ಸುತ್ತಲು ಭೇದಿಸಿದರೆ। ಮರದೊಮ್ಮೆ ನೆನೆದರೆ ಎಲ್ಲಿದ್ದರೂ ಬಂದು। ಭರದಿಂದ ಕಿತ್ತಿ ಭವದ ತರುವಿನ ಪೆಸರನ್ನು। ಇರಗೊಡದಂತೆ ಮಾಡಿ ಮುಂದೆ ಸಾಕುತಿಪ್ಪದು। ಹರಿ ನಾಮ ಹರಿನಾಮ ದುರಿತ ರಾಸಿಗೆ ಭೀಮ। ಹರಿನಾಮ ಒಂದಕ್ಕೆ ಅನಂತ ಬಗೆ ಕರ್ಮ ಸರಿಬಾರವು ಕಾಣೊ ಇದಕೆ ಸಂಶಯವ್ಯಾಕೆ। ಹರಿನಾಮವೆ ತೊರೆದು ಕರ್ಮ ಮಾಡಲು ದೋಷ। ಕರಗದು ಕರಗದು ಹಿಮ್ಮೆಟ್ಟಿ ಪೋಗದು ಹರಿನಾಮದಲಿ ಪ್ರೀತಿ ಇಟ್ಟು ಕರ್ಮವ। ತೊರದರೆ ಪಾಪಲೇಶವಿಲ್ಲ ಫಲವಕ್ಕು। ಸುರಗುರು ವಿಜಯವಿಠ್ಠಲರೇಯನ ನಾಮ। ಸ್ಮರಿಸಿದಮನುಜಂಗೆ ಸ್ಥಿರವೆನ್ನು ಜ್ಞಾನಭಕ್ತಿ ॥೫॥

### ಜತೆ

ಮನವೆ ಈ ಜನುಮ ತಪ್ಪಿದ ಮೇಲೆ ಆವ ಸಾ।
ಧನವು ನಿಶ್ಚಯವಿಲ್ಲ ವಿಜಯ ವಿಠ್ಠಲನ ಕಾಣೊ ॥೬॥



## ಸುಳಾದಿ-೨೩

ಮಾನವ ಜನ್ಮದಲ್ಲಿ ಭೂಸುರ ಜನ್ಮ ಬಹು ದೊಡ್ಡದು. ಈ ಪರಮ ಭೂಸುರ ಜನ್ಮದ ಇರವುನೋಡಿ ಇದನ್ನು ವ್ಯರ್ಥಮಾಡದೆ ಸಂಸಾರದಿ ಆಸಕ್ತನಾಗಬೇಡ.

### ರಾಗ-ಸಾವೇರಿ ಧ್ರುವತಾಳ

ಅಕಟಕಟ ಜನಿಸಿ ಭಾರಕನಾದೆ ಭೂಮಿಗೆ। ವಿಕಳ ಮತಿಯಿಂದ ಪಾಪಕ್ಕೆ ಎರಗುತ್ತ। ಸಕಲ ಕಾಲದಲ್ಲಿ ಪುಣ್ಯಕ್ಕೆ ಹಾನಿ ಬಗದು ನಿ। ಲಕ ವಿಲ್ಲದಾದ ನರಕಕ್ಕೆ ಪೋಗುವೆ। ಯುಕುತಿಯಲ್ಲಿ ಅಗ್ರ ಜನುಮಕೆ ಬಂದು। ಸುಕೃತಾರ್ಥ ಮುಕುತಾರ್ಥ ತಿಳಿಯದೆ ಹಿಂದಕೆ ಬೀಳುವೆ ಶುಕ ಸೂಕರ ಶು। ನಕ ಜೀವಾದಿಯ ರಾಸಿಕದೊಳಗೆ ಪೊಕ್ಕು। ಹೇಶಿಕೆ ಬಡುತಲಿ ದುಃಖವೆಂಬೊ ವಿಷಯುದ ಪಾ। ವಕದೊಳಗೆ ಬೆಂದು ಸಾಧನ ಮಾಡಿಕೊಂಬುವದಕೆ ಕಾಣೆನೊ। ಅಖಿಳ ಜೀವೇಶ ಮಹಾಮುಖಿ ವಿಜಯ ವಿಠ್ಠಲ। ಪೋಷಕನಾಧಾರಕನುದ್ಧಾರಕನು ನೀನೆ ॥೧॥

### ಮಟ್ಟತಾಳ

ಈ ಜನುಮ ತಪ್ಪಲು ವಾ ಜನುಮ ಬಪ್ಪದು। ಬೀಜ ಮಾತೇ ಇದು ಮಾಜುವದೆ ಅಲ್ಲ। ಜೂಜಾಡಿದಂತೆ ತನ್ನ ಜಯ ಅಪಜಯವು। ಮೂಜಗದೊಳಗೆ ಸಹಜವೆಂಬದೆ ಸಿದ್ಧ। ಬೀಜನಾಮ ವಿಜಯ ವಿಠ್ಠಲ ಮುನಿಗೇಯಾ। ವಾಜಿಗೆಟ್ಟು ಯಮರಾಜನಲ್ಲಿ ಸಿಗುವೆ ॥೨॥

### ತ್ರಿವಿಡಿ ತಾಳ

ಶಿರವೆ ಬಾಗುವದಕ್ಕೆ ನಯನಂಗಳು ನೋಡಿ। ಹರುಷವಾಗುವದಕ್ಕೆ ಕರ್ನಗಳು ನಿತ್ಯ। ಹರಿಕಥೆ ಕೇಳುವದಕ್ಕೆ ನಾಸಿಕ। ನಿರ್ಮಾಲ್ಯಾ ಘ್ರಾಣಿಸಲು

ನಾಲಿಗೆ ಕೊಂಡಾಡ। ವರ ವದನ ಪ್ರಸಾದವುದರ ತುಂಬುದಕ್ಕೆ। ಕರಗಳು ಸೇವಿಗೆ ಚರಣ ತೀರ್ಥಯಾತ್ರಿಗೆ। ಶರೀರವು ನಿನ್ನ ಚರಣಕ್ಕೆರಗುವದಕ್ಕೆ। ಕರುಣಿಸಿರಲು ಸರ್ವ ದಯದಿಂದ ಒಲಿದು। ಮರದು ನಿನ್ನಯ ಲೀಲೆ ಮರನಾಗಿ ಬೆಳದು ಭೂ। ಸುರ ದೇಹ ಕೆಡಿಸಿದೆ ಶರಣ್ಯ ವಿಜಯ ವಿಠಲಾ ॥೩॥

### ಅಟ್ಟತಾಳ

ಚರಿಸಿ ಬರುವದಕ್ಕೆ ಪರಿ ಪರಿ ದೇಶಗಳ। ತಿರು ತಿರುಗಬೇಕಾದರೆ ಮಾರ್ಗವ। ಹರಿ ಹರಿದಾಗೆ ಒಂದೊಂದು ಪುರಗಳು। ವಿರಚಿಸಿ ತಪ್ಪಿ ಪೋಗದಂತೆ ದಶದಿಕ್ಕು। ವರ ತೃಷಿ ಹಸಿವಿಗೆ ಕೆರೆ ತೊರೆ ಫಲಗಳು। ಇರಬೇಕಾದರೆ ಗಿರಿ ಗಹ್ವರ ಚಂದ। ನೆರವ ಬರುವದಕ್ಕೆ ತತ್ವಾಭಿಮಾನ್ಯನು। ಧರಿಯಂಬರ ಪಾಸಿಕೆ ಹೊದಿಕೆ ಮಾಡಿ। ಪೊರವನುದಿನ ಒಡನೊಡನೆ ಯಿದ್ದು। ಉರಿ ವಾರಿಗಳು ಬಂದಡರದಂತೆ ಮಹ। ವರಹ ವಿಜಯ ವಿಠ್ಠಲ ನೀನೇ ಗತಿ ಎನಲು। ಮರಣ ಕಾಲಕೆ ತನ್ನ ಸ್ಮರಣೆ ಪಾಲಿಸುವನು ॥೫॥

### ಆದಿತಾಳ

ಇಂತು ಹರಿ ಕರುಣಿರಲು ಚಿಂತಿಮಾಡಿ ವ್ಯರ್ಥನಾನು। ಸಂತಾಪವ ಹಚ್ಚಿಕೊಂಡು ಭ್ರಾಂತಿಯಲ್ಲಿ ಕೆಡುವದು। ಸಂತೆಕೂಟ ನೆರೆದ ತೆರದಂತೆ ಸಂಸಾರದ ಮಾಯಾ। ತಂತ್ರದಲ್ಲಿ ಸಿಗಬಿದ್ದು ಅಂತಿಗೆ ಭಂಗವಾಗೋದು। ಎಂತು ಪೇಳಲಯ್ಯಾ ಏಕಾಂತ ಹರಿಯ ಪಾದ। ಕ್ರಾಂತನಾಗಿ ಕಷ್ಟವಿಲ್ಲದ ಪಂಥವ ಪಿಡಿಯುಲೊಲ್ಲದು। ಶಾಂತಿದ ವಿಜಯ ವಿಠ್ಠಲನಂತ ಮಹಿಮಬಲುದಯಾಳು ಚಿಂತೆಯನು ಕಳೆದು ತನ್ನವರಂತೆ ಮಾಡಿ ಸಾಕುವನು ॥೫॥

**ಜತೆ**

"ಪರ ಮಿತ್ರೇತಿ ಸ್ವಸ್ತಯೇ ಪರಿಪೂರ್ಣಾರ್ಯಕಾಮಾಯಾ ।"
ಹಿರಣ್ಯ ಗರ್ಭನಾಮಾ ವಿಜಯ ವಿಠ್ಠಲ ಧೊರಿಯೆ ॥೬॥

❖ ❖ ❖

## ಸುಳಾದಿ-೨೪

(ನಾಮ ಮಹಿಮಾ)

ಶ್ರೀ ಹರಿನಾಮವೆ, ಸಂಸಾರತಾರಕ-

**ರಾಗ-ತೋಡಿ ಧ್ರುವತಾಳ**

ನಾಮವೆ ನೆನೆಯೋದು ನಾಮಧಾರಿಯಾಗಿ। ನೇಮವ ಬಿಡದೇ ಕಾಮೇವಹರಿಯೆಂದು। ಕಾಮ ಕ್ರೋಧ ಮತ್ಸರಾದಿ ಮರಿಯಾದಿಗಳ। ನೀ ಮರೆದು ನಿತ್ಯರೋಮಾಂಚನದಿಂದ। ತಾಮಸ ಗುಣಗಳ ಕಾಮಿಸದಲೆ ನಿ। ಷ್ಕಾಮದಲ್ಲಿ ಬಾಷ್ಪೋದಕ ಸುರಿಸುತ್ತ। ಶ್ರೀ ಮಾರುತನ ಮತವಾ ಮಹೋದಧಿಯೊಳು। ತ್ತಮ ಮನಸಿನಲ್ಲಿ ಶ್ರೀಮದ್ರಿಯನ್ನೆ ಧರಿಸಿ। ಕೋಮಲ ನೀನಾಗಿ ತುಲಸಿ ಮಾಲಿಕೆ ಇಂದ ಶ್ರೀ ರಮಣ ವಿಜಯ ವಿಠ್ಠಲ ಸರ್ವ। ಸ್ವಾಮಿಯ ಒಂದೆ ಸಾರಿ ನಾಮವ ನೆನೆವದು ॥೧॥

**ಮಟ್ಟತಾಳ**

ಕೃತಾಯುಗದೊಳಗೆ ಅಪರಿಮಿತ ಧ್ಯಾನವನ್ನು। ಮಿತಿ ಇಲ್ಲದಂತೆ ಸತತ ಮಾಡಿದರನ್ನ। ತ್ರೈತಿಯುಗದೊಳಗುನ್ನತ ದಾನದಿಂದ। ಅತಿಶಯವಾಗಿ ಸಮ್ಮತವೆನಿಸಿದರನ್ನ। ಚತುರ ದ್ವಾಪರದಲ್ಲಿ ಪ್ರತಿದಿನ ಬಿಡದಲೆ ಹಿತವಾಗಿ ಕರ್ಮ ಪ್ರತಿ ಇಲ್ಲದಲೆ ಮಾಡೆ। ಗತಿಗೆ ಸಾಧನವಲ್ಲ ಪ್ರತಿಕೂಲವಲ್ಲದಲೆ। ಮತಿವಂತರ ಪ್ರೀಯ ವಿಜಯ ವಿಠ್ಠಲನ್ನ। ಕಥನ (ಕಥೆನಾ) ನಾಮಾಮೃತಕೆ ಪ್ರತಿಗಾಣೆ ಕಲಿಯುಗದಿ ॥೨॥

### ತ್ರಿವಿಡಿತಾಳ

ಧ್ಯಾನ ಮಾಡುವೆನೆನಲು ಹೀನವಲ್ಲದೆ ಮನಸು। ತಾ ನಿಲ್ಲದು ಒಂದು ಕ್ಷಣವಾದರು ದಾನ ಮಾಡುವೆನೆ ನಿದಾನಿಸಲು ದ್ರವ್ಯ। ಏನೇನು ಶುಚಿಯಿಲ್ಲ ಅನಂತ ಕಾಲಕ್ಕು। ಆನಂದದಿಂದಲಿ ಭಾನು ಉದಯಾಸ್ತ ಮಾನ ಪರಿಯಂತ ಮಾಣದಲೆ ಕರ್ಮ। ಜಾಣತನದಿಂದಲಿ ತಾ ನೆಸಗಿದರು। ಕ್ಷೀಣವಲ್ಲದೆ ಇದು ಪೂರ್ಣವಿಲ್ಲ। ಧ್ಯಾನ ದಾನ ಕರ್ಮವನು ಕೈಕೊಂಡರು। ಆನಂದವಾದ ಸೋಪಾನಕ್ಕೆ ಪಥವಲ್ಲ। ಶ್ರೀನಾಥ ವಿಜಯ ವಿಠ್ಠಲನ್ನ ನಾಮಕ್ಕೆ। ಕಾಣೆನೊ ಪ್ರತಿಕಕ್ಷಿ ಆವ ಕರ್ಮಾದಿಯಲ್ಲಿ ॥೩॥

### ಅಟ್ಟತಾಳ

ಧ್ಯಾನ ದಾನ ಕರ್ಮ ಏನೇನು ಮಾಡಲು। ಊನವಲ್ಲದೆ ಸಂಪೂರ್ಣವಾಗದು ಕಾಣೋ। ಕ್ಷೋಣಿಯೊಳಗೆ ಸಮಾನವಿಲ್ಲದ ನಾಮ। ದೀನನಾಗಿ ನಿಂದು ದಿನಕ್ಕೊಮ್ಮೆ ನೆನೆದಡೆ। ಧ್ಯಾನ ದಾನ ಕರ್ಮ ಆವಾವ ಕಾಲಕ್ಕೆ। ತಾನೆಸಗಿದ ಫಲಕೆ ನೂರು ಮಡಿಉಂಟು। ದಾನವಂತಕ ರಂಗ ವಿಜಯ ವಿಠಲನ್ನ। ಚೂಣಿಗೆ ನೆನಸಲು ಮಾಣದಲೆಗತಿ ॥೪॥

### ಆದಿತಾಳ

ಆವ ಸವಿಯೋ ಆವ ರುಚಿಯೋ। ಆವ ನಂದವೋ ಆವ ರಸವೋ। ಆವ ಸೌಖ್ಯವೊ ಆವ ಮೋಹವೊ। ಆವ ಹಿತವೋ ಆವ ಕುರುಹವೋ। ಆವ ಮಹತ್ತವೋ ಆವ ಅಣುವೋ। ಆವ ಚಂದವೋ ಆವ ತರುವೋ। ಆವ ಧೇನುವೋ ಆವ ರಸವೋ। ಆವ ಮೂಲವೋ ಆವ ವರ್ನವೋ। ಆವಧೋ ಶ್ರೀ ಹರಿಯನಾಮಾ। ಪಾವನ ವಾದ ಮಹಿಮೆ। ಶ್ರೀವಿಭುವೆ ವಿಜಯ ವಿಠ್ಠಲ। ದೇವನಂಘ್ರಿ ನಂಬು ಮನವೆ ॥೫॥

### ಜತೆ

ನಾಮದಿಂದ (ದಿಂದಾದ) ಗತಿ ಮಿಕ್ಕಾದದರಿಂದಿಲ್ಲಾ ।
ರಾಮ ನಾಮ ನೆನೆಯೋ ವಿಜಯ ವಿಠ್ಠಲರೇಯನ ॥೬॥

❖ ❖ ❖

## ಸುಳಾದಿ-೨೫

(ನಾಮ ಸಂಕೀತನ ಪ್ರಸಂಶದ)

### ರಾಗ- ಭೈರವಿ ಧ್ರುವತಾಳ

ಇದೆ ಭಾಗ್ಯ ಇದೇ ಭಾಗ್ಯ ಕಲಿಯುಗದಲ್ಲಿ ನಿನ್ನ। ಪದಯುಗ್ನ ಸಂಕೀರ್ತನೆ ಚನ್ನಾಗಿ ವಾಡಿ ಸಂ। ಪದಯುಗ್ಮ ಸಂಕೀರ್ತನೆ ಮನೋವಾಚ ಕಾಯದಲ್ಲಿ। ಇದಕ್ಕಿಂತಧಿಕವಾದ ಭಾಗ್ಯವಿಲ್ಲ। ಉದಯ ಕಾಲದಲ್ಲೆದ್ದು ಸ್ನಾನ ನಾನಾಕರ್ಮ। ಇದರ ತರುವಾಯ ವಿಪ್ಪವಯ್ಯಾ। ನಿಧಿನಿಧಿ ಎಸಗಿದೆ ಮತ್ತೊಂದುಮಾರ್ಗ ಕಾಣೆ। ಸದಮಲಾನಂದ ಮೂರ್ತಿ ಭಕ್ತರೊಡಿಯಾ। ಬುಧರು ಪೇಳುವರು ಮಹದುರಿತಕ್ಕೆ ಇದೆ। ಇದೆ ಪ್ರಾಯಶ್ಚಿತವೆಂದು ಒಲಿದೊಲಿದು। ಹೃದಯದೊಳಗೆ ತಿಳಿದು ನೆರೆನಂಬಿದೆ ನಿನ್ನ। ಪದಗಳ ಕೊಂಡಾಡುವ ಕೀರ್ತನೆಯು। ವಿಧದಿಂದಾಗಲಿ ಒಬ್ಬರನೋಡಿ ಮಾಡಲಿ। ಸುಧಿಯನ್ನು ಕುಡಿದಂತೆಯಾಗುವದು। ಮದ ಗರ್ವ ನಾನಾದರು ನಿನ್ನ ನಾಮದ ಮಹಿಮೆ। ಪದೋ ಪದಿಗೆ ಎಣಿಸಿದರು ನೆಲೆಗಾಣೆನೂ। ತ್ರಿದಶರಿಗೆ ಮೀರಿದ ವಿಜಯವಿಠ್ಠಲ ವೆಂಕಟ। ಮುದದಿಂದ ನಿನ್ನ ನಾಮ ಎನ್ನ ಜಿಹ್ವೆಯಲ್ಲಿರಲಿ ॥೧॥

### ಮಟ್ಟತಾಳ

ನಾನಾ ವ್ಯಾಪಾರ ನಿನ್ನಾಧೀನವು। ನಾನಾ ಸಂಪತ್ತು ನಿನ್ನಾಧೀನವು। ನಾನಾ ಲೋಕಂಗಳು ನಿನ್ನಾಧೀನವು। ನಾನಾ ಜಡಗಳು ನಿನ್ನಾಧೀನವು। ನಾನಾ ಜೀವರು ನಿನ್ನಾಧೀನವು। ನಾನಾ ಕರ್ಮಗಳು ನಿನ್ನಾಧೀನವು। ನಾನಾ ಪ್ರೇರಣೆ ನಿನ್ನಾಧೀನವು। ನಾನಾ ವ್ಯಾಪಕ ನಿನ್ನಾಧೀನವು। ನಾನಾ ಬಗೆಯಿಂದ ವ್ಯಾಪ್ತ ನೀನಾಗಿದ್ದು। ನಾನಾ ಗುಣದಿಂದ ತಿರುಗಿಸುವ ದೇವ। ನೀನೇ ಇದನೆ ಮರದು ನಾನು ನನ್ನದು ಎಂದು। ನಾನಾ ಗರ್ವದಲಿ ನುಡಿದು ನುಡಿದು ಬಲು। ನಾನಾ ಯೋನಿಯಲ್ಲಿ ಚರಿಸಿದೆ ದುಃಖದಲ್ಲಿ। ನಾನು ನೀನೆ ಎಂಬ ಜನಕೆ ಬರುವ ಶೋಕ। ಏನೆಂಬೆನು ಎಣಿಸಿ ಕಡೆ ಮೊದಲೆ ಕಾಣೆ। ಜ್ಞಾನ ಪರ್ವತ ವಾಸ ವಿಜಯವಿಠ್ಠಲ ವೆಂಕಟ। ಜ್ಞಾನಿಗಳರಸೆ ನಿನ್ನ ಪೊಗಳುವೆನೋ ॥೨॥

### ತ್ರಿವಿಡಿ ತಾಳ

'ನಾಹಂ ಕರ್ತಾ ಹರಿಕರ್ತಾನೆಂಬೊ' ವಚನವೆ ಮರದು। ಅಹಂಮತಿಯಿಂದಲಿ ತಿರುಗಿ ತಿರುಗೀ। ದ್ರೋಹವ ಘಳಿಸಿದೆ ಮಾಯಾಪಾಶದವೊಳಗೆ। ಮೋಹದಿಂದಲಿ ಬಿದ್ದು ಬಹು ಕರ್ಮವ। ಸಾಹಸದಲಿ ಮಾಡಿ ಬರಿದಾದೆ ಎಲ್ಲೆಲ್ಲಿ। ಹೋಹದಲ್ಲದೆ ಲೇಶ ಸುಖಗಳಿಲ್ಲ। ಶ್ರೀಹರಿ ಕೇಳಯ್ಯಾ ಎನ್ನ ಮೊರೆಲಾಲಿಸೊ। ಈ ಹದನ ಕಲ್ಪಿಸಿದವರು ಆರೋ। ಪಾಹಿ ಪರಮ ಪುರುಷ ಪ್ರಣತಾರ್ಥಿಹರ ಸಂ। ದೇಹವಿಲ್ಲದೆ ಎನ್ನ ಮನ ದೈವವೇ। ಬಾಹಿರಂತರ ಪ್ರೇರಕ-ಪರಿಪೂರ್ಣನಾದಣು। ಮಹತ್ತರೂಪನೆ ಸ್ಥೂಲ ಸೂಕ್ಷ್ಮ ದೇಹದೊಳಗೆ ಇದ್ದು ದ್ವಿವಿಧ ಕರ್ಮಂಗಳು। ದೇಹಿಗಳಿಗೆ ಒಂದೊಂದು ಕಟ್ಟಿ ಸೋಹಂ ದಾ। ಸೋಹಂಮೆಂದು ನುಡಿಸಿ ಪುಣ್ಯಪಾಪ। ನೀ ಹಿತದಿಂದಲಿ ಉಣಿಸುವನೆ। ದ್ರುಹಿಣಪಿತ ನಮ್ಮ ವಿಜಯವಿಠ್ಠಲ ವೆಂಕಟ। ಸ್ನೇಹದಿಂದಲಿ ಎನಗೆ ಇದನೆ ಕರುಣಿಸಬೇಕು ॥೩॥

**ಅಟ್ಟತಾಳ**

ಎನ್ನ ಮನಸು ನಿನ್ನ ನಾಮ ಸ್ಮರಣೆಯಲ್ಲಿ। ಘನ್ನವಾಗಿ ಎರಗಿದೆ ಪ್ರಾಚುರ್ಯದಿ। ಇನ್ನೊಂದು ಕರ್ಮವ ಮಾಡಬೇಕಾದರು। ಉನ್ನತವಾಗಿ ವಲ್ಲೆನಯ್ಯಾ ತಿರ್ಮಲ। ಚನ್ನಾಗಿ ನೀನಿದ್ದು ಇದೇ ಸಾಧನವನ್ನು। ಅನಂತಕಾಲಕ್ಕೂ ಮಾಡಿಸಿಬೇಡುವೆ। ಬನ್ನ ಬಡಿಸುವ ಪಾಪ ಕಳೆಯುತ್ತ। ನಿನ್ನ ಮೂರ್ತಿಯನ್ನು ಮನದೊಳು ತೋರುತ್ತ। ಎನ್ನ ಭಾಗ್ಯವಿದೆ ವಿಜಯ ವಿಠ್ಠಲ ವೆಂಕಟ। ರನ್ನ ರಾಗದೂರ ರಾಜೀವನೇತ್ರ ॥೪॥

**ಆದಿತಾಳ**

ದನುಜ ಭಂಜನ ರಂಜನ। ಇನಪ್ರಕಾಶ ನಿರಂಜನ। ಜನ ಪರಿಪಾಲಕ ಅಂಜನ। ತನುಜವಿನುತ ಕಂಜನ। ಮನದಲಿ ಇಡು ಪ್ರಭಂಜನ। ಅನುಮತವಾದರೆ ವೊಲಿವ। ಅಂಜನಾಭ ವಿಜಯವಿಠ್ಠಲ। ಅಂಜನಗಿರಿವಾಸ ವೆಂಕಟ ॥೫॥

**ಜತೆ**

ಭಕ್ತಿಲಿ ಕೀರ್ತನೆ ಮಾಡುವಂತೆ ವೊಲಿಯೆ।
ಮುಕ್ತಿದಾಯಕ ನಮ್ಮ ವಿಜಯವಿಠ್ಠಲ ವೆಂಕಟ ॥೬॥



## ಸುಳಾದಿ-೨೬

(ಶ್ರೀಹರಿಯವಾಮ ಪ್ರಶಂಸನ)

**ರಾಗ-ಕಲ್ಯಾಣಿ ಧ್ರುವತಾಳ**

ಚಿಂತಿಪದೇನು ಮನವೆ ಸಂತತದಲ್ಲಿ ನೀನು। ಅಂತರಂಗದಲ್ಲಿ ಸಂತಾಪದ ಕಿಂತು ಹಚ್ಚಿಕೊಂಡು। ಮಂತ್ರಗಳಿಲ್ಲ ಎನಗೆಂತು ಸಾಧನವೆಂದು

ಚಿಂತಿಸದಿರು। ಮಂತ್ರ ತಂತ್ರಾದಿಯು ಗ್ರಂಥಗಳಿಗೆ ಲಕುಮಿ। ಕಾಂತನನಾಮವೆಸಂತತದಲ್ಲಿ ಅಂತರಂಗದಲ್ಲಿ। ಚಿಂತೆ ಮಾಡಲು ಅಂತೆಕಾಲಕ್ಕೆ ಬಂದು। ಸಂತಾಪವಿಟ್ಟ ಅಂತಿಜಗಾದರೂ ಅಂತಕನ ಉಪದ್ರ। ಶಾಂತಿಯ ಮಾಡುವ ಕಂತು ಜನಕ। ಮಂತ್ರ ತಂತ್ರಾದಿಯ ಅಂತರಾತ್ಮಕ ಬಲು। ಶಾಂತ ವಿಜಯ ವಿಠ್ಠಲಂತರ ಗೋಳಿಸ ॥೧॥

### ಅಟ್ಟತಾಳ

ಜನನಿಯ ಗರ್ಭದಲಿ ತಂದಿಟ್ಟವನಾರು। ಜನನವಾಗುವಾಗ ಧರೆಗಿಳುಹಿದನಾರು। ಜನಸಿದ ತರುವಾಯ ಸಾಕುವ ಪಿತನಾರು। ಜನರೊಳಗೆ ನಡಿಸಿ ನುಡಿಸುವ ಪ್ರಿಯನಾರು। ಜನಕ ಸುತೆ ಪ್ರೀಯ ವಿಜಯವಿಠ್ಠಲರೇಯ ಕನಸಿನೊಳಾದರು ಪೊರೆವನು ಸ್ತುತಿಸಲು ॥೨॥

### ತ್ರಿವಿಡಿ ತಾಳ

ಕಾಮ ಕ್ರೋಧವ ಬಿಡಿಸಿ ಕಪಟ ಬುದ್ಧಿಯ ಕಳೆದು। ತಾಮಸ ಗುಣವೆಲ್ಲ ಕಡಿಗೆನೂಕಿ। ವ್ಯಾಮೋಹ ಲೋಭವ ದೂರದಲ್ಲಿ ನಿಲ್ಲಿಸಿ। ಹೇಮಾದಿಗಳ ಕಾಂಕ್ಷಾ ಪೋಗಾಡಿಸೀ। ನೇಮ ನಿತ್ಯವು ಸರ್ವ ನಿನ್ನ ಯೋಗ್ಯತೆವರಿತು ರೋಮ ಡೊಂಕಗೊಡದೆ ನಡೆಸುತಿಪ್ಪ। ಈ ಮರಿಂಯಾದಿಗಳೆಲ್ಲ ಆವ ಮಂತ್ರಗಳಿಂದ ಕಾಮಿಸಲು ವಶವಾದುದೆಂಬಿಯಾ। ಧಾಮಕ್ಕೆ ಸಿಗಬಿದ್ದ ವಿಜಯ ವಿಠ್ಠಲನ್ನ। ನಾಮಾ ಒಂದಿರಲೀಗ ನೀಮನೋರಥನಾದೆ ॥೩॥

### ಅಟ್ಟತಾಳ

ಹಿಂದೆ ನಾನಾಕ ಜನ್ಮಂಗಳಲ್ಲಿ ಪುಟ್ಟಿ ಬಂದತಿ ಕಠೋರ ಪಂಕವ ಮಾಡಿರೆ। ಮುಂದೆ ಹಲವು ಜನನದಲ್ಲಿ ಪೋಗಿ ದು। ರ್ಗಂಧದೊಳಿದ್ದು ದುಷ್ಕರ್ಮವ ಮಾಡಲು। ಸಂದಿಗೊಂದಿ ನಿನ್ನಯ ಕುಲಕೋಟಿ ನೂ।

ರೊಂದು ಜನರು ಕಲ್ಪಕಲ್ಪದಲ್ಲಿ ಬಿಡದೆ। ಒಂದಕೆ ಅನಂತಮಡಿ ಪಾಪಾ ಮಾಡಿರೆ। ಒಂದೇ ಸಾರಿ ಕೃಷ್ಣನಾರಾಯಣ ಮು। ಕುಂದ ಎಂದದಕೇವೆ ಆರಾರ ದುಷ್ಕರ್ಮ। ಬೆಂದು ಪೋಗುವದು ಸಾಲದು ದುರಿತವೊ। ಮಂದಮತಿ ಮನ ಸಂಶಯವಿಡಿಯದಲೆ। ತಂದೆ ವಿಜಯ ವಿಠ್ಠಲನ್ನ ನಂಬಲು ಒಬ್ಬ। ನಿಂದ ಲವನ ಕುಲ ಸಂದೋದು ಗತಿಗೆ ॥೪॥

**ಆದಿತಾಳ**

ಆವಾವ ಮಂತ್ರದಲ್ಲಿ। ಆವಾವ ತಂತ್ರದಲ್ಲಿ। ಆವ ಕಥೆಯಲ್ಲಿ। ಆವಾವ ಬಗೆಯಲ್ಲಿ। ಪಾವನವೆ ಹರಿನಾಮಾ। ಕಾವದು ಭಕ್ತರನೆಂದು। ದೇವಾದಿ ಗಣದೊಳು। ಭಾವುಕೆಂದು ಪೇಳುತಿದೆ। ದೇವ ಮುನಿ ಭಕ್ತರಾದಿ। ನೋವು ಬಂದು ಸಮಯದಲ್ಲಿ। ಕಾವನಯ್ಯನೆಂದು ಕೂಗಿ। ಪಾವನವಾದರು ಕಾಣೊ। (ಗ್ರಾವ) ಗ್ವಹಧರ ವಿಜಯ ವಿಠ್ಠಲ। ದೇವನ ನಾಮವನೆನಿಯೆ। ಈವನು ಬಯಸಿದ ಫಲ। ತಾ ಒದಿಗಿ ಬಂದು ನಿನಗೆ ॥೫॥

**ಜತೆ**

ನಾಮವೆ ಸಕಲಸಾಧನಕ್ಕೆ ಬಲು ಸಾಧನ ।
ನೀ ಮರಿಯದಿರು ವಿಜಯ ವಿಠ್ಠಲನ್ನ ॥೬॥



# ಸುಳಾದಿ-೨೨

**(ಶ್ರೀಹರಿ ನಾಮ ಪ್ರಶಂಸನ)**

ಸಕಲೇಂದ್ರಿಯಾಗಳಿಂದಲೂ ಶ್ರೀಹರಿ ಸೇವೆಗೈದು ಶ್ರೀಹರಿ
ನಾಮಾಮೃತವನ್ನು ಸವಿ.

## ರಾಗ- ಶಂಕರಾಭರಣ ಧ್ರುವತಾಳ

ಮನವೆ ನಿನಗೆ ಸಾಧನವೆ ತೋರುವೆನು ಯಾ। ತನೆ ಯಾಗದಂತೆ ಯಮನ ಪುರದಲ್ಲಿ। ಅನುದಿನದಲೆ ಮಾತನು ಮೀರದಲೆ ಈ ತನುವ ಪಾಲಿಸುವದು ಎನಗೊಲಿದು। ದಿನ ರಾತ್ರಿಯೊಳಗೊಂದು ಕ್ಷಣವಾದರೂ ನಾರಾ। ಯಣನ ಚರಣದ ಸ್ಮರಣೆಯನು ನೆಸಗಿ। ಗಣಣೆ ಕಾಣದ ಬಂದ ಜನುಮ ಜನುಮದ ಪಾಪ। ಗಣವು ಪೋಗದು ಚೇತನ ಉಳ್ಳಾಗ ಘನಪುರುಷ ಯಜ್ಞಾಂಗ ವಿಜಯವಿಠ್ಠಲನ್ನ। ನೆನಹಬಾಹದಕೆ ಸಜ್ಜನರ ಒಡನಾಡು ॥೧॥

## ಮಟ್ಟತಾಳ

ತಿಲಿದಾದರೊವ್ಮೆ ತಿಳಿಯದಾದರೊವ್ಮೆ। ಇಳಿಯೇಶ ನಾಮಾವಳಿಗಳು ಕೊನೆ ನಾಲಿಗೆಯಲಿ ನೆನೆದರೆ। ಹಲವು ಜನ್ಮದಲ್ಲಿದ್ದ ಹೊಲೆ ಪಾಪಳೆಲ್ಲ। ಅಳಿವದು ನಿಶ್ಚಯವೊ ಉಳಿಯವು ಎಳ್ಳನಿತು। ಕಾಲ ಕಾಲಕೆಭರ್ತ ವಿಜಯ ವಿಠ್ಠಲನಿಗೆ। ತೊಳಲುವದು ನಿತ್ಯ ಸಲೆ ಸಲಹು ಎಂದು ॥೨॥

## ತ್ರಿವಿಡಿ ತಾಳ

ಪದ ದ್ವಯ ನೆನಸು ಪುಣ್ಯ ಕ್ಷೇತ್ರಗಳ ಮೆಟ್ಟಿ। ಉದರ ನೆನಸು ಹರಿ ಪ್ರಸಾದದಲ್ಲಿ। ಸದಾ ಕರಗಳ ನೆನಸು ವಿಧಿತ ದಾನದಲಿ। ವದನ ನೆನಸು ಉತ್ತುಮ ವಚನದಲ್ಲಿ ಪದೋ ಪದಿಗೆ ಸಂಗೀತದಲ್ಲಿ ನೆನಸು ಜಿಹ್ವೆ ಸದಮಲ 'ಅಕ್ಷಿಯ' ನೆನಸು ಶ್ರೀಹರಿ ಪಾದದಲ್ಲಿ। ಮುದದಿ ನೆನಸು ಎರಡು ಕರ್ನ ಶ್ರವಣದಲ್ಲಿ। ಹೃದಯ ನೆನಸು ಬಿಂಬ ಧ್ಯಾನದಲ್ಲಿ। ಪದುಮನಾಭ ನಮ್ಮ ವಿಜಯ ವಿಠ್ಠಲನ। ಉದಯಾಸ್ಥ ಮಾನದಲಿ ಈ ದೇಹ ನೆನಸೂ॥೩॥

### ಅಟ್ಟತಾಳ

ವನದೊಳಗೆ ಪೋಗಿ ಮುಣಿ ಮುಣಿಗಿದರೆ। ತನುವಿನ ದುರ್ಗಂಧವನು ಪೋಗೊದಲ್ಲದೆ। ನೆನಿಯದೊ ನೆನೆಮನವು ಮನದ ಮಲಿನ ಹೊರ। ಗಿನ ಜಲದಲ್ಲಿ ನಿರ್ಮಲಿನವಾಗದು ಕಾಣೊ। ದಿನಪ್ರತಿ ತೊಳೆದರೆ ದನುಜಾರಿ ವಿಶ್ವ ಧ್ರು ವಿಜಯ ವಿಠ್ಠಲನ್ನ। ವನಜ ಚರಣ ಧ್ಯಾನವನು ಮಾಡೊ ಮರುಳೆ ॥೪॥

### ಆದಿತಾಳ

ಶ್ರೀಧರನ್ನ ನಾಮವನ್ನು ಸಾಧಿಸಿ ನಾಲಿಗೆ ತುದಿಗೆ। ಆದರದಿಂದೆರಕ ಹೊಯ್ದು ತೋದು ತೋದು ನಾಭಿತನಕ। ಭೇದಿಸಿ ಪಾಪದ ಬಟ್ಟೆ ಭೇದಿಸಿ ಪುಣ್ಯಗತಿಯ। ಹಾದಿಯನ್ನು ಮೆಟ್ಟಿ ಅಹಲ್ಲಾದನಾಗೊ ನಿನ್ನೊಳಗೆ। ವೇದ್ಯ (ವೇದ) ನಾಮ ವಿಜಯವಿಠ್ಠಲ। ಆದಿದೇವ ಸಾಸಿರಪರಾಧವಿರಲು ಹಿಂದುಕಳೆದು। ಕಾದುಕೊಂಬ ಕರುಣದಲ್ಲಿ ॥೫॥

### ಜತೆ

ಎಲ್ಲಿ ನೆನೆದರೆ ಫಲವಿಲ್ಲ ನಿರುತದಲ್ಲಿ ।
ಬಲ್ಲಿದ ವಿಜಯವಿಠ್ಠಲನ ನೆನೆಯಲರ್ಥಿ ॥೬॥



## ಸುಳಾದಿ-೨೮

ಶ್ರೀಹರಿ ನಾಮ ಮಹಿಮೆಯುಕ್ತ ಶ್ರೀಮಧ್ವ ಮತಸ್ತೋತ್ರ ಪೂರ್ವಕ
ಅನ್ಯಮತ ನಿರಸನ

### ರಾಗ-ಭೈರವಿ ಧ್ರುವತಾಳ

ಶಂಕಿಸದಿರಿ ಜನರು ಸರ್ವದ ಹರಿನಾಮ। ಲಂಕಾರವೆನ್ನಿ ಮುಕ್ತಿ ಯೋಗ್ಯರಿಗೆ। ಪಂಕಜ ಸಂಭವಗೆ ಹರಿಗುಣ ತೋರಿದಷ್ಟು।

ಶಂಕರಾದ್ಯಮರರಿಗೆ ತೋರದಯ್ಯಾ। ಡೊಂಕವಾನಿಸ ನವಕವನ ಪೇಳಬಲ್ಲನೆ। ಕೊಂಕುಗಳಲ್ಲದೆ ಅವದಿಲ್ಲಿ। ಪಂಕದೊಳಗೆ ಕ್ಯಾದಿಗೆ ಪುಟ್ಟಿ ಪೊಳೆದಂತೆ। ಪಂಕಜ ನಾಭನ್ನ ನಾಮಸ್ಮರಣೆ। ಪಂಕವುಳ್ಳವ ನಾನು ಚಿತ್ರವಾದ ಕೇತಕಿ। ಅಂಕುರಿಸಿದಂತೆ ಉದ್ಭವಿಸಿತು। ಕಿಂಕರನಾನು ಅನಂತ ಜನ್ಮಕ್ಕೆ ಚ। ಕ್ರಾಂಕಿತರಾದ ಹರಿದಾಸರಿಗೆ। ಸಾಂಕೇತ (ಪಾರಿ) ಪರಿಹಾಸ್ಯ ಅಣಕದಿಂದಲಿ ಕೇಳೆ। ಸಂಕಟ ಪರಿಹಾರ ಮಹಭವದ। ಸಂಕೋಲೆ ಕಡೆದು ಎಂದಿಗೆ ಪೋಗದು ಸುಖ। ಸಂಕುಲದೊಳಗೆ ಲೋಲ್ಯಾಡುವರು। ಕಂಕಣ ಚೂಡಾಸರಿಗಿ ಸರ್ವಾಭರಣನೋಡೆ। ಕುಂಕುಮದ ಬೆಲೆ ಅಲ್ಪವಾಗೆ ಅ। ಲಂಕಾರದಲ್ಲಿಗೆ ಶೋಭಿಸುವದು ಕಾಳಂಕ ಎಂದೆನಿಸೋದೆ ನೋಳ್ಪರಿಗೆ। ಸಂಕರ ಮತವೆಂಬೊ ಮದಸೊಕ್ಕಿದಾನಿಗೆ ಭ। ಯಂಕರ ವಾದದಿದು ಮೃಗಶ್ರೇಷ್ಠನು। ಬಿಂಕದ ಮಧ್ವಮತ ಕೇವಲ ಅನುಸರಿಸಿ। ಸಂಕೋಚವಾದರು ಸಮ್ಮತವು। ಲೆಂಕಾಧೀಶ ಪಾಲಾ ವಿಜಯ ವಿಠ್ಠಲನಂಘ್ರಿ। ಸೋಂಕಿದ ದಾಸರ ಪಡಿ ತೊತ್ತುಗಳ ತೊತ್ತು ॥೧॥

## ಮಟ್ಟತಾಳ

ಎಲವು ಶಂಖವು ಎರಡು ಬಿಳಪು ಎಂಬೊದು ಸಿದ್ಧ। ಕಲಿಯುಗದೊಳಗಿದು ಎಲ್ಲೆಲ್ಲರು ಬಲ್ಲರಯ್ಯಾ। ಎಲುವಿನೊಳಗೆ ತುಂಬಿ ಜಲವೆರಿದರೆ ಅದು। ಸಲೆ ತೀರ್ಥವೆಂದು ಕೊಳಬಲ್ಲರೆ ಜನರು। ಪೊಳೆವ ಶಂಖದಲ್ಲಿ ಜಲವನೆ ತಂದು ನಿರ್ಮಳದ ಗಂಡಕಿಯ। ಶಿಲಿಗೆ ಎರೆದರೆ ತೀರ್ಥನಿಲುವರು ಅಹುದೆಂದು। ಸುಲಭ ಮನದಲ್ಲಿ ಹಿಂಗಳೆಯದೆ ಸೇವಿಸಿ। ನಲಿ ನಲಿದಾಡುವರು। ಹಲವು ಮತವ ಪೊಂದಿ। ಘಳಿಗಿಯೊಳಗೆ ಕವನ ಬಲು ಪೇಳಿದರದು। ಎಲುವಿನೊಳಗೆ ಗಂಗಾಜಲ ತುಂಬಿದಂತೆ। ಫಲಕೆ ಬಾರದು ಕಾಣೊ ಬೆಲೆಗೆ ಸಲ್ಲದು ಕಾಣೊ। ಇಳಿಯೊಳಗೆ ಸಿದ್ಧ ಅಲವಬೋಧರ ಮತವೆ। ಕಲುಮಿಷವಿಲ್ಲದಿರೆ ಜಲಜನಾಭನ ಕೃಪಾ। ಜಲಧಿಯಾಗಿ ಎನ್ನ ಹಳಿಯೆ ಫಲಂಗಳು। ತಿಳಿದು ವೈಷ್ಣವ ಕುಲದಿ ನೆಲೆ

ಮಾಡಿದನು ವ್ಯಾ। ಕುಲವೆಲ್ಲ ಬಿಡಿಸಿ ಜಲಜದೊಳಗೆ ಗಂಗಾ। ಜಲವನೆ ತಂದು ತುಂಬಲು ನೋಡಲು ಕಂ। ಗಳಿಗೆ ವಪ್ಪಿತವಯ್ಯ ಬಲಾತ್ಕಾರವಲ್ಲ ಸುಲಭ ಜನರು ಹರಿ। ವೊಳಗೆ ಪ್ರೇರಿಸಿದರೆ ತಿಳಿದು ಮನ್ನಿಸುವದು। ತಳಮಳಗೊಳ್ಳದಲೆ ಬಲವಂತರ ಗುರು ವಿಜಯ ವಿ। ಠಲನ್ನ ಪೊಳವು ಅಪೇಕ್ಷಿಸುವ ವೊಲಿದು ಕೇಳಿದವ ॥೨॥

## ತ್ರಿವಿಡಿತಾಳ

ಕನಕದ ಗುಂಡು ಪವಳ ಎರಡನೆ ತಂದು। ಹೊಣಿಕೆಯಲ್ಲಿ ಇಟ್ಟು ಪೋಣಿಸಲು। ಜನರಿಗೆ ಪೊಳೆವದು ಎಂದಿಗಾದರು ಮೊ। ಹನ ಮಾಲೆಯಲ್ಲದೆ ಪ್ರತಿ ಪೆಸರೆ। ಎನಿಸೋದೆ ಆವಲ್ಲಿ ವೈದು ತೋರಿದರೆ। ಇನಿತಲ್ಲದೆ ಪಂಡಿತ ಪಾಮರ। ಜನರೊಳಗೆ ಭೇದ ಮತಿವುಂಟು ಪಂಡಿತ। ಜನ ಬೆಲೆಬಲ್ಲದು ತಿಳಿಯರು ಪಾಮರರು। ಅನುದಿನದಲಿ ನಾನು ಪೇಳಿದ ಕವನ ಮೋ। ಹನ ಮಾಲೆಯೆಂದದಿ ವೊಪ್ಪುತಿದೆ। ಮನುಜೋತ್ತಮರೆಲ್ಲ ಬೀಸಿ ಬೀಸಾಟದಲೆ। ಅನುಗ್ರಹ ಮಾಡುವದು ತಪ್ಪು ತಿದ್ದಿ। ಮನದೊಳು ಗುಣಿಸೋದು ಸಂಸ್ಕೃತ ಪ್ರಾಕೃತ। ವನೆಪೇಳಿದದೆ ಮೋಹನ ಮಾಳೆಯೊ। ಎಣೆಗಾಣೆ ಎನ್ನಯ ಗುರುಗಳ ಕರುಣಕ್ಕೆ। ಮಣಿದು ನಮೊ ಎಂಬೆ ಮೂರು ಬಗೆ ಋಣ ಮೋಚನ ನಮ್ಮ ವಿಜಯ ವಿಠ್ಠಲರೇಯನ। ಗುಣ ಕರ್ಮನಾಮಗಳು ನುಡಿದವ ಬಲು ಧನ್ಯ ॥೩॥

## ಅಟ್ಟತಾಳ

ಚಂದ್ರನ ಒಳಗೆ ಕಳಂಕವಿರಲು ನೋಡಿ। ಮಂದಿಯೊಳಗೆ ಬಲು ವಿವೇಕ ಉಳ್ಳವ। ನೆಂದು ಓರ್ವನು ಎದ್ದು ನಿಚ್ಚಣಿಕೆಯನಿಟ್ಟು। ಅಂದಿಸಿಕೊಂಡು ಕಳಂಕ ತೆಗೆದು ಹಾಕಿ। ಬಂದದಲ್ಲದೆ ಬಿಡನೆಂಬೊದು ವಾತು। ಒಂದಲ್ಲದೆ ಶಶಿಕಳಂಕ ಪೋಗೋದೆ। ಚೆಂದದಿಂದಲಿ ಹರಿನುಡಿಸಿದ ಕವಿತ್ವ। ಮಂದಿಗೆ ಕಳಂಕವಾಗಿ ತೋರುತಿದೆ। ರಂಧ್ರ

ಹುಡುಕುವಾಗೆ ಆವದಾದರು ಸೊಟ್ಟು। ತಂದು ಹಾಕುವನಲ್ಲದೆ ಸುಮ್ಮನಿರುವನೆ। ತಂದೆ ಮಾಡಿದ ಬದಕು ಮಗನು ತಿಳಿಯೆ ಅ। ನಂತ ವೇದಗಳಲ್ಲಿ ಪೇಳಿದವಚನ ಗ। ಳೊಂದೊಂದು ಪರಿ ಇರಲು ತಿಳಿವರಾರು। ಸಂದೇಹ ಜನರಿಗೆ ತಮಯೋಗ್ಯರಿಗವ। ರಂದದಿ ತೋರೋದು ಯಾವತ್ತು ಜನ್ಮಕ್ಕೆ ಕಂದರ್ಪ ಪಿತ ನಮ್ಮ ವಿಜಯವಿಠ್ಠಲ ಹರಿಯ। ಮಂದಮತಿ ಜನರು ಕೊಂಡಾಡಬಲ್ಲರೆ ॥೪॥

### ಆದಿತಾಳ

ಸಕ್ಕರಿ ತೂರಿದರೆ ವಿಷ ಹೊರಡುವದೇನೊ। ಹೊಕ್ಕು ನೋಡಿದರೆ ಆಗಮವೆಲ್ಲ ತಿಳಿವದು। ಚಕ್ರಧರನ ದಯವುಳ್ಳವಗೆ ವಿಪರೀತ ದಕ್ಕುವದುರಿಂದ ಭೂಷಣ ಬಪ್ಪುದು। ಅರ್ಕಾದ್ರಿ ಮೊರೆಯಾಗೆ ರಾತ್ರಿಲಿ ದೀಪವ। ಇಕ್ಕೆ ದ್ರವ್ಯ ಇದ್ದಲ್ಲಿ ಕತ್ತಲೆ ಬೀಳುವದು। ಮುಕ್ಕಣ್ಣ ಪರಿಯಂತ ಕಲಿಯ ವ್ಯಾಪಾರ ಯಾ। ತಕ್ಕೆ ಅನುಮಾನ ಮಾನವರಿಗೆ ಸಿದ್ಧ। ಚಕ್ರಿಶಾಯಿ ನಮ್ಮ ವಿಜಯ ವಿಠ್ಠಲನ ಪಾ। ದಕ್ಕೆ ನಮಿಸದವ ಸಂಶಯ ಬಡುವನು॥೫॥

### ಜತೆ

ಉತ್ತಮರಿಗೆ ನಾನು ಬಲುನೀಚ ಬಲುನೀಚ ।
ಚಿತ್ತದೊಡಿಯ ವಿಜಯ ವಿಠ್ಠಲನೇ ಪ್ರೇರಕ ॥೬॥



## ಸುಳಾದಿ-೨೯

ಸಕಲ ಸಾಧನದೊಳಗೆ ಹರಿನಾಮವೆ ಮುಖ್ಯ ಅನ್ಯವಾವುದಿಲ್ಲ.

### ರಾಗ-ಭೈರವಿ ಧ್ರುವತಾಳ

ಶರಣಾಗತ ವಜ್ರಪಂಜರ ಜರಾಮರಣ। ವಿರಹಿತ ವಿಶ್ವಕಾಯಾ ಕುಂಜರ ಪತಿ ಪ್ರಿಯ। ಸರಸ ಸದ್ಗುಣ ಸಾಂದ್ರ ಶರಣು ಯದುಕುಲೇಂದ್ರ

ನಿರಯ ವಿದೂರ ನಿರ್ಜರ ಗಣ ಮನೋಹರ। ಪರಮಾತ್ಮ ಮೂಲ ಪುರುಷ ಅಪರಿಚ್ಛಿನ್ನ ಮೂರುತಿ। ಮುರವೈರಿ ಮುಕುಂದ ಸರಸಿಜನಯನ। ನಿರ್ವಿಕಾರ ನಿರ್ಭಯ ನಿರುಪಮ ನಿರಂಜನ। ಕರುಣ ಶರಧಿಯೆ ಶ್ರೀಧರ ಶ್ರೀನಿವಾಸ। ಸುರರ ಮಸ್ತಕ ಮಣಿ ಪರತತ್ವ ಅಣೋರಣಿ। ತುರಗ ವದನ ದೇವ ವಿಜಯ ವಿಠ್ಠಲರೇಯ। ಸರಿಗಾಣೆ ನಿನಗೆ ಎನಗೆ ಕರುಣ ಮಾಡು॥೧॥

### ಮಟ್ಟತಾಳ

ಸಾಧನ ವೆಂಬೋದು ಆವದು। ಹಾದಿ ಒಂದಾದರು ಕಾಣೆನೊ ಕಾಣೆನೊಕ್ರೋಧ ಮದಗಳಿಂದ ಕಾಲವ ಪೋಗಾಡಿ। ಈ ದೇಹವೆ ವ್ಯರ್ಥವಾಗಿ ದಿನವ ಕಳೆದೆ। ಸಾಧುಗಳ ಸಂಗ ಕ್ಷಣವಾದರು ಮಾಡಿ। ಪಾಥೆ ಬಿಗಿಯಲಿಲ್ಲ ಹರಿ ನಿನ್ನ ನಗರಿಗೆ। ಬೋಧ ಮೂರುತಿ ನಮ್ಮ ವಿಜಯ ವಿಠ್ಠಲ ನಿನ್ನ ಪಾದವ ನಂಬದಲೆ ಪತಿತನು ನಾನಾದೆ ॥೨॥

### ತ್ರಿವಿಡಿತಾಳ

ತಿಳಿದು ತಿಳಿದು ಎನ್ನ ಮನಸು ಚಂಚಲವಾಗಿ। ಸುಳಿಯಂಬೊ ಭವದೊಳು ಶಿಲ್ಕಿ ಸುತ್ತುತಲಿದೆ। ಹೊಳಿಯ ತುಂಬಿದ ವಾರ್ತಿದೂರದಿಂದಲಿ ಕೇಳಿ। ಶಿಲಿಯ ಮೇಲೆ ದಾಟಿ ಪೋಗುವೆನೆಂದು ಯೋಚಿಸಿ। ತಲೆಯಲ್ಲಿ ಧರಿಸಿ ಆ ಹೊಳಿಯ ತೀರಕೆ ಬಂದು। ಜಲದೊಳು ಶಿಲೆ ಇಟ್ಟು ಬೆರಗಾಗಿ ನಿಂತಂತೆ। ಹೊಲೆ ಸಂಸಾರದೊಳು ಶಿಲ್ಕಿ ಇದ್ದು ಈ ಪರಿಯಲ್ಲಿ। ಹಲುಬಿ ಯೋಚನೆ ಮಾಡಿ ಹಕ್ಕಲ ಮನನಾದೆ। ಕಲಿ ವಿನಾಶನ ರಂಗ ವಿಜಯ ವಿಠ್ಠಲ ನೀನೆ। ಸಲಹಬೇಕಯ್ಯಾ ಸಂತತ ಎನ್ನ ಬಿಡದಲೆ ॥೩॥

### ಅಟ್ಟತಾಳ

ಹಾರುವದು ಮನ ಕಂಡ ಕಡೆಯಲ್ಲಿ। ಮೀರುವದು ಎನ್ನ ವಶಕೆ ನಿಲ್ಲಲೇವೆ। ಸೇರುವದು ಅನ್ಯವಚನವೆ ಸವಿಯೆಂದು। ಕೋರುವದು

ದುರ್ಗತಿಪಂಥ ಆವಾಗ। ಜ್ಯಾರುವದು ಸಜ್ಜನರ ಕಾಣುತ ಹಿಂದೆ। ನಾರುವದು ಅಹೋರಾತ್ರಿ ದುರ್ಗಂಧದಲಿ। ತಾರುವದು ಕಿಂಚಿತ ಪುಣ್ಯವಿದ್ದರು। ಸಾರಿದವರ ದಾತಾ ವಿಜಯ ವಿಠ್ಠಲ ಕೃಪಾವಾರಿಧಿಯೆ ನಿನ್ನ ಆರಾಧಸುವೆನೆಂತೊ ॥೪॥

### ಆದಿತಾಳ

ಅಪರಾಧಾನಂತವಿರಲು ಕೃಪೆಯಿಂದಲಿ ನೋಡುತ। ಅಪಾರ ಮಹಿಮನೆ (ನಿಪತನ) ನೀ ಪತನ ಗೈಸೋದು। ಉಪಚರಣೆ ಎನ್ನದೇನೋ ಉಪಕಾರ ನಿನ್ನದಯ್ಯಾ। ಜಪ ತಪದಿಂದಲಿ ಇದು ಉಪಶಮನವಾಗುವದೆ। ಗುಪಿತವಾಗಿದ್ದ ನಾಮಾ ಉಪಗೀತ ಮಾಡಿದರೆ। ತಪಿಸುವ ಕರ್ಮಗಳು ಅಪಹಾಸವಾಗುವವು। ಕಪಟ ನಾಟಕ ನಮ್ಮ ವಿಜಯ ವಿಠ್ಠಲರೇಯ। ಅಪ ವರ್ಗಕೆ ನಿನ್ನ ತಪವ ಒಂದಲ್ಲದೆ ಇಲ್ಲ ॥೫॥

### ಜತೆ

ಸರ್ವಸಾಧನದೊಳಗೆ ನಿನ್ನ ನಾಮಕೆ ಸರಿ ।
ಊರ್ವಿಯೊಳಗೆ ಯಿಲ್ಲ ವಿಜಯ ವಿಠ್ಠಲ ಧೊರಿಯೆ ॥೬॥



## ಸುಳಾದಿ-೩೦

ಸಂಸಾರ ಅಸಾರ, ಸಂಸಾರಾಂಬುಧಿಗೆ ಹರಿನಾಮವೆ ನಾವಿ ಎಂಬುವ ವಿಷಯ

### ರಾಗ-ಭೈರವಿ ಝುಂಪಿತಾಳ

ಸಾರವನು ಮರೆದು ಬೇಸರದಲೆ ನಾನು ಸಂ। ಸಾರವೆಂದೆಂಬ ಅಸಾರದಲ್ಲಿ। ಸಾರಮೇಯಾನಂತೆ ಸಾರಿಸಾರಿಗೆ ಕೆಲ। ಸಾರುತ ತಿರುಗಿದೆನು ಸರಿ ಸರಿದು ಹಾ। ಸರಗತ್ತಿಯಂತೆ ಸಾರಡಿಯ ಪೊತ್ತು ನಿ। ಸ್ಸಾರ

ರವನಾದೆನೊ ಸರಿಯರೊಳಗೆ। ಸಾರಣೆ ಅರಿವೆಗಿಂತ ಸ್ವರಸ್ಯವಿಲ್ಲದಲೆ। ಸಾರದುರಿತ ಪ್ರಸಾರವನು ಉಂಡೆ। ಸರಸಿಜ ನಯನ ನಾಮ ನಾರದ ನಿನ್ನ ದಾ। ಸರ ಸಂಗತಿಯನನು ಸಾರದಲೆ। ಸಾರಲಿಲ್ಲವು ನಿನ್ನ ಸಾರುಸುಧೇನಾಮ ಲೋಕ। ಸಾರಂಗನಾಮ ಶಿರಿ ವಿಜಯ ವಿಠ್ಠಲನೆ ॥೧॥

## ಮಟ್ಟತಾಳ

ತತ್ವ ಗುಣದಲ್ಲಿ ಇತ್ತಂಡದಿಂದ। ಉತ್ತಮ ಮಾರ್ಗಕ್ಕೆ ಹತ್ತುವ ಸೋಪಾನ। ಮತ್ತೆ ರಜೋತಮ ಮತ್ತವ ಬಿಡದಲೆ। ಚಿತ್ತದೊಳಗೆ ನಿತ್ಯ ಸುತ್ತಿಕೊಂಡಿರಲು। ಹತ್ತಿ (ಹೆತ್ತ) ಮೊಸರು ಹಾಕಿ ಬುತ್ತಿ ಕಲಿಸಿದಂತೆ। ಎತ್ತಲು ಪೊಂದದಲೆ ಬತ್ತುವದು ಬುದ್ಧಿ। ಜತ್ತ ವಿಜಯ ವಿಠ್ಠಲಾತ್ತುಮ ಮೂರುತಿ ಸತ್ತಮ ಬಿನ್ನಹ ಚಿತ್ತವಧರಿಸು ॥೨॥

## ತ್ರಿವಿಡಿತಾಳ

ಸುಚಿತ್ತದಲಿ ನಿನ್ನ ಸುಚರಿತ್ರವನು। ಅಚಲ ಭಕ್ತಿಯಲ್ಲಿ ಪೂಜಿಸಲಿಲ್ಲವೋ। ರಚಿಸಿ ಮೇಳವ ನೆನಿಸಿ ವಚನ ಹಾರದಲಿ। ರುಚಿ ಪದಾರ್ಥವ ಬಯಿಸಿ ಬರಿದಾದೆನೋ। ಹುಚ್ಚು ಬಿಟ್ಟ ಶ್ವಾನೊಂದು ಉಚಿತಾರ್ಥ ತಿಳಿಯದೆ। ಅಚಲಕ್ಕೆ ಬೊಗಳಿ ಬಾಯಾರಿದಂತೆ। ಕುಚಿತವ ನಾನಾದೆ ಶುಚಿ ವಿಜಯ ವಿಠ್ಠಲ। ನಿಚಯಘಾರಣ್ಯಕ್ಕೆ ಶುಚಿಯಾಗಿ ನಿಲ್ಲೊ॥೩॥

## ಅಟ್ಟತಾಳ

ಪೂರ್ತಿಯಾಗಲಿ ಎಂದು ಒಡಲಿಗೆ ನಾನಾ ಕಾ। ವಾರ್ತಿಯ ಕಲಿತು ನೆರೆ ಹೊರೆಯವರಿಗೆ। ಆರ್ತಿಯ ಬೆಳಗಿ ಅವರವರಂಶದ। ಕೀರ್ತಿಯು ಕೊಂಡಾಡಿ ಕಿರಿದಾಗಿ ಕರನೀಡಿ। ಸ್ವಾರ್ಥವಲ್ಲದೆ ಪರರುಪಕಾರವಂದಿಲ್ಲ। ನರ್ತದವರಂತೆ ಕೈಯ್ಯ ಮಯ್ಯನು ತೋರಿ। ಅರ್ಥವ ಘಳಿಸಿ ಭಾಗವತ ನೆನಿಸಿದೆ ತೀರ್ಥಕರ ನಾಮ ವಿಜಯ ವಿಠ್ಠಲ ಪ್ರೇಮ। ಕರ್ತು ನಿನ್ನಯಥಾರ್ಥನೆನಿಯದೆ ॥೪॥

**ಆದಿತಾಳ**

ಬೇಡುವ ಮನವೀಯೊ ನಿನ್ನನು। ಕಾಡುವ ಮನ ವೀಯೋ। ಗಾಢವಾದ ರಜೋತಮೊ ಗುಣಗಳು। ಓಡಿಸಿ ಶುದ್ಧಾತ್ಮನ ಮಾಡಿ ಪ್ರತಿದಿನ। ಬೇಡುವ ಮನವೀಯೊ ನಿನ್ನನು। ಕಾಡುವ ಮನವೀಯೋ। ಪಾಡುವೆ ನಿನ್ನಯ ಸಾಸಿರ ನಾಮವ- ವಾಮನ ನಾಮ ವಿಜಯ ವಿಠ್ಠಲ। ಬೇಡುವ ಮನ ವೀಯೊ ನಿನ್ನನು। ಕಾಡುವ ಮನ ವೀಯೋ ॥೫॥

**ಜತೆ**

ಸಂಸಾರಾಂಬುಧಿಗೆ ನಿನ್ನ ನಾಮವೆ ನಾವಿ।
ಹಂಸ ವಿಜಯ ವಿಠ್ಠಲ ನಿನ್ನ ಚರಣವೆ ಧಡಿ ॥೬॥



## ಸುಳಾದಿ-೩೧

ಶ್ರೀಹರಿ ಸ್ಮರಣೆಯೇ ಸಕಲಭಯನಿವಾರಣ

**ರಾಗ-ಕೇದಾರಗೌಳ ಧ್ರುವತಾಳ**

ಭಯವ್ಯಾಕೊ ಮನವೆ ನಿನಗ ಭಕ್ತರಾಧೀನ ನಳಿನ। ನಯನ ನಾರಾಯಣ ಬೆಂಬಿಡದಲೆ। ಪಯಣ ಗತಿಯಲ್ಲಿ ಪಾಲಿಸಿಕೊಳ್ಳುತ ಬರುವ। ದಯವಾರಿಧಿ ದಾನಿ ತನ್ನ ಬಿರಿದು ಬಿಡದೆ। ಬಯಲೇನು ಗಿಡವೇನು ಅದ್ರಿಕಾನನವೇನು। ತ್ರಯಲೋಕದೊಳಗೆ ಹರಿಯೆ ನಮ್ಮ ಸ್ವಾಮಿ। ಜಯವೆ ಕೊಡುತಲಿಪ್ಪ ತನ್ನ ಪಾದವಾ। ಶ್ರಯಮಾಡಿದ ಮನುಜಂಗೆ ತಪ್ಪಗೊಡದೆ। ಹುಯಲಿಟ್ಟ ಕರಿರಾಜನ್ನ ಆಪತ್ತು ಬಿಡಿಸಿದ। ಬಯಸಿದಂತೆ ಬಂದು ಕಾವ ವನಧಿ। ಶಯನ ಸರ್ವಾಂತರ್ಯಾಮಿ ದೈತ್ಯಮರ್ದನ ವಿ। ಜಯ ಸಖ (ಸೂತ) ಸುಖಪೂರ್ಣ ಮನುಜ ಲೀಲಾ। ಪ್ರೀಯವಂತನಾಗಿ ನಮ್ಮನು

ಸಾಕುವನು ಹ್ಯ। ದಯದೊಳಗೆ ತನ್ನನು ತೋರಿಕೊಳುತ। ಭಯದೂರ ಭವಬಂಧನ ವಿಮೋಚನ। ವಿಯದ್ಗಂಗಾ ಪಿತ ನಮ್ಮ ವಿಜಯ ವಿಠ್ಠಲರೇಯ। ಸುಯತಿಯ ಮನೋಹರ ಪರಮವಿನೋದ ಮೂರ್ತಿ॥೧॥

## ಮಟ್ಟತಾಳ

ಕುರುಪಾಂಡವರ ಸಂಗರದೊಳು ಪಕ್ಕಿಯ। ಮರಿಯ ಕಾಯಿದ ನೋಡ್ಯೆ ಧರಣಿಯೊಳಗೆ। ಹರಿಯೆ ಕರುಣಾಳು ತನಕೆ ಸರಿಯಿಲ್ಲ ಇಲ್ಲ। ಸುರರಿಗೆ ಸೋಜಿಗವೊ ಷರಮ ಪುರುಷ। ಹರಿ ವಿಜಯ ವಿಠ್ಠಲರೇಯ। ಶರಣ ಜನರ ಪೊರೆವ ಬಿರಿದು ಬಿಡನು ಕಾಣೊ ॥೨॥

## ತ್ರಿವಿಡಿತಾಳ

ತನ್ನ ಉನ್ನತ ಭಕ್ತಮಾರುತ ದೇವನ್ನ। ಇನ್ನೀ ಸಂಕಲ್ಪಕ್ಕೆ ಲೇಶ ಕೊರತೆ ಮಾಡ ಮುನ್ನೆ ರುದ್ರಾದಿಗಳು ಮಾಡಿದ ಸಂಕಲ್ಪ। ಖಿನ್ನ ಮಾಡಿ ಬಿಡುವ ನಿಮಿಷದೊಳಗೆ। ಘನ್ನ ಪರಾಕ್ರಮ ಕಾವ ಕರುಣೆ ತನಕೆ। ಮನೊ ವಾಚಾ ಕಾಯು ಎಣಿಸೆ ಸಿಗದು। ತನ್ನ ಇಚ್ಛೆ ಬಂದ ತೆರದಂತೆ ಮಾಡಿಸುವ। ಅನ್ಯರನ ಲೆಕ್ಕಿಸ ಕ್ಷಣವಾದರು। ಪನ್ನಗಧರ ಮಿಕ್ಕಸುರರೆಲ್ಲ ಅವರಗಳ। ಚನ್ನಾಗಿ ಕೊಡುವಾಗು ಹರಿ ಪ್ರೇರಣೆ। ಎನ್ನಿಂದ ಕೊಡಸಿದನೆಂದು ತಿಳಿದರೆ ಅವರ। ಮನ್ನಿಸಿ ಪಾಲಿಸುವ ವಿನಯದಿಂದ। ಗಣ್ಯ ಇಲ್ಲದೆ ತಮ್ಮ ಸ್ವಾತಂತ್ರದಲಿ ವರವ। ಉನ್ನತೋನ್ನತ ಕೊಡಲು ಕೆಡಿಸಿ ಬಿಡುವ। ಅನಂತ ಕಲ್ಪಕ್ಕೆ ತನ್ನದೇ ಧೊರೆತನ ಹಿ। ರಣ್ಯ ಕೇಶಾದಿಗಳ ವತ್ತಿ ಆಳ್ವಾ। ಬಣ್ಣಿಸಲಳವಲ್ಲ ಲಕುಮಿ ಕಾಂತನ ಮಹಿಮೆ। ಅನ್ಯಾಯದವನಲ್ಲ ನಿರ್ದೋಷನೋ। ನಿನ್ನೊಳಗೆ ನೀನು ತಿಳಿದು ಭೀತಿಯನು ಬಿಡು। ಬಿನ್ನಾಹವನೆ ಮಾಡು ಮನೊ ದರ್ಮವ ಅಣು। ರಣಿ ಮೂರ್ತಿ ವಿಜಯ ವಿಠ್ಠಲ ಪ್ರ। ಸನ್ನ ವದನ ತನ್ನ ನಂಬಿದವರ ಬಿಡನೋ ॥೩॥

### ಅಟ್ಟತಾಳ

ನಂಬಿ ನಂಬು ಶ್ರೀಹರಿ ಪಾದಾಂಬುಜ। ನಂಬಿದ ಜನರಿಗೆ ಆವಾವ ಕಾಲಕ್ಕೆ। ಇಂಬಾಗಿ ಕ್ಷೀರಾಂಬುಧಿ ತಟಾಕದಲಿ। ತಂಬಾಲತನದಿಂದ ಇದ್ದಂತೆ ಕಾಣಿರೋ। ಹಂಬಲಿಸು ಹಗಲಿರುಳು ನಿನ್ನೊಳಗೆ ಕು। ಟುಂಬಿ ಪಾಲಕ ನಾನಾ ವಿಚಿತ್ರ ಮಹಿಮನ್ನ। ಬೆಂಬಿಡದೆ ನಂಬು ನಂಬು ಭಯ। ವೆಂಬೊದೆ ನಿನಗಿಲ್ಲ ಲೇಶ ಮಾತುರ ಕೇಳು। ಕುಂಭಿನಿ ಪತಿ ನಮ್ಮ ವಿಜಯ ವಿಠ್ಠಲರೇಯ। ಡಿಂಬಿನೊಳಗೆ ನಿಂದು ಪಾಲಿಸುವನು ನಿತ್ಯ ॥೪॥

### ಆದಿತಾಳ

ಧರಣಿ ರಮಣ ದಾಮೋದರ ವರಪ್ರದ ವಾರಿದವರ್ನ। ಸರಸಿಜನಾಭ ಸರ್ವೋತ್ತಮ ಶರಧಿಶಯನ ಶರಣವತ್ಸಲ। ಪರಮ ಪುರುಷ ಪಾವನ ಹರಿ ನಾರಾಯಣ ಹಯಗ್ರೀವ। ಸುರಾರ್ಚಿತ ಸುಖಚರಣ ಗರುಡವಾಹನ ಗಂಗಾಜನಕ। ಅರದೂರ ಅನಂತರೂಪ ಸಿರಿಧರ ವಿಜಯ ವಿಠ್ಠಲರೇಯನ। ಸ್ಮರಣೆ ಮಾಡೆಲೊ ಈ ಪರಿ ನಿನಗೆ ಕರಣ ಶುದ್ಧಿ ಭಯಗಳಿಲ್ಲವೊ ॥೫॥

### ಜತೆ

ಜಯ ಶೀಲ ವಿಜಯ ವಿಠ್ಠಲನಂಘ್ರಿ ಬಿಡದಿರು ।
ಭಯವೆ ಕಾಣಿಸದಿದಕೊ ಎಲ್ಲಿದ್ದರಾದರು ॥೬॥



## ಸುಳಾದಿ-೩೨

ಹರಿನಾಮ ವಿಸ್ಮರಣೆ ಸರ್ವಥಾ ಮಾಡಲಾಗದು.

### ರಾಗ- ಕಾಂಬೋದಿ ಧ್ರುವತಾಳ

ಹರಿಯೆ ಜಗದ ಧೊರಿಯೆ ನಿರುತ ಭಾಗ್ಯದ ಶಿರಿಯೆ। ದುರಿತ ಗಜಕೆ ಸರಿಯೆದನುಜಾರಿಯಾ। ಸ್ಮರಣೆಯ ಮಾಡಲರಿಯಾ ಅರಿಯದ ನರಗುರಿಯ। ಕರಿಸಿ ಯಮ ಪರಿಪರಿಯಾತಿವ ರುರಿಯಾ। ನರಕಾದಿಗೆ ಗುರಿಯಾ ನಿರಿಸುವನು ಘನಸಿರಿಯಾ। ವರ ಕಲ್ಪ ಕಲ್ಪಕ್ಕೆ ದೋಷಕಾರಿಯಾ। ದುರತಿಕ್ರಮ ನಾಮ ವಿಜಯವಿಠ್ಠಲನ್ನ। ಮರಿಯಾದಿರೆ ವಿರಿಂಚಿ ದುರ್ಲೇಖಬರಿಯಾ ॥೧॥

### ಮಟ್ಟತಾಳ

ಸ್ನಾನ ಜಪ ತಪವು ಮೌನವನುಷ್ಠಾನ। ದಾನಪರ್ವಣಿ ಪುಣ್ಯಜ್ಞಾನ ಸುಯಾಗಗಳು। ನಾನಾಕ ಯಾತ್ರೆಗಳು ಏನೇನು ಕರ್ಮನಿ। ದಾನದಿಂದಲಿ ಮಾಡೆ ಶ್ರೀ ನಾರೆಯೆಣನ। ಧ್ಯಾನ ನಾಮಂಗಳು ತಾ ನುಡಿಯದಿರೆ ಕಾಣರು ನಿರ್ವಾಣ। ಅನಾದಿನಿಧನ ವಿಜಯವಿಠ್ಠಲನ್ನ। ನೀನೆ ಎನ್ನದವನು ಜ್ಞಾನಿಯಾದರೇನು ॥೨॥

### ತ್ರಿವಿಡಿತಾಳ

ಹಲವು ವೇದಗಳೋದಿ ಹಲವು ಕೇಳಿದರೇನೂ। ಇಳಿಯೊಳು ಯತಿಯಾಗಿ ಚರಿಸಲೇನೂ। ಬಲು ವಿವೇಕ ಮತಿ ಸತತವಾದರು ತನ್ನ। ಒಳಗಿದ್ದ ನರಹರಿಯ ಗೆಳಿಯನೆಂದರಿಯಾದೆ। ಕಲಿ ಮಾನವನು ಧರ್ಮಾವಳಿ ನೆಸಗಿದರೇನೂ। ಫಲವಿಲ್ಲವೊ ಬಲುಕಾಲ ಬಳಲಿದರೂ। ಬೆಳದ ಗಿಡದ ತುದಿಗೆ ಫಲಪುಟ್ಟಿದಂತೆಯೊ। ಕುಲಜಿ ಮಕ್ಕಳ ಪಡೆದು

ನೆಲೆಯಾಗದಂತೆ। ಜಲಜನಾಭನ ಭಕ್ತಿ ಮಿಳಿತವಿಲ್ಲದ ಧರ್ಮ। ಮಳಲೊಳು ಗೋಕ್ಷೀರ ಎರದಂತೆಯಾಗುವದೂ। ಚಲುವ ಗದಾಗ್ರಜ ವಿಜಯವಿಠ್ಠಲನ್ನ। ಸಲೆನಾಮ ಸ್ಮರಿಸದೆ ಸಂಸಾರ ಹರವಿಲ್ಲ ॥೩॥

### ಅಟ್ಟತಾಳ

ಹರಿನಾಮದಲಿಂದ ಪರಗತಿಯಾದಂತೆ। ಧರೆಯೊಳಗುಳ್ಳ। ವಿಸ್ತಾರ ಕರ್ಮವ ಮರಿಯದೆ ವಿರಚಿಸಿ ಇರಳು ಹಗಲುಯಿರೆ। ಕಿರಿಯ ದೋಷಂಗಳು ತೆರಳಿದಂತೆ ಪೋಗಿ। ತಿರುಗಿ ಸೇರಿಕೊಂಡು ಭರಿತವಾಗಿಪ್ಪೊ। ನರನು ತಿರುಗುತ ಕೆಸರನು ತುಳಿದು ಬಂದು। ಮರಳೆ ಕೆಸರಿನಲ್ಲಿ ಚರಣವ ತೊಳೆದಂತೆ। ಹಿರಿದಾಗಿ ಕರ್ಮವ ಹರುಷದಿಂದಲಿ ಮಾಡೆ। ಪರಿಪೂರ್ಣವಾಗದೆ ದುರಿತ ಸಂಘಟಿಸೋದು। ಸುರಧೀಶ ವಿಕ್ರಮ ವಿಜಯ ವಿಠ್ಠಲನ್ನ। ಸ್ಮರಣೆ ಸರ್ವಕ್ಕೆ ಪ್ರಾಯಶ್ಚಿತ್ತ ಭೂತಾ ॥೪॥

### ಆದಿತಾಳ

ದ್ವೇಷದಲಿಯಾಗಲಿ ಪರಿಹಾಸ್ಯದಲಿಯಾಗಲೀ। ಭಾಸದಲಿ ಆಗಲಿ ಆಭಾಸದಲ್ಲಿ ಆಗಲೀ। ಕ್ಲೇಶದಲ್ಲಿ ಆಗಲೀ ಅಕ್ಲೇಶದಲ್ಲಿ ಆಗಲೀ। ಮೀಸಲಾದ ಅಜ್ಞಾನದಲ್ಲಿ ಆಗಲಿ ಆಶೆಯನ್ನು ಬಿಟ್ಟು ವಿಶೇಷ ಭಕುತಿಯಿಂದಲಿ ದಾಸನೆಂದು ಕೈಯ್ಯಮುಗಿದು ನೀ ಸಲಹು ಹರಿಎನಲು। ಏಸೇಸು ಜನ್ಮದ ಅಘ ನಾಶವಾಗುವದು। ಈಶ ನಹುಷ ವಿಜಯವಿಠ್ಠಲ ಅಶೇಷ ದೋಷ ದೂರ ವಾಸವಾಗಿ ಹೃದಯದೊಳು। ವಾಸನಾಮಯ ನೆನಿಸುವ ॥೫॥

### ಜತೆ

ಹರಿನಾಮದಿಂದಲಿ ಸಂಸಾರ ನಿವೃರ್ತಿ ।  
ಸ್ಥಿರವೆಂದವರ ಬಿಡನು ಸುತಪ ವಿಜಯ ವಿಠ್ಠಲ ॥೬॥



# ಸುಳಾದಿ-೩೩

ಕ್ಷುದ್ರದೇವತೆಗಳ ಪೂಜೆ ಮಾಡುವದು ಬಿಟ್ಟು ಸರ್ವೋತ್ತಮನಾದ ಶ್ರೀ ಹರಿ ನಾಮ ನೆನಿಯುವದು.

**ರಾಗ- ಸಾವೇರಿ ಝಂಪಿತಾಳ**

ಅಂಜುವದು ಸಲ್ಲ ಶ್ರೀಕಂಜನಾಭನ ಪಾದ। ಕಂಜವು ನಿನಗೊಪ್ರ ಪಂಜರವಾಗಿರಲು। ಪುಂಜರ ಪಾಪಗಳು ನಿನ್ನಂಜಿಸ ಬಲ್ಲವೆ। ಕಂಜ ಬಾಂಧವನನುದಿಸೆ ಮಂಜು ಎದರಿಸುವದೇ। ಯಂಜಲ ಮಾತನು (ಕೇಳೆ) ನಂಜಿ ನಂಜಾಡದಿರು। ಬಂಜೆ ಭಕುತಿಯ ಬಿಡು ಭುಂಜಿಸು ಪುಣ್ಯ ಸಮಿ। ತಿಂಜಯ ನಾಮ ಶಿರಿವಿಜಯ ವಿಠ್ಠಲಗೆರಗು। ನಂಜಸುಧಾರಸವು ಅಂಜುಳಿವಿ ಮರುಳೆ ॥೧॥

**ಮಟ್ಟತಾಳ**

ಒಮ್ಮನದಲ್ಲಿರೊ ಒಮ್ಮನದಲ್ಲಿರೊ। ರಮ್ಮೆಯರಸನು ಸಮ್ಮನದಿಂದಲ್ಲಿ। ನಮ್ಮನ್ನು ಪೊರೆವನು ಒಮ್ಮನದಲ್ಲಿರೊ। ರಮ್ಮೆಯರಸ ಪರಬೊಮ್ಮ ಬೊಮ್ಮನಯ್ಯಾ ತಿಮ್ಮ ವಿಜಯ ವಿಠ್ಠಲ ಮಹ ಮೂರುತಿ। ಘಮ್ಮನದಿಂದಲಿ ಬಂದು ದುಮ್ಮನವ ಕಳೆವ ॥೨॥

**ಧ್ರುವತಾಳ**

ವಾರಿಧಿಯು ಮಥಿಸಲು ಘೋರ ವಿಷ ವುದುಭವಿಸಿ। ಮಾರುತನುಂಡು ತೇಗಿದ ಕಾಣಿರೊ। ಮಾರರಿಪು ಧರಿಸಿ ರಘುವೀರನ್ನ ನಾಮದಿಂದ। ಜೀರಣಕ್ಕೆ ತಂದದ್ದು ಧಾರುಣಿ ಅರಿಯುದೆ। ನಾರಾಯಣನೆಂಬ ಸಾರನಾಮಾಮೃತವು। ಭಾರತೀಶನ ಕಾಯ್ದು ಆತನ ಸೇವಕನೆಂದು। ಗೌರೀಶನ ಕಾಯಿತು ಗೌರದಿಂದ। ಚಾರುವಾಕ ಮನವೆ ನಿನ್ನ ಕಾಯಿವದಿರದೆ। ಶ್ರೀರತುನ ಗರ್ಭನು ವಿಜಯ ವಿಠ್ಠಲ ಬಂದು। ಬೇರರಸಿ ಶೀಳಿ ಸಂಸಾರವ ಪರಿವ ॥೩॥

## ರೂಪಕತಾಳ

ತುದಿ ನಾಲಿಗೆಯಿಂದ। ಪದುಮನಾಭನ ನಾಮಾ। ತುದಿಯನ್ನಿತ್ತು ಸೇವಿಸಲು। ಮಧುರಾಮೃತವಾಗಿ। ಕ್ಷುಧೆಬಾಧೆ ಹಿಂಗೋದು ಮದಗರ್ವ ವಡಗೋದು। ಇದೆ ಸವಿದು ಪದೊಪದಿಗೆ। ವಿದುರಾದಿ ಭಕುತರು। ಪದವಿಯ ಸೇರಿದರು। ಯದುಶ್ರೇಷ್ಠ ವಿಜಯ ವಿಠ್ಠಲನ ಒಂದೇನಾಮ। ಹೃದಯದಲ್ಲಿರಿಸೆಘದು। ಉಧದಿ ಬತ್ತುವದೂ ॥೪॥

## ತ್ರಿವಿಡಿತಾಳ

ಮೀನನ ಮರಿಗೆ ಈಸು ಕಲಿಸುವರಾರು। ಮೀನಾಂಕಗೆ ಕಾಮ ತುಂಬಿ ಇತ್ತವರಾರು। ಆನಿಗೆ ಸೊಂಡಿಲ ತೂಗು ಎಂದವರಾರು। ಜ್ಞಾನಿಗೆ ಹರಿನಾಮ ತೋರಿ ಕೊಟ್ಟವರಾರು। ನೀನರಿದು ತಿಳಿದುಕೋ ನಿನಗೆ ಗುರುವಾದರೂ। ತಾನತಿಸೂಕ್ಷ್ಮ ಪೇಳುವನಲ್ಲದೆ। ಹೀನ ಜೀವವೆ ನಿನ್ನ ಧ್ಯಾನಕ್ಕೆ ಮನಬಂದು। ಪ್ರಾಣದ ವಿಜಯ ವಿಠ್ಠಲನ್ನ ಸೂಕ್ಷ್ಮಚರಣವ। ಕಾಣು ಕುಬುದ್ಧಿಗಳಮಾಣು ಗತಿಗೇಣು ॥೫॥

## ಅಟ್ಟತಾಳ

ಕ್ಷುದ್ರದೇವತೆ ಪೂಜೆ ಚಿರಕಾಲ ಮಾಡಲು। ಕದ್ದು ತಿಂದಂತೆಯಾಗುವದು ಸಿದ್ಧ ಛಿದ್ರಗೋಣಿಯಲ್ಲಿ ಉತ್ತಮ ಸರಕನು ತುಂಬೆ। ಬಿದ್ದು ಪೋಗದಲೆ ಸೇರುವದೆ ತನ್ನ। ಉದ್ಧಟತನ ಬಿಡು ಉಚಿತ ಸಾಧನದಿಂದ। ಸಿದ್ಧ ಸಂಕಲ್ಪ ಶ್ರೀವಿಜಯ ವಿಠ್ಠಲನ್ನ। ಉದ್ದಿನಷ್ಟು ನೆನೆದು ಉದ್ಧಾರವಾಗೊ ॥೬॥

## ಆದಿತಾಳ

ಆವದಾದರು ಬಿಡು ಆವದಾದರು ಕೊಡು। ಆವದಾದರು ಕೂಡು ಆವದಾದರು ಇಡು। ಆವದಾದರು ಪೋಗೆ ಹವರಗಾಯಿತು। ಈ ವಸ್ತ

ಮರದರಿನ್ನು ಆವಲ್ಲಿ ದೊರಿಯದು। ದೇವೇಶ ವಿಜಯ ವಿಠ್ಠಲ ನಿನ್ನ।
ಯಾವ ಜೀವಕ್ಕೆ ಮುಡಿ ಇಟ್ಟು। ಕಾವದು ಜೋಕೇಲಿ ॥೨॥

**ಜತೆ**

ಭಯಕೃದ್ಭಯನಾಶನ ನೀತನಿಲ್ಲ। ದೆ ಯಲ್ಲಿ ದೈವ
ಮತ್ತೊಂದಿಲ್ಲ ವಿಜಯ ವಿಠ್ಠಲನ್ನ ॥೧॥

❖ ❖ ❖

## ಸುಳಾದಿ-೩೮

ಶ್ರೀ ಮದ್ವಮತ ಪ್ರಶಂಶನಾಪೂರ್ವಕ ವಾಯುವಂತರ್ಯಾಮಿ
ಶ್ರೀ ಹರಿಯನ್ನೆ ಭಜಿಸುವದು.

**ರಾಗ- ಶಂಕರಾಭರಣ ಧ್ರುವತಾಳ**

ಹರಿಯೆ ನಿನ್ನಾಧೀನ ಸಕಲ ಜ್ಞಾನೇಂದ್ರಿಯಂಗಳು। ಹರಿ ನಿನ್ನಾಧೀವ ಸಕಲ ಕರ್ಮೇಂದ್ರಿಯಂಗಳು। ಹರಿಯೆ ನಿನ್ನಾಧೀನ ಪಂಚಭೂತಾತ್ಮಗಳು। ಹರಿಯೆ ನಿನ್ನಾಧೀನ ಮನ ಚಿತ್ತಾದಿಗಳು। ಹರಿಯೆ ನಿನ್ನಾಧೀನ ಸಕಲ ಚೇತನವು। ಹರಿಯೆ ನಿನ್ನಾಧೀನ ಸರ್ವ ಚೇಷ್ಟೆಗಳು। ಹರಿಯೆ ನೀ ನೇಮಿಸಿದ ಕಾರಣ ಎನ್ನ। ಶರೀರದೊಳಗೆ ಎಲ್ಲ ಭರಿತವಾಗಿದೆ। ಪೊರಗಿದ್ದ ಸರಕು ಬೆಲೆ ಮಾಡಿದಂತೆ ಇದ್ದ। ಸರಕು ಧನವ ವಿತ್ತು ತುಂಬಲಿಲ್ಲ। ಶರಣರ ಮೊರೆ ಕೇಳೊ ವಿಜಯ ವಿಠ್ಠಲರೇಯ। ಮರದು ಬಿಡುವನಲ್ಲ ಬಿರಿದುಳ್ಳ ದೇವನೆ ॥೧॥

**ಮಟ್ಟತಾಳ**

ಕುಣಿಸಿದರೆ ಕುಣಿವೆ ನಗಿಸಿದರೆ ನಗುವೆ। ಮಣಿಸಿದರೆ ದಣಿವೆ ಅಳಿಸಿದರೆ ಅಳುವೆ। ಉಣಿಸಿದರೆ ಉಣುವೆ ಉಡಿಸಿದರೆ ಉಡುವೆ।

ನೆನಿಸಿದರೆ ನೆನಿವೆ ಮನುಜ ವೇಷ ಪ್ರೀಯ ವಿಜಯ ವಿಠ್ಠಲ ಹರಿ।
ನೆನವಿತ್ತರೆ ನೆನೆವೆ ದಣುವಿತ್ತರೆ ದಣುವೆ ॥೨॥

### ತ್ರಿವಿಡಿತಾಳ

ತಮುತ ಮುದ್ರಿಗಳಿಲ್ಲದಂಥ ಮಾನವ ನಿನ್ನ। ಅಪರೋಕ್ಷಕರಿಸಿ ಪ್ರತ್ಯಕ್ಷ ಕಾಣುತ್ತಿರಲು। ಉಪಚಾರವನು ಮಾಡೆ ಜನುಮಾಂತರಕೆ ನಾನು। ತಪಸಿ ಆದರು ಅವಗೆ ನಮಿಸೇನೊ ನಮಿಸೇನೋ। ಆಪವರ್ಗವಾಗಲಿ ಸರ್ಗವಾಗಲಿ ಯಮನು। ಕುಪಿತದಲ್ಲಿ ವೈದು ತಪಿಸಿದರಾದರು। ಕಪಿಯ ಕೈಯಲ್ಲಿ ಮಣಿಯ ಜಪಮಾಲೆ ಸಿಕ್ಕಂತೆ। ತಮುತ ಮುದ್ರಹೀನ ನಿನ್ನ ನೋಡಿದರೇನು। ಗುಪಿತ ಮಹಿಮ ನಮ್ಮ ಒಡೆಯ ವಿಜಯ ವಿಠ್ಠಲರೇಯ। ಕೃಪೆ ಮಾಡಿದರೆ ಲೇಸೆ ಮಾಡದಿದ್ದರೆ ಲೇಸೆ ॥೩॥

### ಅಟ್ಟತಾಳ

ಶಿವನ ತ್ರಿಶೂಲ ವೈಶ್ರವಣನ್ನ ಖಡ್ಗವು। ಜವನ ದಂಡವು ವೃದ್ಧ ಶ್ರವಣನವಜ್ರಾಯುಧ। ಪವನ ಸಖಿನಶಕ್ತಿ ನವವರುಣನ ಪಾ। ಶವನು ಕೋಪದಲಿ ದಾನವನು ಪಿಡಿದಕುಂ ತಾ। ದಿವಿಜರು ಮಿಕ್ಕಾದ ನಿವಹಕೈದುಗಳಿಂದ। ತವಕದಿಂದಲಿ ಬಂದು। ಅವಘಡಿಸಿದರೆ ನಾನವಕೆ ಭೀತಿಯ ಬಡೆ। ಪವನ ಮತವನು ಮಾನವನು ತೊರದಿರೆ। ಆವನ ವೊಹಿಸಿಕೊಂಡು ಇವರೆಲ್ಲ ಬರಲ್ಯಾಕೆ। ಪವಮಾನ ಗತಿ ಪ್ರಿಯ ವಿಜಯ ವಿಠ್ಠಲ ಕೃಷ್ಣ। ಅವರ ಪ್ರೇರಕ ನಿನ್ನವರ ಪಾಲಕ ನೀನೆ ॥೪॥

### ಆದಿತಾಳ

ಹರಿ ಮುನಿದರೆ ಗುರು ಪರಿಹರಿಸುವನಯ್ಯಾ। ಗುರು ಮುನಿದಡೆ ಹರಿಕಾಯಲರಿಯನೆಂದು ಈ। ಚರಾಚರದಲಿ ಇದೆ ಸ್ಥಿರವಾಗಿ ಇರಲಿಕ್ಕೆ। ಹರಿ ನಿನ್ನ ನೆನೆ ನೆನೆದು ವೃಕೋದರನ ನೆನೆಯದವ। ಹಿರಿಯನಾದರೆ ಏನು

ಕಿರಿಯನಾದರೆ ಏನು। ಥರವಲ್ಲ ಮನ್ನಣಿಗೆ ವರಕೆ ದೂರದು ಕಾಣೊ। ಸರಿವೆ ಅವನಲ್ಲಿ ಕುಳ್ಳಿರ ಮನವಾಗದು। ಕರುಣವಾರಿಧಿ ನಮ್ಮ ವಿಜಯ ವಿಠ್ಠಲರೇಯ। ಗುರುವೆ ಪವನನೆಂದು ಬಿರಿದು ಡಂಗುರ ಹೊಯಿವೆ ॥೫॥

**ಜತೆ**

ಪವನನ್ನ ಮತವಿಡಿದು ನಿನ್ನ ಶ್ರವಣ ಮಾ ।
ಡುವರ ಸಂಗ ಪಾಲಿಸು ನಿತ್ಯ ವಿಜಯ ವಿಠ್ಠಲರೇಯಾ ॥೬॥

❖ ❖ ❖

## ಸುಳಾದಿ-೩೫

(ಮಧ್ವಮತ ಸ್ತೋತ್ರ)

### ರಾಗ- ಕಲ್ಯಾಣಿ ಧ್ರುವತಾಳ

ಅದ್ವೈತ ಮತವನು ಅಧ್ವರ ಮಾಡುವ। ನ ದ್ವೇಷವನ್ನು ಬಳಿಸು ಸದ್ವಚನವ ಕೇಳು। ದ್ವೈತ ಮತದಲ್ಲಿ ಸದ್ವೈಷ್ಣೋತ್ತಮನಾಗು। ಸದ್ವಿಚಾರದಲ್ಲಿ ತದ್ವಿಧಿಯಾಚರಿಸು। ಮಧ್ವರಾಯರ ಪಾದದ್ವಯವ ಭಜಿಸಿ। ಊರ್ಧ್ವ ಲೋಕಕೆ ಪೋಗುವ ದ್ವಾರಮಾಡು। ಅದ್ವೈತ ಮಹಿಮ ದಾನವಧ್ವಂಸಿ ವಿಜಯವಿಠ್ಠಲ। ವಿದ್ವತ್ತಮನ ನೀ ಹೃದ್ವನಜದೊಳಗಿರಿಸೊ ॥೧॥

### ಮಟ್ಟತಾಳ

ತೃಣ ಮೊದಲು ನೋಡು ವನಜ ಭವ ಸಹಿತ। ಗಣಿತ ಗುಣಿತ ಮಾಡೆ ಜನನ ಮರಣ ಉಂಟು। ವನಜ-ನಾಭನ ದರುಶನದಿಂದವರವರ। ಮನುಜೋತ್ತಮ ವಿಡಿದು। ನಿನಗಿಂದೊಂದೆರಡು ಗುಣವಧಿಕರಿಂದ। ಗುಣದಿಂದಧಿಕರು ವನಜನಂದನನ। ತನಕ ನಮಿಸುತಿರು। ಜನಜನ್ಮದ ನಾಮಾ ವಿಜಯ ವಿಠ್ಠಲನ್ನ। ಅನುಸರಿಸಿ ಕಾಲನ ಪುರವಗೆಲ್ಲೊ ॥೨॥

## ತ್ರಿವಿಡಿ ತಾಳ

"ಪಯೋರತಿಯೇ ಯತ್ರ ತತ್ರಾಪಿಭಗವಾನ್। ಅಯೋರಿತ ಅನಾದ್ಯಾಯ ಆಗಮಗಣ ಸಂಖ್ಯಾತೇ। ಯಯೋ ಶ್ರದ್ಧಾಪುರುಷ ಯಿತಿ ಮುಕ್ತಿ ವಾಚಾ" ವಾಯು ಮತವೇ ಮತವೆಂದು ಪೇಳುತಲಿವೆ। ಬಾಯ ಬಡಕನಾಗಿ ಭಯಭಕ್ತಿ ಇಲ್ಲದೆ। ದಾಯಾದ್ಯರಂತೆ ಕೊಂಡಾಡಿದರೆ। ನಾಯಿ ಬಾಯಿಗೆ ಬಿದ್ದ ಆ ಯಂಜಲ ಅರಿವೇ। ಛಾಯ ವಡದಂತೆಯಮನ ಬಳಿಯಾ ಕಾಯ ಖಂಡ್ರಿಸಿಕೊಂಡು ನೋಯುವದೆ ಸಿದ್ಧ। ಜಯಂತ ನಾಮ ಶ್ರೀ ವಿಜಯವಿಠ್ಠಲನ್ನ। ಪ್ರೀಯುವಾದ ಮತ ಪೊಂದಿ ಜಯವಂತರಾಗಿರೊ ॥೩॥

## ಅಟ್ಟತಾಳ

ಆಲೋಚಿಸಿ ನೋಡಿ ವೈಷ್ಣವರ ಮತ। ದಾಳುಗಳು ಬರುವ ಕಿರಣ ಮಾಲೆ। ತುಳಸಿ ಗಳದಲ್ಲಿ ಪದುಮಹಾರ। ಮೇಲೆ ದ್ವಾದಶ ಪುಂಢ್ರ ಚಕ್ರಾಂಕಿತ। ಬಾಲರವಿಯಂತೆ ಪೊಳೆಯುತ್ತ ಚರಿಸಲು। ಸೋಲುವದು ಸುಮನಸರ ಗಣ। ಆಳಾವಾದು ಇವರ ಇವರ ಮಹಿಮೆಗೆಂದು। ಕಾಲನ್ನದೂತರು ನಡಗುವರು। ಹೇಳಲೆ ಇದಕೆ ಸಾಕ್ಷಿ ಪ್ರಲ್ಹಾದನು। ಶೂಲಿ ಭಕ್ತನ ಬಾಧಿಯ ಗೆದ್ದನು। ಹಾಳು ಮತವ ಬಿಡು ಹಗಲಿಳಿದ್ದರು। ಘಾಳಿ ಗಿಕ್ಕಿದ ದೀಪ ದೋಪಾದಿಯೊ। ಬಾಳು ಸರ್ವದಾ ವಿಜಯ ವಿಠ್ಠಲನ್ನ। ಆಳಾಗಿ ಸೇವಿಸೊ ಅರಸಾಗಿ ಭುಂಜಿಸೊ ॥೪॥

## ಆದಿತಾಳ

ಉದ್ದಕೆ ಪೋದಕೆ ಊರು ಸೇರುವ। ಉದ್ದಿನಷ್ಟು ಭಯವಿಲ್ಲದೆ ಮುಗ್ಧ ನಡ್ಡ। ಬಿದ್ದು ಪೋದರೆ ಅದ್ವಾನ ಅಡಿವಿ ಸೇರುವ। ಕದ್ದು ತಿಂಬುವರೊಳಗಾಡಿ ಶುದ್ಧಿ ಇಲ್ಲದೆ ಮುಣಗುವ। ಸಿದ್ಧವಿದು ಸರ್ವದಲ್ಲಿ ಬುದ್ಧಿವಂತರು ಕೇಳುವದು। ಛುದ್ರ ಮಾರ್ಗದೂರ ಕಳದು ಶ್ರದ್ಧಾ

ಭಕುತಿಯಿಂದ। ಉದ್ದವಾದುದನು ಕರಿಸಿ ಉದ್ಧಾರಾಗುವದು। ಸಿದ್ಧ ಸಾಧನ ವಿಜಯ ವಿಠ್ಠಲನ್ನ ತದ್ದಾಸರ ವೊಡಗೂಡಿ। ಮೊದ್ದು ತೊರದು ನಡದರೆ ಗತಿಗೆ। ಪದ್ಯೆಗಳೆವ ನಿತ್ಯವಾಗಿ ॥೫॥

**ಜತೆ**

ಅಗ್ರಮತವ ಬಿಟ್ಟು ಅಘ್ರವಾಗದಿರಿ ।
ಅಗ್ರಜನಾಮ ವಿಜಯ ವಿಠ್ಠಲನು ಮೆಚ್ಚ ॥೬॥

❖ ❖ ❖

## ಸುಳಾದಿ-೩೬

(ಪರಮತ ನಿರಾಕರಣ ಮದ್ವಮತಸ್ತೋತ್ರ)

**ರಾಗ- ಸಾವೇರಿ ಧ್ರುವತಾಳ**

ಮನವೆ ಮಾಯಾವಾದಿಯ ಮನೆಯಲ್ಲಿ ಗಜವಾಗಿ। ಅನುದಿನದಲ್ಲಿ ಸುಖಿಸುವದಕ್ಕಿಂತ। ಅನಿಮಿಷರಿಗೆ ಸರಿ ವೀರ ವೈಷ್ಣವರ ಸ। ದನದಲ್ಲಿ ಶುನಕನಾಗಿ ಒಂದು ಘಳಿಗೆ। ತನುವ ಧರಿಸಿಕೊಂಡು ಬಾಳುವ ಬದುಕೆ ಲೇಸು। ಅನುಮಾನವಿಲ್ಲವಿದು ಮುನಿ ಸನ್ಮತ। ಗುಣದಲ್ಲಿ ಕೇಳುವದು ಸತ್ವಾಚಾರ ಕಥೆಯಲ್ಲಿ। ಮುನಿ ಶುಕನು ಪೇಳುವನು ವಿಷ್ಣುರಾತಗೆ। ಹನುಮನ ಮತ ತೊರದು ಅನ್ಯಮತದಲ್ಲಿ ಸಾ। ಧನವೆಂದು ನಂಬದಿರು ಎಲೆ ಮನವೇ। ಧನ ಪತಿಯನನುಸರಿಸೆ ಬೇಡೆನಲು ವೇಗಭುದ್ರ। ಕಣಿಯ ಬೇಡುವನಂತೆ ನೀನಾಗದೆ। ಮುನಿವಿನುತ ಪ್ರಮೋದನ ವಿಜಯವಿಠ್ಠಲನ್ನ। ಮನ ಮೆಚ್ಚು ನಡದು ತಾಮಸನು ನಿರಾಕರಿಸೊ ॥೧॥

**ಮಟ್ಟತಾಳ**

ಕನಸೀನೊಳಗೆ ಒಂದು ಹಣದ ಗಂಟನು ನೋಡಿ। ಎನಗೆ ಹತ್ತದು ಎಂದೆನುತಲಿ ವೈದು ನೀ। ರಿನ ಮಡುವಿನೊಳಗೆ ಹಣವು ಬಿಸುಟ ಜಾಗ್ರ

ತನ ಉಳ್ಳವನಾಗಿ ದಿನಕರನುದಯದಲ್ಲಿ। ತನುವು ನೋಯಿಸಿಕೊಳುತ ಮುಣಿಗಿ ಮುಣಿಗಿ ಗಂಟನು ಅರಸುವನಂತೆ ಮನುಜನು ವ್ಯರ್ಥ। ದಣಿದು ಬಳಲಿದಂತೆ ಗಣವೈಕ್ಯನ ಮತವ। ಗುಣವೆಂದೆನ್ನದಿರೂ ಗುಣನಿಧಿ ದ್ರವಿಣಪ್ರದ ವಿಜಯ ವಿಠ್ಠಲನ್ನ। ನೆನಿಸದ ಪಾಪಾತ್ಮನಿಗೆ ನಿತ್ಯನರಕ ॥೨॥

## ತ್ರಿವಿಡಿತಾಳ

ಪತಿಯ ತೊರದು ಉಪ ಪತಿಗೆ ಮನವನಿಟ್ಟು। ಮಿತಿಯಿಲ್ಲದ ಪದಾರ್ಥ ಸತತಲವಗೆ ಉಣಿಸಿ। ಪ್ರತಿದಿವಸದಲಿ ಭಕುತಿಯಿಂದ ಲವನೊಡನೆ। ಹಿತವಾದ ವಿಷಯದ ಭೋಗ ತತಿಯಲ್ಲಿ ಸುಖಬಡಲು। ಸಥೆಯಲ್ಲ ಚೋರತನ ಮತಿಹಾನಿ ಮೈಘಾಶೆ। ಗತಿಗೆ ವಿರೋಧವು ಕ್ಷಿತಿಯೊಳು ನಗಿಗೇಡು ಪತಿ ಉಪಪತಿಯ ಸಂಗತಿಗೆ ಭೇದವಿಲ್ಲ। ವತಿಶಯವೇನೊ ಸುಕೃತ ಪಾಪವಲ್ಲದೆ। ಸತುವಾದ ಸುಜನರ ಮತವ ತೊರದು ಅನ್ಯ। ಮತವ ಸೇರಿದರು ಆ ಸತಿಯು ಕರ್ಮದಂತೆ। ಗತಿಯಾಗುವೋದು ವಿಹಿತ ಪುಣ್ಯ ಬಾರದು. ಖತಿಗೊಳದಿರು ಶಾಶ್ವತವೆನ್ನು ಮನವೆ। ಚತುರಾ ಗತಿ ನಮ್ಮ ವಿಜಯ ವಿಠ್ಠಲಗೆ। ಭೂಷಿತವಲ್ಲ ಅದ್ವೈತ ಗತಿಗೆಟ್ಟವರಿಗಿನ್ನು ॥೩॥

## ಅಟ್ಟತಾಳ

"ಪ್ರಾಚೀತ ಭಾವಿತೆ ಯತ್ವ" ಎಂದೆಂಬ। ವಾಚಾ ವೇದ ವಾಕ್ಯ ಸಿದ್ಧಾಂತದಲ್ಲಿ। ವಾಚಸಪತಿ ಬಲು ಕರುಣದಿಂದಲವ ನ। ಮೂಚಸೂದನಗೆ ವಿವರಿಸಿದ ನಂದು। ಈ ಚತುರ್ದಶದೊಳು ಶಿರೋರತುನ ಶ್ರೀಮದಾಚಾರ್ಯರ ಮತ ನಿಜವೆಂದು ತಿಳುಹಿದ। ನೀಚ ಮಾರ್ಗವ ಬಿಡು। ಮೋಹಕವಾಗಿದ್ದ। ಪೋಚು ಮತವ ಸುಡು ನಲಿ ನಲಿದಾಡು। ಕುಚೇಲ ಪಾಲ ಸೌಮ್ಯ ವಿಜಯ ವಿಠ್ಠಲ। ಕೀಚಕಾರಿಯ ಮತ ವಾಚರಿಸಲು ವೊಲಿವ ॥೪॥

**ಆದಿತಾಳ**

ಅಂಯೋಗ್ಯರ ಮನೆಯಲಿ ತನಯನಾಗಿ ಜನಿಸಿದರು। ಪ್ರಯಾಸವಲ್ಲದಲೆ ಅವಗೆ ಭಯಭಕ್ತಿಲೇಶವಿಲ್ಲ। ಜಯವಂತನಲ್ಲಾ ಗುರು ದಯ ಪಡದವನಲ್ಲ। ತ್ರಯಮೂರ್ತಿ ಒಂದೆ ಎಂದು ಮಯಾರ್ಪಿತವೆಂದುಕೊಂಬ। ಪ್ರಯತ್ನ ಪೂರ್ವಕದಿಂದ ನಯದಲ್ಲಿ ಪೋಗಿ ಕುಲವ। ಪೂಯಾಸದಲ್ಲಿ ಹಾಕುವಂಥ ಕ್ರೀಯಾಭ್ರಷ್ಟರ ಜರಿಯೊ ಮನವೆ। ಅಯೋನಿಜನಾಮ ಹೆಹಿಮಾ ವಿಜಯ ವಿಠ್ಠಲ ದೈವ। ಸಯವೆನ್ನದವ ದ್ವಿತಿ ಹಯಾನೆಂದು ತಿಳಿಯಬೇಕು ॥೫॥

**ಜತೆ**

ಪೂರ್ವದವರ ವಂಶ ಸರ್ವದ್ರೋಹಿಗಳವರು ।
ಸರ್ವವಿದ್ಭಾನುವೆ ವಿಜಯ ವಿಠ್ಠಲಗೆ ಸಲ್ಲರೂ ॥೬॥



## ಸುಳಾದಿ-೩೭

ದೇವರು ಸರ್ವೋತ್ತಮನೆಂದು ತಿಳಿದು ತರತಮ್ಯ ಪಂಚಭೇದವರಿತು ವೈಷ್ಣವನಾಗಿ ಸಾಧನದ ಬಗೆ ತಿಳಿ.

**ರಾಗ- ವರಾಳ ಧ್ರುವತಾಳ**

ಹರಿಯೇ ಶಿರಿಯರುಣ ಸರಸಿಜ ದಳದವೊಲು। ಚರಣ ಯುಗಳವನ್ನು ಶಿರದಲ್ಲಿಟ್ಟು। ಮರುತ ಮತಾಂಬುಧಿಯೊಳಿಗಿದ್ದು ತತ್ವತಾ। ತ್ವರಿಯ ತಾರತಮ್ಯಂಗಳನು ಗ್ರಹಿಸಿ। ಹರಿ ಪರಾಪರನೆಂದು ಪರಿಪರಿಯಲ್ಲಿ ತಿಳಿದು। ಪರಿಶುದ್ಧನಾದ ವೈಷ್ಣವ ನೆನಿಸೀ। ಪುರುಷೇಶ್ವರ ನಾಮ ವಿಜಯ ವಿಠ್ಠಲನಂಘ್ರಿಗೆ। ಎರಗು ಬೆರದಾಡು ವಿವರಗಳ ಬೇಡು ॥೧॥

## ಮಟ್ಟತಾಳ

ಸಿರಿವೊಲಿವಳು ಪರಮೇಷ್ಟಿ ವೊಲಿವನು। ಹರ ಸುರಪಾದ್ಯರು ಹರುಷದಿವೊಲಿವರು। ನರನುತ್ತಮನೆಂದು ಚರಿಪರಿವನಲ್ಲಿ। ನರ ವಿಜಯ ವಿಠ್ಠಲರಘಳಿಗಿ ವೊಲಿಯೆ। ದುರಿತ ದುರ್ಗತಿ ಪರಿಹಾರವಾಗೊವು ॥೨॥

## ತ್ರಿವಿಡಿ ತಾಳ

ಹರಿದಾಸರೊಂದು ಚರಣವಿಟ್ಟ ಭೂಮಿ। ಕುರುಕ್ಷೇತ್ರಕಧಿಕವೆಂದೆನಿಸುವದು। ಹರಿದಾಸರ ಪಾದಧೂಳಿ ಸೋಂಕಲು ಮಹಾ ದುರಿತ ಶೈಲಂಗಳು ಉರುಳುವವೊ। ಹರಿದಾಸರ ಸಂಗ ನಿರುತ ನಿರ್ಮಳಾಂಗ। ಸುರರಿಗಧಿಕ ಮುಪ್ಪುರದೊಳಗೆ। ಪುರುಷನಾಮಕ ರಂಗ ವಿಜಯ ವಿಠ್ಠಲನ್ನ। ಶರಣರ ನಂಬಲು ಸಂಸಾರ ಹರವೊ ॥೩॥

## ಝುಂಪೆತಾಳ

ಮುದ್ರೆ ಇಲ್ಲದ ಬದುಕು ಎಲ್ಲೆ ಜೋಕೆ ಇಲ್ಲ। ಮುದ್ರೆ ಇಲ್ಲದ ಹೊನ್ನು ಹಣಕಾಸು ಸಲ್ಲವು। ಮುದ್ರೆ ಇಲ್ಲದ ರಾಜ ಪಟ್ಟಕ್ಕೆ ಸಲ್ಲನು। ಮುದ್ರಾಂಕಿತರಹಿತ ಮಾನವನು ದಾನವನು। ಮುದ್ರೆ ಇಲ್ಲದೆ ಸಮುದ್ರನಾದರೇನು। ಭದ್ರ ಗತಿಗೆ ಸಲ್ಲ ಎಂದಿಗೆ ಕಾಣಿರೋ। ಸದ್ವ್ರತನಾಮ ಶ್ರೀ ವಿಜಯ ವಿಠ್ಠಲರೇಯನ ಮುದ್ರೆ ಧರಿಸಿದವನು ಭುದ್ರ ಅಭದ್ರ ॥೪॥

## ರೂಪಕತಾಳ

ಯತಿಯಾದರೇನು ತಪುತ ಮುದ್ರೆ ಇಲ್ಲದಿರೆ। ಮತಿವಂತರು ನಮಿಸುವದು ಸಲ್ಲ। ಸತತದಿ ಜಪಿಸಿದರು ಮತಿ ಇಲ್ಲದ। ನಿತ್ಯ ಚತುರವಾಗಿದ್ದ ನರಕವನುಂಡು। ಪತಿತ ಜೀವಿಯಾಗಿ ಗತಿ ತಪ್ಪಿ ಭಾರತಿ। ಪತಿಗದೆಯಿಂದ ಪ್ರಚೂರ್ಣನಾಗಿ। ಶತಕಲ್ಪವಾದರು ನಿತ್ಯ ನರಕದಲ್ಲಿ। ಅತಿಶಯ ತಾಡನೆಯಿಂದ ತನ್ನ। ತತಿಸಹಿತ ಇಪ್ಪರು ಶ್ರುತಿ ಅರ್ಥ

ಪ್ರಮಾಣ। ಇತರ ಸಂಶಯ ಬಿಟ್ಟು ಮುದ್ರೆ ಧರಿಸೆ। ಶತನಾಮ (ಸತನಾಮ) ವಿಜಯವಿಠ್ಠಲನ ಮುದ್ರಾಂ। ಕಿತದಲಿ ಮುಕುತಿ ಕುಮತಿಯನ್ನು ಬಿಡು ಬಿಡು ॥೬॥

### ಅಟ್ಟತಾಳ

ವೀರ ವೈಷ್ಣವನಾಗೆ ದುರಿತವೆ ಪರಿಹಾರ। ಮಾರಿಗಳು ನಿಂದಿರದೆ ಪೋಗುವವು। ಸಾರಿ ಸಾರಿಗೆ ನಿಜದಾಸರನು ಸಾರೆ। ಸಾರೆ ಪರಮ ಗತಿ ಸಂಸಾರ ವಾರಿಧಿ। ಪಾರು ಗೈಸುವದು ಆಲಸ ಮಾಡದೆ। ಧಾರುಣಿಯೊಳು ಹರಿ ಶರಣರಿಗೆ ಪಡಿಯೆ। ಭಾರ ಭೃತ್‌ನಾಮ ವಿಜಯ ವಿಠ್ಠಲನ್ನ। ಸೇರಿದವರ ಪಾದ ಸೇರಲು ನಿರ್ವಾಣಾ ॥೬॥

### ಆದಿತಾಳ

ಅರಸು ಒಲಿದರೆ ಪರಿವಾರಕರಸಾದೆ। ಅರಸಿಕೊಳುತ ಬಂದು ಅವನೊಡನೆ ಇದ್ದು। ಚರಿಸುತಲಿ ನರಹರಿಯಾರಾಧನಿಗೆ। ಪರಿಪೂರ್ಣವಾಗಿ ಸಾರಥಿಯಂತೆ ನಡಿಸುವರು। ವರಹನಾಮಾ ಶ್ರೀವಿಜಯ ವಿಠ್ಠಲನ್ನ ಧೊರೆತನ ದಾಳುಗಳ ಭಾಗ್ಯವಿನ್ನೆಂತೋ ॥೭॥

### ಜತೆ

ಹರಿ ಸರ್ವೋತ್ತಮನೆಂದು ಅರಿದ ದಾಸರಿಗೆ ನಮಿಸು ।
ವರ (ಮೋಹ) ರುಹಾ ವಿಜಯ ವಿಠ್ಠಲನು ಒಡನೆ ಇಪ್ಪ ॥೮॥



# ಸುಳಾದಿ-೩೮

ಮಧ್ವಮತೋತ್ಕರ್ಷ ಪೂರ್ವಕ ಸಾಧನ.

### ರಾಗ- ರೇಗುಪ್ತಿ ಧ್ರುವತಾಳ

ದುರುಳಾ ಪಾಮರನೆ ಸಂಕರ ಮತದವನೆ। ಪರಮಾತ್ಮನಿಗೆ ಜೀವನಿಗೆ ಐಕ್ಯವ। ಸರಿ ಎಂದು ವರಲಿ ಸೂಕರ ತನ್ನ ಗ್ರಾಸಕ್ಕೆ। ಪರಮ ಸುಖ ಬಟ್ಟಂತೆ ನೀ ಹಿಗ್ಗುವೆ। ಚರಣದಲ್ಲಿದ್ದವ ಶಿರದಲ್ಲಿಟ್ಟರೆ। ನೆರೆ ಹೊರೆ ನಂಬೊರೆ ಗುಣರಹಿತನೆ। ಗುರುವಾರು ನಿನಗೆ ಈ ಪರಿ ಉಪದೇಶವ। ಕರದು ಮಾದಿಗನಾವನು ಹೇಳಿದ। ಸರಸಿಜ ಭವಹರ ಸುರರಾದ್ಯರ ಕೈಯ್ಯ। ನಿರುತ ತೊತ್ತು ಪರಿವಾರವ ಕೊಂಬ। ಪರಧೇಯ ಪರಕೆಪರ ಪರಮಾತ್ಮ ಹರಿ ಎಂದು। ವರಲುತೀವೆ ಸಾಸಿರ ಕೋಟಿ ನಿಗಮಾ। ಮರುಳಾಟ ಬಿಡು ಮುಗ್ಧ ಧರಿಸು ಧರಿಸು ದಾಮೋ। ದರನಾಮಾ ವಿಜಯ ವಿಠ್ಠಲನೆ ಪರನೆಂದೂ ॥೧॥

### ಮಟ್ಟತಾಳ

ವಾರಿಯನ್ನು ತಂದು ಕ್ಷೀರದೊಳಗೆ ಬೆರಸಿ। ಕ್ಷೀರವಾಗುವದಾಕಾರ ಒಂದೇ ಎಂಬೀ। ಧಾರುಣಿಯೊಳಗುಳ್ಳಾಪಾರ ನದಿಗಳು। ವಾರಿಧಿಯ ಕೂಡೆ ಬೇರೆಯಾಗದು ಎಂಬಿ। ಕ್ಷೀರ ವಾರಿಯ ಕೋಟಿ ಮಾರಾಳಗೆ ಅರಿಕೆ। ವಾರಿಧಿ ನದಿಗಳು ವಾರಿದ ಬಲ್ಲವೊ। ಹಾರುವ ಪಕ್ಷಿಗೆ ಓರು ಗೂಡಿನಂತೆ। ನಾರಾಯಣನು ಜೀವನಿಗೆ ಆಶ್ರಯವೊ। ಪೂರವಾಗಿ ತಿಳಿದು ಚಾರು ವಾಕವನಳಿದು। ತಾರಣ ನಾಮಾ ವಿಜಯ ವಿಠ್ಠಲನು। ಮೀರಿದ ದೈವವೆಂದಾರಾಧಿಸು ಮನವೆ ॥೨॥

### ರೂಪಕತಾಳ

ಕಿವಿಯೊಳು ಗಜ ಒಂದು ಪೊಕ್ಕು ಕೂಗಿದದುಂಟೆ। ಶವ ಎದ್ದು ರಾಜಾರ್ಥ ಮಾಡಿ ಬಂದದು ಉಂಟೆ। ಜವನ ಕೂಡಲಿ ಜೀವ ಮಲತು

ನಿಂದದು ಉಂಟೆ। ಕವಣಿಗಲ್ಲಿಲಿ ಅದ್ರಿ ಎಗರಿ ಪೋದದ್ದುಂಟೆ। ರವಿಯ ಮೇಲೆ ಮಣ್ಣುದೂರೆ ಮೊಗವನೆತ್ತೆ। ಭವದ ಮನುಷ್ಯನೇ ಬೀಳೋದು ದಾರಿಗೆ। ಕವಲ ಬುದ್ಧಿಯ ಬಿಟ್ಟು ತ್ರಿಕರಣವಂದಾಗಿ। ಪವನ ನಾಮಾ ವಿಜಯ ವಿಠ್ಠಲನ್ನ ಪಾದವ। ಧ್ರುವದಲ್ಲಿ ನೆನೆ ನೆನದು ಧನ್ಯನಾಗೂ ॥೩॥

## ಝಂಪಿತಾಳ

ಸುಂಕವನು ತಪ್ಪಿಸಿ ಪೋಗುವೆನೆಂದು ಕಾ। ಳಂಕದಲಿ ಪೋಗುತಿರೆ ಮಾರ್ಗತಪ್ಪೀ। ಸಂಕಟವ ಬಿದ್ದು ಭಾಸ್ಕರಿನುದಯಕಾಲಕ್ಕೆ। ಸುಂಕದವರ ಕೈಯ್ಯ ಸಿಕ್ಕಿದಂತೆ। ಮಂಕು ಮಾನವನೆ ಪೂರ್ವದ ಪಾಪ ಕಳಕೊಂಡು। ಶಂಕೆ ಇಲ್ಲದ ಗತಿಯ ಬಯಸುತ್ತಿಪ್ಪೀ। ಕಿಂಕರನೆಂದೆನಿಸದೇ ಜೀವೇಶ ಸಮವೆನಲು। ಸುಂಕದ ಯಮರಾಯ ನಿನ್ನ ಬಿಡುವನೆ। ಪಂಕವಾದ ಅಹಂಕಾರ ಬಿಡು ಬಿಡು ದೈನ್ಯದಲಿ। ಲೆಂಕ ಲೆಂಕಾ ನೆನಸು ಲಕುಮಿ ವರೆಗೆ। ಸಂಕರುಷಣನಾಮ ವಿಜಯ ವಿಠ್ಠಲ ತ। ನ್ನಂಕಿತವನಿತ್ತು ಸುಂಕವ ಬಿಡಿಸುವ ॥೪॥

## ತ್ರಿವಿಡಿತಾಳ

ಅರಸು ಸಭಾಸ್ಥಾನ ಹರುಷದಲ್ಲಿ ನೆರಸೀ । ಸರಸದಲ್ಲಿ ನಡುವೆ ಒಪ್ಪುತಿರಲೂ। ಸರಸರನೊಬ್ಬ ತೋಟಿಗ ಬಂದು ಮೊಗ ನೋಡಿ। ಅರಸೆ ನೀನೆ ನಾನು ಎಂದು ನುಡಿಯೇ। ಧರಿಸುವನೇನೊ ಈ ಮಾತು ಅವನ ಪ್ರಾಣಾ। ದರಿಸಿ ಕೊಲ್ಲಿಸಿ ಶೆರೆ ಹಾಕದೆ ಬಿಡುವನೇ। ಪುರುಷೋತ್ತಮ ನೀನಾನೆಂದರೆ ಹರಿ। ವರಸಾದೆ ಮಾಣುವನೆ ತಮಸಿನೊಳು। ನರಶುಂಠ ದುರ್ಮತಿ ಒದ್ದು ಕಡಿಗೆ ನೂಕಿ। ಪುರುಷಾರ್ಥಕೊಳಗಾಗಿ ನಿಲ್ಲು ಪ್ರಧಾನ। ಪುರುಷೇಶ್ವರ ನಾಮಾ ವಿಜಯ ವಿಠ್ಠಲ ಪತಿ। ಕರಿಸಿಕೊಂಡು ನಿರಾಕರಿಸು ಅನ್ಯದೈವ ॥೫॥

### ಅಟ್ಟತಾಳ

ಜಾಲಿ ಬೀಜವ ಬಿತ್ತಿ ಬಲಾತ್ಕಾರ ಮುಳ್ಳನು। ಕಾಲಿಗೆ ಮೂಲ ಮಾಡಿಕೊಂಡ ಸುಖದಂತೆ। ಕೀಳನುಡಿಯ ಬಿತ್ತಿ ಯಮನ ಯಾತನಿಗೆ ನೀ। ಬೀಳುವ ಪರಿಮಿತ ತಪ್ಪದು ಕಾಣೋ। ಹೇಳಬಾರದ ಚಿತ್ತಾರವ ಬರದಿರೆ। ಕಾಳು ನುಂಗಿದಂತೆ ಪುಣ್ಯವ ಕಳಕೊಂಡಿ। ಬಾಳು ಇನ್ನಾದರು ಅವ್ಯಕ್ತ ವಿಜಯ ವಿಠ್ಠಲನ್ನ। ಆಳಾಗಿ ಮಾಡಿದ ದುರಿತೌಘವು ಎಲ್ಲ। ಘಾಳಿ ಪಟವಾಗಿ ಹಾರುವವು ಮರುಳೆ ॥೬॥

### ಆದಿತಾಳ

ಶಿಶುವ ತನದಲ್ಲಿ ತಂದೆ ಪೆಸರಿಟ್ಟು ಸಲಹೆ ಉ। ಲ್ಲಾಸದಲಿ ವರ್ಧನಾಗೆ ಕುಶಲದಲ್ಲೀಗ ತನ್ನ ವಶವಾಗಿ ಕರದೊಯ್ಯೊ। ಮಸದು ಮತ್ಸರಿಸಿ ಪಿತನ ಅಸುವಳಿದು ಬಪ್ಪರೇನೊ। ಹಸಿ ಪಾಷಂಢಿ ಪಾಪಿ ವಸುಧಿಯೊಳು ಪುಟ್ಟಜ್ಞಾನ। ಪಸರಿಸಲು ಸೋಹಂ ಎಂದು ಅಸಮ ದೈವಕ್ಕೆ ವಾರ್ತಿ। ವಿಷಯಗಳ ಪೇಳಿ ದೈವದ ಪೆಸರುಗಳದು ದ್ರೋಹದಲಿ। ನಿಶಾಚರನಂತೆ ದುರ್ವ್ಯಸನದಲ್ಲಿ ಸಂಚರಿಸೆ। ವಿಷಕಂಠ ಸ್ಕಂದರೊಂದೆ ಪುಶಿಮಾತು ಪೇಳದಲೆ। ವಸು ವಿಜಯ ವಿಠ್ಠಲನ್ನ ವಶಕರನಾಗಿ ತದ್ಬಿಸಿಜ ಪಾದವನು ನೆನಿಸೂ ॥೭॥

### ಜತೆ

ಪ್ರಳಯಾಬ್ಧಿಸುವೆನೆಂಬೊ ಮೂರ್ಖನಗುರುವೆ ।
ಹಲಾಯುಧ ವಿಜಯ ವಿಠ್ಠಲನೆತ್ತ ನೀ ನೆತ್ತ ॥೮॥



# ಸುಳಾದಿ-೩೬

(ಮಾಯಾವಾದಿ ಮತ ನಿರಾಕರಣ) ಪೂರ್ವಕ ಮಧ್ವಮತ ಪ್ರಶಂಸನ

## ರಾಗ-ಶಂಕರಾಭರಣ ಧ್ರುವತಾಳ

ಮಾಯಾವಾದಿಯೆ ನಿನ್ನ ಮತವು ದೊಡ್ಡದು ಎಂದು। ಬಾಯಿ ಕೊಬ್ಬಿನಿಂದ ಬಲು ಬಹು ಬಗೆಯಲ್ಲಿ। ಕುಯುಕ್ತಿಯ ಮಂಡಿಸಿ ಕುಚ್ಚಿತ ವಚನದಿಂದ। ಶ್ರೀಯರಸಗೆ ದೋಷಗಳು ಕಲ್ಪಿಸಿದರು। ನ್ಯಾಯವಾಗದು ಕಾಣೊ ದುರುಳ ಮಿಥ್ಯಾವಾದಿ। ತಾಯಿ ಮಕ್ಕಳು ಸೊಸೆ ಒಂದೆಯಾದರೆ ಮದುವೆ। ಬೀಯಾ ಬಿಜ್ಜರ ಗೋತ್ರ ಭೇದವ್ಯಾಕೊ। ನಾಯಿ ಮತ್ತ ಮಾತಂಗ ಒಂದೆಯಾಗುವದೇನೊ। ಕಾಯ ಕ್ಲೇಶವ ಬಿಟ್ಟು ಬಳಲಿದರು। ತೋಯಜ ದಳ ನಯನ ವಿಜಯ ವಿಠ್ಠಲರೇಯಾ। ಈಯಾ ಬಲ್ಲವನೆನ್ನು ನಂಬಿದ ಭಕುತರಿಗೆ ॥೧॥

## ಮಟ್ಟತಾಳ

ಕಡಲ ತಡಿಯಲೊಬ್ಬ ಕಡತ ಬಳಪ ಪಿಡಿದು। ಕಡಲಥೆರೆಗಳು ಬಿಡದೆಣಿಸಿ ಬರದೂ। ಕಣೆಗಾಣುವೆನೆಂದು ಅಡಿ ಇಟ್ಟಾ ಲಿಂದ। ಎಡಬಲ ನೋಡದಲೆ ಒಡನೊಡನೆಯವೆ। ಇಡದಲೆ ನೀಕ್ಷಿಸುತ ಧಡಧಡನೇ ಬಂದು ಬಡುವ ಥೆರೆಗಳನು ತಡಿಯದಲೆ ಬರದು। ಮಿಡಿಕಿದ ನರನಂತೆ ಮಿಡಕದಿರು ಮನುಜ। ಪೊಡವಿ ಚತುರ್ದಶಕೆ ಒಡೆಯ ರಂಗನ ನಿ। ಬಿಡ ಗುಣಂಗಳನು ಬಿಡದೆಣಿಸೀ ಬರದು। ಕಡೆಗಂಡವನಾರೊ। ಜಡ ಜೀವಕೆ ಭೇದ ವಿಜಯ ವಿಠ್ಠಲ ಅಜನ। ಪಡದಾತಗೆ ದೋಷ ನುಡಿದರೆ ಏನಾಹುದೊ ॥೨॥

## ತ್ರಿವಿಡಿತಾಳ

ಧರಣಿ ನಿರ್ಮಳ ಜಲದಿಂದ ಪೂರಿತವಾಗಿ। ಇರಲು ಕಣ್ಣನಕೆ ಹರಿದಷ್ಟು ದೂರಾ। ನರನೊಬ್ಬ ಆ ಪಂಡಿತ ಬಂದು ಜಲದೆಡಿಯಾ।

ವರತೇಯು ತೋಡಿದರಾ ಜಲಕಟುವಾಗೆ। ಹರಿದೆದ್ದು ಹಸಿಯ ಭಾಂಡವಕೊಂಡು ವರತೀಲಿ। ವರತೆ ಉದಕಾ ದಿನಕ್ಕೊಮ್ಮೆ ತುಂಬೀ। ಭರದಿಂದ ಹೊತ್ತೊಯಿದು ಹಾಕಿ ನಿರ್ಮಳ ನೀರಿನಲಿ। ಬೆರಿಸಿ ಇದರಂತೆ ಮಾಳ್ಪನೆಂದೂ। ಉರುಕೋಪವನೆ ತಾಳಿ ತನ್ನೊಳಗೆ ತಾನೆ। ಮರುಗಿ ಬೆಂಡಾಗಿ ಕೇಡಾದ ತೆರದೀ। ದುರುಳ ಪಾಮರ ನರನೆ ಹರಿಗೆ ಜೀವಗೆ ಐಕ್ಯ। ಗುರು ಲಘುವಾಗಿ ನೀ ಪೇಳಿದರೂ ವರತಿ ತೋಡಿದ ಜಲ ಬೆರಸಿದಂತಾಗುವದು। ಬರಿದೆಯಲ್ಲದೆ ಮನಕೆ ಹರುಷವಿಲ್ಲ। ಹಿರಿಯ ದೈವವೆ ನಮ್ಮ ವಿಜಯ ವಿಠ್ಠಲರೇಯಾ। ಪರಬೊಮ್ಮ ಪರವಸ್ತು ಪರಮ ಪುರುಷ ಕಾಣೊ ॥೩॥

### ಅಟ್ಟತಾಳ

ಅಖಿಳಾಂಡ ಕೋಟಿ ಬೊಮ್ಮಾಂಡ ನಾಯಕ ಹರಿ। ಸಕಲ ಜೀವರಂತರಂಗದೊಳಗೆ ವ್ಯಾ। ಪಕನಾಗಿ ಇಪ್ಪನು ಜಲಜ ಜಲದಂತೆ। ಮುಕುತಿ ಯೋಗ್ಯರಿಗೆ ಸತ್ಕರ್ಮದ ಪಥ ತೋರಿ। ಸುಖವ ಬಡಿಸುವನನುಗಾಲ ಪ್ರೇರಿಸಿ। ವಿಕಳ ಮತಿಯುಳ್ಳ ತಮೋಯೋಗ್ಯರಿಗೆ ಸ್ಫ ಟಿಕದ ಹರಳಿನ ಬಳಿಯಲಿ ಜಪ ಪುಷ್ಪಕವೆ ಇಟ್ಟಂತೆ ಗತಿಯಾ ತಂದುಕೊಡುವನು। ಭಕುತಾಭಕುತರಿಗೆ ಅವರವರ ಕ। ರ್ಮಕೆ ತಕ್ಕ ಫಲಗಳ ತಂದುಕೊಡುವ ಪಾ। ವಕನ ಸಖನಂತೆ ಯೋಗ್ಯವರಿತು ಭಾ। ರಕನಾಗಿ ಬಿಡದೆ ತ್ರಿವಿಧ ಜೀವರಿಗೆ। ಲಕುಮಿ ವಲ್ಲಭ ನಮ್ಮ ವಿಜಯ ವಿಠ್ಠಲ ಮುಖ್ಯ। ಅಕಳಂಕನಲ್ಲದೆ ಪರದೈವ ಮತ್ತಿಲ್ಲಾ ॥೪॥

### ಆದಿತಾಳ

ವನಧಿಯೊಳಗೆ ಚಂದ್ರನ್ನ ಬಿಂಬ ಬಿದ್ದರೆ। ವನಚರಾದಿಗಳು ಸಂಚಾರಣೆ ಮಾಡುವಾಗ। ಅನಿಲ ಬೀಸಲು ಸೋಮನು ಅಲ್ಲಾಡಲಾ। ವನಚರಗಳೆ ವನಜಾರಿಯ ಗುರತನು ಬಲ್ಲವೆನೊ। ವನಜ ಜಾಂಡದೊಳು

ವನಜನಾಭನು ಧೃಡ। ಮನುಜೋತ್ತಮ ಪದ್ಮತನುಜೆ ಮೊದಲಾದ। ತನುವಿನೊಳಗೆ ಇದ್ದು ಅಣೊರಣಿ ಘನವಾಗಿ ಆ। ತನು ಮಾಡುವ ಮಾಯವನೆ ತಿಳಿಯದಲೇವೆ। ಎಣಿಸಿ ಗುಣಿಸುವರು ಅನಲನು ತಾನು ಇಂ। ಧನದೊಳಗಿದ್ದಂತೆ ಚಿನುಮಯ ಸಕಲತಾವನೆ ವ್ಯಾಪಿಸಿಪ್ಪನು। ಜನನ ರಹಿತ ನಮ್ಮ ವಿಜಯ ವಿಠ್ಠಲರೇಯಾ ನಿನಗ್ಯಾಕೆ ದ್ವೇಷಿಯಾದನೊ ಕೇಳೊ ಮಿಥ್ಯಾವಾದಿ ॥೭॥

**ಜತೆ**

ಆರೇನು ಮಾಡುವರು ನಿನ್ನ ದುಷ್ಕರ್ಮಕ್ಕೆ ।
ಕಾರಣ ತಮಸ್ಸು ಶ್ರೀವಿಜಯ ವಿಠ್ಠಲ ಕೊಡುವಾ ॥೮॥

❖ ❖ ❖

## ಸುಳಾದಿ-೪೦

(ಮಾಯಾಮತ ಖಂಡನ)

**ರಾಗ- ಭೈರವಿ ಧ್ರುವತಾಳ**

ಪಾದ ಪಾಲಣಿಗೆ ಧೂಳಿಗಾ ಮುಸುಕಿದಂತೆ। ಬೂದಿಯನು ಸರ್ವಾಂಗಕೆ ಲೇಪಿಸಿ। ಆದಿ ಪರಮಾತ್ಮಗೆ ದುಃಖದ ಜೀವಕ್ಕೆ। ಭೇದವಿಲ್ಲಾವೆಂದು ಕುಮತಿಯಿಂದ। ಸಾಧುಗಳ ಕೂಡ ವಿವಾದವ ಕಲ್ಪಿಸಿ। ಕಾದಿಕಾದಿ ಕಿಲ್ಬಿಷ ಸೇರಿದವೊ। ಈ ದುರುಳತನ ಬಿಡು ವಿಷ್ಣುದಾಸರ ಪೊಂದಿ। ಪಾಥೆಯನು ಕಟ್ಟು ವೈಕುಂಠಪುರಕೆ। ವೇದಸೆ ವಿಜಯ ವಿಠ್ಠಲ ಏಕಮೇವಾನೆಂದು। ಆದರಿಸಿ ಕಾಣು ತದ್ವೇಷಗಳ ಮಾಣೂ ॥೧॥

**ಮಟ್ಟತಾಳ**

ಸದಾಶಿವನು ವೀರ ವೈಷ್ಣವನು ಸದಮಲವಾಗಿಪ್ಪ ರಾಮನನಾಮ। ಸುದತಿ ಗಿರಿಜೆಗೆ ಉಪದೇಶಿಸದ ಇದು ಸಕಲ ಮುನಿಗಳು ಬಲ್ಲರೆಲ್ಲ।

ಅಧಮಾ ಮಿಥ್ಯನೆ ತಿಳಿದು ತಿಳಿದೂ ಅಧೋಗತಿಗೆ ಪೋಗದಿರು।
ಸದಾನಂದ ವಿಜಯ ವಿಠ್ಠಲನ್ನ ಪದಪದುಮಕ್ಕೆ ಮಧುಕರನಾಗಿ।
ಬದುಕುವದು ನೀ ಬದುಕುವದು ॥೨॥

### ರೂಪಕತಾಳ

ಭಸುಮವ ಋಷಿಗಳು ರಚಿಸೀದರೆಂದಿಯಾ। ಅಸುರರ ಮೋಹಕೆ ಲೇಪಿಸಿದರು ಅವರಿಗೆ। ವಶವಾಗಬೇಕೆಂದು ಯಮಲೋಕವೆಂದಿಗ। ಪುಶಿಯ ತೋರಿದರು ಡಂಬಕವನ್ನು ಮಾಡಿ। ಅಸುರಾರಿ ರಿಪು (ಳ್ಕೆ) ಗಳೋಡಿಸಬೇಕು ಎನುತಲಿ। ದಶಶಿರ ಬಾಣ ಜರಾಸಂಧ. ಮಿಕ್ಕ ತಾ। ಮಸರೇನಾದರು ಪಶುಜ್ಞಾನಿ ಮನುಜನೆ। ಹಸಿದು ಸವಿದರೆ ವಿಷ ಪ್ರೀತಿಯಾಗೋದೆ। ಪಿಸುಣ ಯುಕ್ತಿಯು ಸಾಕು ವಸುಪ್ರದ ವಿಜಯ ವಿಠ್ಠಲನ ಪೀ। ಯುಷವನ್ನು ಸೇವಿಸು ಭಕುತಿಯಲ್ಲಿ ॥೩॥

### ಝಂಪಿತಾಳ

ಕೇವಲಪವರ್ಗಕ್ಕೆ ಮೊದಲ ಮನೆಯ ಹುದುಗೀ। ತಾ ವಾಕ್ಯವೆ ಎಂದು ಪೇಳುವವರೂ। ದೇವಗುಣ ಸತ್ವಗುಣ ರಜೋಗುಣರು ಯಕ್ಷರು। ಆ ವಿಗಡ ತಮೋಗುಣ ಭೂತ ಪ್ರೇತಗಳೂ। ತ್ರಿವಿಧವೆಂದು ಅವರವರ ಸಂಸ್ಕಾರ। ಆ ವಚನದಲ್ಲೆ ಪೇಳಿದೆ ನೋಡಿರೊ। ಪಾವನಾವದು ದಿನ್ನಾವದು ನೋಡಿರೋ। ದೇವ ಭೃಗ್ಗುರು ವಿಜಯ ವಿಠ್ಠಲಗೆ ನಮೊ ಎಂದು। ಜೀವ ಪರಮಾತ್ಮರಿಗೆ ಭೇದವ ಪೇಳು ಮರುಳೆ ॥೪॥

### ತ್ರಿವಿಡಿತಾಳ

ಕೈಲಾಸ ಪತಿ ತನ್ನ ಊಳಿಗದವರೀಗಾ। ಕೀಳಭೂತ ಪ್ರೇತ ಅಶುಚಿ ಇದ್ದವರಿಗೆ। ಶ್ರೀಲೋಲನ ಊರ್ಧ್ವ ಪುಂಡ್ರಸಲ್ಲದು ಎಂದು। ಹೇಳಿದನು ಭಸುಮವ ಧರಿಸಿ ಸುಡಗಾಡೀಲಿ। ಕಾಲವ ಕಳೆದು ಪೆಣಗಳ ಭಕ್ಷಿಸಿ ಎಂದು

ವಾಲಗವಿತ್ತು ತಾ ಹರುಷದಿಂದ। ಕಾಲನಾಮಕ ವಿಜಯ ವಿಠ್ಠಲನ್ನ ಪದಾಂಬು। ಮೌಳಿಯಲ್ಲಿಟ್ಟು ಧನ್ಯನೆನಿಸಿಕೊಂಡ ॥೫॥

## ಅಟ್ಟತಾಳ

ಗಂಗಾದಿತಡಿಯಲ್ಲಿ ಭಕುತಿಯಿಂದಲಿ ಕುಳಿತು। ಅಂಗೈಯ್ಯ ವೊಳಗೊಂದು ಲಿಂಗವರಚಿಸಿ। ಹಿಂಗದಲೆ ಪೂಜಿಸಿ ವೀಯನೆಂತೆಲೊ। ಮಂಗಳ ಗತಿಯನು ಬೇಡುವ ಮನಸು। ಲಿಂಗವು ನೀನಾದೆನೆಂದೆಂಬೊ ಮನಸು। ಲಿಂಗಾ ನೀನಾದರೆ ಲಿಂಗದ ನಿಜರಾಣಿ। ಶೃಂಗಾರ ಗಿರಿಸುತೆ ನಿನಗೇನಾದಳೊ। ಭಂಗುರ ಮಾನವ ಕಂಗಳಿಂದಲಿ ಪಾ। ರಾಂಗನೆಯ ನೋಡೆ ಪೊಂಗುವ ಯಮಧರ್ಮ। ಭಂಗಕಿಕ್ಕುವನೆಂದು ಶತ ಸಾವಿರ ವೇ। ದಂಗಳು ಕೂಗುತಲಿವೆ ಬಲು ಬಗೆಯಿಂದ। ಭೃಂಗ ಸಂಪಿಗೆ ರಸ ಸವಿದು ಜೀವಿಸುವದೆ। ಲಿಂಗನರ್ಧಾಂಗಿನಿ ತಾಯಿ ಕಾಣೋ। ಅಂಗ ವಿಕಾರವ ಬಿಡು ಸತ್ವ ತತ್ವದ ಸಂಗದಲ್ಲಿ ಇರು ಸಂಗೀತರ ಸಾರೂ। ಮಂಗಳ ಪರನಾಮಾ ವಿಜಯ ವಿಠಲನ್ನ। ಅಂಗಿಕರಿಸಿದ ದಾಸಾಂಗ ನೀನಾಗೊ ॥೬॥

## ಆದಿತಾಳ

ಆವದಾದರು ಧರಿಸು ಆವ ದನ್ನವಧರಿಸೂ। ಆವದೇವರು ನಿನಗೆ ಆವ ಗುರುಗಳು ನಿನಗೆ। ಆವರಾವರ ಪಾದಕ್ಕೆ ಸೇವಾನು ಸೇವಕನಾಗಿ। ಕಾವದು ದಾಸೋಹಂ ಎಂದೂ। ಭಾವಿಸಲು ಅನುಗಾಲಾ। ಆವದಾದರ ಹರಿ ಫಲವನು ತೆಗೆದುಕೊಂಡು। ನೀವಾನು ಅವರವರ ನೋವಿಯ ನೂತಂತೆ। ಜೀವಿಗಳಿಗೆ ಭಿನ್ನಾದಿ ದೇವ ವಿಜಯ ವಿಠ್ಠಲನ್ನ। ಭಾವದಲ್ಲಿ ತಿಳಿದಿದು ಭಾಗವತ ಕೇಳೂ ॥೭॥

## ಜತೆ

ದ್ವಾಸುಪರ್ನವೆಂಬ ವಾಕ್ಯದಲ್ಲಿ ತಿಳಿದೂ ।
ದಾಸೋಹಂ ದಾಶಾಂಹ್ವಾಃ ವಿಜಯ ವಿಠ್ಠಲಗೆನ್ನು ॥೮॥



## ಸುಳಾದಿ-೪೧

(ಅಯೋಗ್ಯರಿಗೆ ತತ್ವೋಪದೇಶ ಮಾಡಕೂಡದು.)

### ರಾಗ- ಶಂಕರಾಭರಣ ಧ್ರುವತಾಳ

ಏನು ಪೇಳಿದರೇನು ಜ್ಞಾನರಹಿತನಿಗೆ। ಮಾಣುವನೆ ತನ್ನ ಹೀನ ಗುಣವ। ಶ್ವಾನನ ತಂದು ಬಾಲ ನೀವಿ ಲಳಗಿಯೊಳು। ತಾ ನಿಡಲದರಿಂದ ಮೇಣು ಸರಳಾಗುವದೆ। ಧೇನು ಪಾಲಿಸಿದಂತೆ ಕೋಣನ್ನ ಸಾಕಿದರೆ। ಏನಾದರೂ ಕ್ಷೀರ ಸೊನೆ ಉಂಟೆ। ನಾನೆಂಬೊ ದುರ್ಮತಿಗೆ ಆನಂದ ತರದ ತತ್ವ ವನು ಪೇಳಲು ಸತ್ಯವ ನೆನಿಯನು। ಸ್ಥಾನದ ನಾಮ ದೇವ ವಿಜಯ ವಿಠ್ಠಲನ್ನ। ಕಾಣದೆ ಭವದಲ್ಲಿ ಕ್ಷೀಣವಾಗುವನೂ ॥೧॥

### ಮಟ್ಟತಾಳ

ಮುಗ್ಧಗೆ ಉಪದೇಶ ಸಿದ್ಧಾಂತಗಳೆಲ್ಲಾ। ಬದ್ಧವಾಗಿ ಕರದು ಬುದ್ಧಿಯಿಂದಲಿ ಪೇಳೆ ಕ್ಷುದ್ರತನವ ಬಿಟ್ಟು ಶ್ರದ್ಧೆ ಭಕುತಿಯಲ್ಲಿ। ದುಗ್ಧಾಬ್ಧಿವಾಸನ ಹೊದ್ದಿ ಬದಕುವನೆ। ದಗ್ಧ ಪಟಹದೊಳು ಮುದ್ದಿಯ ಮುದರಿದರೆ। ಛಿದ್ರವ ಬೀಳ (ದ) ದಲೆ ಪೊದ್ದಿಕೊಂಡಿಪ್ಪದೆ। ರುದ್ರನಾಮಕ ದೇವ ವಿಜಯ ವಿಠ್ಠಲನ್ನ। ಬದ್ಧ ದ್ವೇಷಿಗೆ ಸಾಧ್ಯವೇ ಸತು ಕರ್ಮಾ ॥೨॥

### ತ್ರಿವಿಡಿತಾಳ

ಶವ ಬಿದ್ದಿರಲು ಪೋಗಿ ಕಿವಿಗೆ ಮೊಗವನಿ। ಟ್ಟು ಔತುನಕೆ ಬಾ ಎಂದು ಪೇಳಲು ಆ ಶವ। ಅವಸರರಿದು ಬಂದು ಸವಿಪಾಕ ನುಂಡು ಪ್ರ ಸ್ತವ ಮೊಗಳಿ ತೃಪ್ತಿಯ ಬಡಬಲ್ಲದೇನೊ। ಭವರೋಗದೌದ್ಯ ಶ್ರೀಧರನ ಚರಿತೆಯನ್ನು। ಶ್ರವಣಕ್ಕೆ ಬೀರಲು ಬುದ್ಧಿಪೂರ್ವಕದಿಂದ। ಅವಗುಣ ತೊರದು ಕೇಳುವನೆ ಹರುಷದಲ್ಲಿ। ಹವಿ ಶೇಷನಾಮಕ ನಮ್ಮ ವಿಜಯವಿಠ್ಠಲನ್ನ। ಶ್ರವಣ ತೊರೆದವನು ಆ ಶವನೆಂದು ತಿಳಿವದೂ ॥೩॥

### ಅಟ್ಟತಾಳ

ಇಂದಿರ ರಮಣನ ಪೊಂದದ ಪಾಪಿಗೆ। ಮಂದಾಕಿನಿ ಜಲಮಿಂದರೆ ಅವಸಂಗ। ನೊಂದು ಬೆಂದು ಪೋಗುವದು ಎಂದಿಗೆ ಸಿದ್ಧ। ಹಿಂದಕ್ಕೆ ಮಧುರಿಲಿಯಿಂದ ಓಡಿ ಜರಾ। ಸಂಧನು ಗಂಗೇಲಿ ಬಂದು ಬೀಳಲಿ ವ್ಯೆ। ಬೆಂದು ಪೋಯಿತು ಕಷ್ಟದಿಂದಲಿ ಉಳಿದನು। ಸಂದೇಹವೆನದಿರಿ ವೃಂದಾರಕ ಸರ್ವ। ಸಂದೋಹ ಬಲ್ಲದು ಇಂದಿನ ಮಾತಲ್ಲ। ಮಂದಮತಿ ನರ ಒಂದು ಸಾರಿ ಹರಿ ಎಂದೆನ್ನದವನಾವ। ನಂದಾದಿ ಬಾಳನು ಕಂದರ್ಪಜನಕ ಕಪೀಂದ್ರ ವಿಜಯವಿಠ್ಠ ಲಂದರ್ಕ ಉಳ್ಳನಕ ಬಂಧನದೊಳಗಿಡುವ ॥೪॥

### ಆದಿತಾಳ

ಅಸಮ ತತ್ವ ವೈದು ಹೀನ ಪಿಸುನನಿಗೆ ಉಸರಿದರೆ। ವಶಮಾಡಿ ಕೊಂಡು ಸಂಪಾದಿಸಬಲ್ಲನೆ ಜ್ಞಾನವನ್ನು। ಹಸುವಿನ ಹಾಲು ಹಿಂಡಿ ಹಸನಾಗಿ ಕಾಸಿ ಹುಳಿ। ರಸದೊಳು ಹೆಪ್ಪುಗೊಡೆ ಮೊಸರಾಗಿ ತೋರುವದೇ। ಪುಸಿ ವಿವಾದಿಗೆ ಉಪನಿಷಿತ್ತತ್ವಗಳು ಪೇಳೆ। ಅಸುರ ಮೋಹಕದರ್ಥ ಎಸದು ಬಿಡನು ಕಾಣೊ। ಪೇಸಲ ನಾಮಕದೇವ ವಿಜಯುವಿಠ್ಠಲನ್ನ। ಕುಶಲ ವಾರ್ತೆಯು ಕೇಳದ ಅಸುವ್ಯರ್ಥ ಮಾಡುವನು ॥೫॥

### ಜತೆ

ಮಿಥ್ಯಾವಾದಿಗೆ ಸತ್ಯವೆಂದು ಪೇಳಿದರವ ।
ಸತ್ಯ ವಿಜಯವಿಠ್ಠಲನ ಭಜಿಸದೆ ಕೆಡುವನೂ ॥೬॥



# ಸುಳಾದಿ-೪೨

ಸಕಲ ಪರಮತದ ಸಾರ ತಿಳಿದು ನಿರಾಕರಿಸುತ್ತ ತಾರತಮ್ಯ ಪಂಚಭೇದವನ್ನು ತಿಳಿದು ಸಾಧನಗೈವ ಹರಿಭಕ್ತರಿಗಾವ ಭಯವಿಲ್ಲ.

## ರಾಗ-ವರಾಳ ಧ್ರುವತಾಳ

ನಿನಗಲ್ಲದ ಶಿರ ಎಂದಿಗು ಬಲುಭಾರ। ನಿನಗಲ್ಲದ ಅಕ್ಷಿ ಹಾಳ ಗವಾಕ್ಷಿ। ನಿನಗಲ್ಲದ ಕಿವಿ ರಕ್ಷಿಯ ಹಿಂಗಿವಿ। ನಿನಗಲ್ಲದ ಮೂಗು ಹಸಿಯಾಕಾಗೂ। ನಿನಗಲ್ಲದ ವದನ ಲಾಳೀಯ ವದನ। ನಿನಗಲ್ಲದ ನಾಲಿಗೆ ಕೆರಹಿನ ನಾಲಿಗೆ ನಿನಗಲ್ಲದ ಕರ ಮೊರದ ಬೊಂಬಿಯಕರ। ನಿನಗಲ್ಲದ ಪಾದ ನಾಯಿ ನರಿಯ ಪಾದ। ನಿನಗಲ್ಲದ ಗಾತ್ರ ಜೀರ್ಣವಾದ ಪತ್ರ। ನಿನಗಲ್ಲದವಯಂಗಳು ಜನಕ್ಕಿದು ಫಲವೇನು। ಬಿನಗಡಿದು ಭೂತಾದಿ ಗಣಕೆ ಕೊಡಲಿಬಹುದು। ಅನಿಲ ನಾಮಕ ನಮ್ಮ ವಿಜಯವಿಠ್ಠಲ ನಿನ್ನ। ನೆನಿಸದಿದ್ದ ಮನುಜ ಅವನೇ ನಿಜ ದನುಜಾ ॥೧॥

## ಮಟ್ಟತಾಳ

ಪವಮಾನ ಮತದಲ್ಲಿ ದಿವರಾತ್ರಿ ಬಿಡದೆ। ನವವಿಧ ಭಕುತಿ ನವವಿಧ ದ್ವೇಷ। ತ್ರಿವಿಧ ಜೀವಿಗಳ ವಿವರವ ತಿಳಿದು। ಭುವನದೊಳಗೆ ಭೇದವನ್ನೈದು (ತಿಳಿ) ಪೇಳಿ। ನವನೀತ ಹೃದಯದವನಾಗಿ ಇದ್ದೂ। ತ್ರಿವಿಕ್ರಮ ವಿಜಯ ವಿಠ್ಠಲನ್ನ। ಸವಿಯಾದ ನಾಮ ಕವಿಯಾಗಿ ನೆನದು। ಸವಿಯದ ಪದವಿ ಸವಿಗೊಳದವನ್ನ। ಅವನೀಗಾ ಜೀವ ನಾಶವನೆ ಕಾಣಿರೋ। ಅವನಿಯೊಳು ತ್ರಿಭುವನದೊಳಗೆ ॥೨॥

## ತ್ರಿವಿಡಿತಾಳ

ಹರಿ ನಿನ್ನ ಪರದೈವವೆಂದು ತಿಳಿಯದವನು। ಹೊರಗಿನವಗೆ ಜನನವೆಂಬೊದು ಶತಸಿದ್ಧ। ಹರಿ ನಿನ್ನ ದ್ವೇಷವ ಮಾಳ್ಪನ ಮೊಗನೋಡೆ।

ಮರಳೆ ರವಿಯ ನೋಡದಲೆ ಶುಚಿ ಇಲ್ಲ। ಹರಿ ಮರುತನ ದ್ರೋಹಿಗಳ ಮಂದಿರದಲ್ಲಿ। ಮರದು ನೀರು ಕೊಳಲು ಚರಿಸು ಚಾಂದ್ರಾಯಣ। ಹರಿನಾಮ ವಿಜಯ ವಿಠ್ಠಲ ನಿನ್ನ ಪಾದವ। ಸ್ಮರಿಸದ ಹಿರಿಯನು ಬಲುಕಾಲದ ಗೂಗಿ ॥೩॥

### ಅಟ್ಟತಾಳ

ವಾರ ವಾರಕ್ಕೆ ಆಚಾರವಂತನಾಗಿ। ವೀರ ವ್ರತಗಳ ಪಾರವ ಚರಿಸಿ। ಮೂರೇಳು ಸಾರಿಗೆ ವಾರಣಾಸೀ ಪುಣ್ಯ ತೀರಥಗಳ ಮಿಂದಾರಾಧನೆಯ ಮಾಡಿ। ನಾರಾಯಣಂಗೆ ತಾರತಮ್ಯದಿಂದ। ನೀರೆರದು ಉದ್ಧಾರನಾಗದಿರೇ। ನೀರ ಮೇಲೆ ಬರವ ರಚಿಸಿದಂತೇ। ತೋರದೆ ಸತ್ಕರ್ಮ ಹಾರಿ ಹೋಗುವದಯ್ಯಾ। ಧಾರುಣ ನಾಮಕ ವಿಜಯವಿಠ್ಠಲ ನಿನ್ನ। ಕಾರುಣ್ಯ ಪಡೆದರೆ ತೃಣವಂದು ಮೇರು ॥೪॥

### ಆದಿತಾಳ

ಆಕಪರ್ದಿ ಮುನಿ ಪೋಗಿ ತಾಕಪಟದಿಂದಲಿ ಪಾಂ। ಡು ಕುವಾರನಲ್ಲಿ ಗ್ರಾಹಸಬೇಕೆಂದು ಎಡಿಗಡಿಗೆ। ಹಾ ಕೃಷ್ಣನೆಂದು ಪಾಂಚಾಲಕುಮಾರಿ ಕರಿಯೆ ಸ್ವಲ್ಪು। ಶಾಕದಳವುಂಡು ತಾನೇಕ ಜನ ತೃಪ್ತಿಬಡಿಸಿ। ಲೋಕದೊಳಗೆ ಪೂರ್ಣ ಕಮಲಾಕಾಂತನವಲಿಮೆ ಆಪ। ತ್ತು ಕಡಿಗೆ ಪುಣ್ಯ ತೂಕವೆನಿಸುವ ಮೇರುವಿಗೆ। ಆಖಂಡ ಪುರುಷನಾಮ ವಿಜಯ ವಿಠ್ಠಲರೇಯನ ಯಾಕೆ ಭಜಿಸದೆ ಲೋಕಶೋಕಿಸುವರು ನರಕದಲ್ಲಿ ॥೫॥

### ಜತೆ

ಘಾಳಿಗೆ ಬೆವರಿಲ್ಲ ನಿನ್ನವ (ರಿ)ಗೆ ಕೇಡಿಲ್ಲ ।
ವ್ಯಾಳ ವಿಜಯ ವಿಠ್ಠಲ ನಿನ್ನ ಬಿಟ್ಟವ ಕೆಟ್ಟ ॥೬॥



## ಸುಳಾದಿ-೪೩

ಶ್ರೀ ಹರಿ ವ್ಯಾಪಕತ್ವ ಕರ್ತೃತ್ವಾನುಸಂಧಾನ ಪೂರ್ವಕ ಹರಿಸ್ಮರಣ
ಚಿಂತನಾಧ್ಯಾನ ಅರ್ಚನೆ.

### ರಾಗ- ಕಲ್ಯಾಣಿ ಧ್ರುವತಾಳ

ಕಂಡಲ್ಲಿ ನಿಂದಲ್ಲಿ ಕುಳಿತಲ್ಲಿ ಪೋಗುವಲ್ಲಿ। ಮಂಡಲವೆಲ್ಲ ತಿರುಗಿ ಬರುವದರಲ್ಲಿ। ಮಂಡೆ ಬಾಗಿ ನಿತ್ಯ ನಡುವಲ್ಲಿ ಓಡುವಲ್ಲಿ। ಅಂಡುಗೊಂಡಿದಲ್ಲಿ ಆಲಿಸಿ ಕೇಳುವಲ್ಲಿ। ಅಂಡೊಲಿಯದೆ ಸುಮ್ಮನಿಹದಲ್ಲಿ। ತಂಡತಂಡದಲಾಟಾ ಆಡುವಲ್ಲಿ ಅನೇಕ। ತೋಂಡರ ಸಂಗಡ ತೊಲಗದಲ್ಲೀ। ಕಂಡ ಕಂಡ ಕಡೆ ನೋಡುವಲ್ಲಿ ಇಳವಲ್ಲಿ। ಚಂಡ ವೃತ್ತಿಯಿಂದ ಬಾಳುತ್ತಿರಲಿ। ಪುಂಡರಿಕಾಕ್ಷನು ಬೆಂಬಿಡದಲೆ ಹೊತ್ತು। ಕೊಂಡು ಬಂದಿಪ್ಪನು ಒಡನೊಡನೇ। ಅಂಡಿಲಿ ಇದ್ದು ನಾನಾ ನಾಮಾಮೃತವನ್ನು। ಉಂಡಾದಲ್ಲದೆ ಬಿಡ ಉನ್ನತವಾಗಿ ಒಲಿದು। ಹಿಂಡಿನೊಳಗಿದ್ದರು ಹಿತವೆನಸೀ। ಭಂಡದೊಳಾಡಿಸ ವಿಜಯ ವಿಠ್ಠಲರೇಯ। ಖಂಡವಾಗಿ ದಾಸರ ಭಾರವ್ಹೊಹಿಸಿ ಪೊರೆವಾ ॥೧॥

### ಮಟ್ಟತಾಳ

ಒಂದೊಂದು ವಿಷಯಂಗಳೊಂದೊಂದಧಿಷ್ಠಾನ। ಒಂದೊಂದು ಸರಿಯಲಿ ಒಂದಕ್ಕನಂತಾ। ಕುಂದದೆ ಶತ ಮಾಡಿ ಚಂದ ಚಂದದಲಿಂದ। ಮುಂದು ಗೆಡಿಸುವಂಥ ಮಂದ ಬುದ್ಧಿಗೆ ಬಲು। ನಂದವಾಗಿ ಇರಲು ಇಂದೊಂದು ಎನಗೆ। ದ್ವಂದ್ವವ ತಿಳಿಯದಲೆ ಸಂಧಿಯಾಗುವ ಕರ್ಮ। ವೃಂದಕೆ ಹರಿತಾನೆ ನಿಂದು ನಿತ್ಯದಿ ಸಂ। ಬಂಧ ಮಾಡಿಸುವ ಏನೆಂದು ಪೇಳಲಿ ಚಿತ್ರಾನಂದ ಮೂರುತಿ ರಂಗ ವಿಜಯ ವಿಠ್ಠಲರೇಯ। ತಂದುಕೊಡುವ ನಮಗೆ ಒಂದೊಂದು ವಿಧಗಳನೂ ॥೨॥

## ತ್ರಿವಿಡಿತಾಳ

ನಾನಾ ಸುಖವ ಬಡು ಹರಿಯನ್ನೆ ಪೂಜಿಸಿ। ನಾನಾ ದುಃಖವ ಕಳಿಹರಿಯನ್ನೆ ಕೊಂಡಾಡಿ। ನಾನಾ ನಂದವ ಧರಿಸು ಹರಿಯನ್ನೆ ಮೆಚ್ಚಿಸಿ। ನಾನಾ ಚೇಷ್ಟೆಯ ಮಾಡು ಸಂತರೊಡನೆ। ಜ್ಞಾನದಿಂದಲಿ ನಿತ್ಯ ಎಲ್ಲೆಲ್ಲಿ ನೋಡಿದರು। ಶ್ರೀನಿವಾಸನ ಮೂರ್ತಿಯ ಚಿಂತಿಸು। ಕಾನನ ಮಿಕ್ಕಾದ ಪ್ರಪಂಚದಲಿ ಇದೆ। ತಾನೆ ತೋರುತಲಿಪ್ಪ ಮುಂದೊಲಿದೂ। ಧ್ಯಾನಕೆ ಪೊಳೆವನು ಅಡಿಗಡಿಗೆ ನಿನಗೆ। ಹೀನಾಯ ಬರಗೊಡ ಬಲು ಜೀವನೂ। ಕಾಣಿಸಿಕೊಂಬನು ಕಂಡತಾವಿನಲಿ। ನಾನೆನೆಂಬೆ ಹರಿಯ ಸುಕರುಣತನಕೆ। ಆನಂದಮಯನಾದ ವಿಜಯ ವಿಠ್ಠಲರೇಯ। ಗಾನಕೆ ಪ್ರೀಯನು ಕಲಿಯುಗದಲಿ ಸಿದ್ಧ ॥೩॥

## ಅಟ್ಟತಾಳ

ಚಿಂತಿಸು ಈ ಪರಿ ಹಗಲು ಇರುಳು ನೀನು। ಭ್ರಾಂತಿಗೊಳ್ಳದಲೆ ಭಕ್ತೀ ಕದಲಿ ಸರ್ವ। ಸಂತೋಷದಲಿ ಜಡಜೀವ ಈರ್ವಗೆ ಇನ್ನು। ಸಂತತ ಗುಣಿಸು ಬೊಮ್ಮನ ಮೊದಲು ತೃಣ। ಜಂತುಗಳು ಕಡೆ ಆಮೇಲೆ ಜಡಸಂಖ್ಯೆ। ಯಂತಿಳಿ ಪೃಥ್ವಿ ಪರಮಾಣು ವಿಡಿದು ಕಾ। ಲಾಂತ ಪ್ರಕೃತಿಯನ್ನು ಪ್ರಾರಂಭವನು ಮಾಡಿ। ಕಂತು ಪಿತನು ತಾನೆ ಇತ್ತಂಡದಲಿ ತನ್ನ। ಕಾಂತಿಯೊಡನೆ ವಾಸವಾಗಿ ಒಂದೊಂದಾ। ನಂತ ರೂಪಗಳಾಗಿ ಅನೇಕ ಬಗೆಯಿಂದ। ನಿಂತು ಕುಳಿತು ಪವಳಿಸಿ ಆಡುತಿಪ್ಪನು। ಇಂತು ತಿಳಕೊಂಡು ಬಗೆಬಗೆ ವಿಷಯಂಗ। ಳಂತವಿಲ್ಲದೆ ಜ್ಞಾನಿ ಅನುಭವಿಸಲು ಆವ। ಯಂತು ಕರ್ಮಗಳು ಲೇಪನವಾಗೋವು। ಸಂತಾಪಹರ ನಮ್ಮ ವಿಜಯ ವಿಠ್ಠಲನಂಘ್ರಿ। ಚಿಂತೆಯಲಿ ಎಲ್ಲೆಲ್ಲಿ ಇದ್ದವ ಬಲು ಧನ್ಯ ॥೪॥

## ಆದಿತಾಳ

ಅಡವಿಯಲ್ಲಿ ಆನೆಯಲ್ಲಿ। ಗಿಡದಲ್ಲಿ ಗಿಳಿಯಲ್ಲಿ। ಕೊಡದಲ್ಲಿ ಕೊಡೆಯಲ್ಲಿ। ಗುಡಿಯಲ್ಲಿ ಗುಡ್ಡದಲ್ಲಿ। ಜಡನಲ್ಲಿ ಜಲದಲಿ (ಚೇತನದಲ್ಲಿ)

ಧಡದಲ್ಲಿ ಧರೆಯಲ್ಲಿ। ಗಡಿಯಲ್ಲಿ ಗಣಿಯಲ್ಲಿ। ಅಡಿಯಲ್ಲಿ ಅಳತೆಯಲ್ಲಿ। ಮಡಿಯಲ್ಲಿ ಮನೆಯಲ್ಲಿ। ಮುಡಿಯಲ್ಲಿ ಮುಳ್ಳಿನಲ್ಲಿ। ಎಡೆಯಲ್ಲಿ ಯಾಗದಲ್ಲಿ। ಕುಡಿಯಲ್ಲಿ ಕುರಿಯಲ್ಲಿ। ತಡೆಯಲ್ಲಿ ತಾಳದಲ್ಲಿ। ಕಡಲಲಿ ಕಾಂತಿಯಲ್ಲಿ। ಹಡಗದಲ್ಲಿ ಹಳಿಯಲ್ಲಿ। ಫಡೆಯಲ್ಲಿ ಪಟ್ಟಣದಲ್ಲಿ। ಪಡಿಯಲ್ಲಿ ಪಂಥದಲ್ಲಿ ಒಡಿವೆಯಲ್ಲಿ ವಾಜಿಯಲ್ಲಿ। ಪೊಡವಿಯೊಳಗೆ ಕಂಡ। ಕಡಿಯಲ್ಲಿ ಕಾಣದಲ್ಲಿ। ಎಡೆಬಿಡದೆ ಈ ಮನಸು। ಅಡಿ ಮೇಲಾಗಿ ಪೋದಲ್ಲಿ। ನುಡಿ ಮತ್ತೆ ನುಡಿ ಮಾಡಿ। ಧೃಡವಾಗಿ ಅಲ್ಲಲ್ಲಿ। ನುಡಿ ಪ್ರಕಾರ ನಿಬಿಡವಾಗಿ ಇಪ್ಪರೆಂದು। ಎಡಿಗಡಿಗೆ ತಿಳಕೊಂಡು। ಕಡು ಕೃತಾರ್ಥನಾಗೊ। ಪಡಿಯಿಲ್ಲದ ದೈವ ವಿಜಯ। ವಿಠ್ಠಲಹರಿಯಾ। ಒಡನೊಡನೆ ನೆನಿಸುವದು। ಒಡಲೊಳು ಗುಣಿಸುತ್ತ ॥೫॥

**ಜತೆ**

ಘನ ಪೂಜಿ ಇದು ಕಾಣೊ ಆಲೋಚಿಸಿ ನೋಡಿ ।
ಗುಣಾತೀತ ವಿಜಯವಿಠ್ಠಲನ ಪಾದದಲ್ಲಿರು ॥೬॥

❖ ❖ ❖

## ಸುಳಾದಿ-೪೪

ದುರಾಶಾವರ್ಜನಪೂರ್ವಕ ಬಾಹಿರಕರ್ಮ ಬಿಡುವಿಕೆ

**ರಾಗ-ಅಹರಿ ಧ್ರುವತಾಳ**

ಬಾಹಿರದಂಗಡಿ ಬಲು ವೆಗ್ಗಳ ಮಾಡಿ। ಅಹಂಕಾರದಲ್ಲಿ ತಿರುಗಿತಿರುಗಿ ರಹಸ್ಯವೆಲ್ಲವು ಕಂಡವರಿಗೆ ಬೀರಿ। ಮೋಹ ಪುಟ್ಟುವಂತೆ ವೊಲಿಸಿಕೊಂಡು। ದೇಹ ಪುಷ್ಟಿಕರ ವಾಹದಕೆ ನಾನ। ಆಹಾರ ಭಕ್ಷಿಸಿ ದಿನವ ಕಳೆದೂ। ಗುಹಾಶ್ರಯವ ನೋಡಿ ಮನ್ನಿಸದಲೆ ನಿತ್ಯ। ತ್ರಾಹಿ

ವೆಂದೆಂಬೆನೊ ಸರ್ವರಿಗೆ। (ಗುಹಾದ್ರಿಯಗಮನ) ವಿಹಂಗ ಗಮನ ವಿಜಯ ವಿಠ್ಠಲರೇಯ। ಮಹಿಸುರರಾ ಜನನದಲಿ ಬಂದರು ಬರಿದೆ ॥೧॥

**ಮಟ್ಟತಾಳ**

ಕೈ ಬಾಯಿ ಮತ್ತೆ ಒಂದು ನ್ಯಾಯದಲ್ಲಿ ಇರಸದಂಥ। ನಾಯಿ ಮನುಜರೇನು ಕರ್ಮ ಉಪಾಯದಿಂದ ಮಾಡಲೇನು। ಈಯದೊ ಫಲ ಈಯುದೊ ಪುಣ್ಯ ಈಯುದೊ ಹರುಷ। ಶ್ರೀಯರಸ ವಿಜಯ ವಿಠ್ಠಲರಾಯ ಮೆಚ್ಚಕಾಯನಯ್ಯಾ ॥೨॥

**ತ್ರಿವಿಡಿತಾಳ**

ಅರ್ಥಜ್ಞಾನವಿಲ್ಲದೆ ಅರ್ಥದಾಸಿ ತೊರಿಯದೆ। ತೀರ್ಥಯಾತ್ರೆಗಳಲ್ಲಿ ತಿರಗಲದೇನಯ್ಯಾ। ವ್ಯರ್ಥವಲ್ಲದೆ ಪುಣ್ಯಸಾರ್ಥಕವಾಗದು। ತೀರ್ಥಧರಗಾದರೂ ಯುಥಾರ್ಥವೆನ್ನಿ। ಮರ್ತ್ಯರು ಮಾಡಿ ಕೃತಾರ್ಥರಾದೆವೆಂಬಲ್ಲಿ। ಸಾರ್ಥ ಮರುಳಾಟವಲ್ಲ ಮುಕ್ತಾರ್ಥವಲ್ಲಾ। ಪಾರ್ಥಪಾಲಕ ನಮ್ಮ ವಿಜಯ ವಿಠ್ಠಲನ ಪ। ದಾರ್ಥ ತಿಳಿಯದವ ದುಃಖಾರ್ಥನವನು ಕಾಣೊ ॥೩॥

**ಅಟ್ಟತಾಳ**

ಕೋಡಗದ ಕೈಯು ಕನ್ನಡಿ ಸಿಕ್ಕರೆ ನೋಡಿಕೊಂಡು ಸುಖಬಡಬಲ್ಲದೆ। ಮೂಢ ಜನರಿಗೆ ಭೂಸುರ ಜನ್ಮಬಂದರೆ। ರೂಢಿಯೊಳಗೆ ಬಲಾನಂದದಲ್ಲೀ ಗಾಢವಾಗಿದ್ದು ಶ್ರೀಹರಿಯಗುಣಂಗಳ। ಹಾಡಿ ಪಾಡಿ ಧನ್ಯನೆನಿಸುವನೇ। ದಾಡಿಲಿಧರೆಯನೆತ್ತಿದವಿಜಯವಿಠ್ಠಲ। ನೋಡಿನಗುತಿಪ್ಪ ಮಾನವರಾಟಕ್ಕೆ ॥೪॥

**ಆದಿತಾಳ**

ಕಳ್ಳಿಯ ಹಾಲನು ಕರತಂದು ಮಜ್ಜಿಗಿಯಲ್ಲಿ ಹೆಪ್ಪುಗೊಡಲು ಫಲಿಸೋದೆ ಮರುಳೆ। ನಿಲ್ಲಾದು ನಿಲ್ಲಾದು ಆಶೆ ಬಿಡದ ನರಗೆ। ಎಲ್ಲಿಗೆ

ತೀರ್ಥಯಾತ್ರೆ ತಿರುಗಿದ ಪುಣ್ಯ ಫುಲ್ಲದಳ ಲೋಚನ ವಿಜಯ ವಿಠ್ಠಲನಿಗೆ। ಅಲ್ಲದವನಾಗಿ ಅರಸಾಗಿ ಪೋಪ ॥೫॥

**ಜತೆ**

ಆಶೆ ಬಿಡದ ಮನುಜ ದಾಸನಾದರೆ ಏನೂ ।
ಮೀಸಲಗತಿ ಇಲ್ಲ ವಿಜಯ ವಿಠ್ಠಲ ಬಲ್ಲ ।

❖ ❖ ❖

## ಸುಳಾದಿ-೩೫

ಧನದಾಶೆಯ ಬಿಟ್ಟು ಧನ ತನು ಮನೆ ಮಾನಿನಿ ತನುಜರು
ಶ್ರೀಹರಿಯ ಸೇವಕರೆಂದು ಶ್ರೀಹರಿಗೆ ಅರ್ಪಿಸಿ ಸುಖಬಡು.

**ರಾಗ-ಕಲ್ಯಾಣಿ ಝುಂಪಿತಾಳ**

ಧನ ಘಳಿಪೆನೆಂದು ಕ್ರೋಧನ ಬಳಿಸಿ ಹಗಲಿರುಳು। ಧನ ಪಿಶಾಚಿಯಂತೆ ತಿರುಗಿ ತಂದವಾ। ಧನವ ಸ್ಥಾಪಿಸಿ ವೇಧನೆಯಿಂದ ಕಲಕಾಲ। ಧನ ಚಿಂತೆಯಲಿ ಬಡವಾಗಿ ನೊಂದೂ। ಧನವೆ ಪೋಗಲು ರೋದನಕೆ ಆರಂಭಿಸಿ। ಧ್ವನಿಮಾಡಿ ಆರ್ಜಿತವ ನೆನಿಸಿಕೊಂಬೆ। ಧನದಾಸೆ ಬಿಡು ನಿರ್ಧನ ಪುರುಷನಾಗಿ ಸಾ। ಧನಕೆ ಮನ ವೆರಗಿ ಗುಣವಂತನಾಗೋ। ಧನು ಪಾಣಿ ವಿಜಯ ವಿಗ್ರಹನ ಆರಾ। ಧನವೆ ಲೇಸಾಗಿ ಮರಿಯದಲೆ ಮಾಡೊ। ಧನದಿಂದ ಗತಿ ವಿರೋಧನವೆ ನಿಶ್ಚಯವೆಲ್ಲ। ಧನವುಳ್ಳ ದುರ್ಯೋಧನನು ಏನಾದನೂ। ಧನುರ್ವೇದ ವಿಜಯವಿಠ್ಠಲನ್ನ ನಾಮವೆ। ಧನವೆ ಸಂಪಾದಿಸಿ ಧನಿಕ ನೀನಾಗೊ ॥೧॥

**ಮಟ್ಟತಾಳ**

ಉಂಟಾದರೆ ನೀಯೊ ಉಂಟಾದರೆ ನೀಯೊ। ಉಂಟು ನಿನಗೆ ವೈಕುಂಠ ಪೊರ್‍ದ ಪಾರಿ। ಗಂಟನು ಕರುಳನು ಗಂಟಿಕ್ಕಿಕೊಂಡು। ಎಂಟು

ಮಡಿ ಘಳಿಸೆ ಕಂಟಕವಾಗುವದು। ಶುಂಠನಾಗದೆ ದಶಕಂಠಾನುಜಪಾಲ ವಿಜಯ। ವಿಠ್ಠಲನನ್ನ ನೆಂಟರ ಸುಖಬಿಡಿಸಿ ಬಂಟನೆಂದೆನಿಸೊ ॥೨॥

### ತ್ರಿವಿಡಿತಾಳ

ಧನವಪೇಕ್ಷ ಉಳ್ಳಂಥ ಮಾನವರಿಗೆ। ಕನಸಿನೊಳಗಾದರು ದುರ್ದೆಶ ಬಿಡದೊ। ದಿನ ಪ್ರತಿದಿನ ನಿದ್ರಿ ವಿರಹಿತನಾಗಿ। ತನ ಗುರು ಬಂಧುಗಳ ಸ್ನೇಹ ತೊರೆದು। ಅನು ಜಾಗ್ರಜರೊಡನೆ ಹಗೆಸಾರಿ ಒಂದೊಂದು। ಹಣಕೆ ಪ್ರಾಣವೊಪ್ಪಿಸಿ ಕೂಡಿಹಾಕೇ। ಧನೇಶ್ವರ ನಾಮ ವಿಜಯವಿಠ್ಠಲನ್ನ। ನೆನವೆ ಮರದರೆ ಈ ಧನವೆ ಕಾಯ್ವದೆ ಮರುಳೆ ॥೩॥

### ಅಟ್ಟತಾಳ

ಧನದಿಂದ ತನುವಿಗೆ ಹಾನಿ। ಧನದಿಂದ ಧರ್ಮಕ್ಕೆ ನಾಶ। ಧನದಿಂದ ಪರಗತಿಗೆ ಕೇಡು। ಧನದಿಂದಲಿ ಅಹಂಕಾರ ಪ್ರಾಪ್ತಿ। ಧನದಿಂದ ಪುಣ್ಯಕ್ಕೆ ದೂರ। ಧನವಧಿಕವಾಗೆ ಮನುಮಥ ಹೆಚ್ಚುವ। ಮನುಜ ಮದ ಹೆಚ್ಚುವದು ಅನಿಮಿಷ ವಿಜಯ ವಿಠ್ಠಲನು ವಲಿಯಾನು। ದನುಜರೊಳಗೆ ಗುಣಿಸಿ। ಎಣಿಸುವಾನು ॥೪॥

### ಆದಿತಾಳ

ಲೋಷ್ಟ ಕಾಂಚನ ಸಮವೆಂದು। ನಿಷ್ಟಿಯಿಂದಲಿ ನೋಡುತಲಿರು। ದೃಷ್ಟಿಯಲ್ಲಿ (ಇಂದಲಿ) ಕಂಡು ಪದದಲಿ। ಮೆಟ್ಟಿದರು ಬಿಟ್ಟು ಬಿಡು। ಕೊಟ್ಟಿರು ಸ್ವಲ್ಪದರಿಂದ। ತೃಷ್ಣನಾಗಿ ತೃಪ್ತಿಬಿಡು। ತುಷ್ಟ ವಿಜಯ ವಿಠ್ಠಲನ್ನ। ಕಷ್ಟಾರ್ಜಿತದಿಂದಲರ್ಚಿಸು ॥೫॥

### ಜತೆ

ಧನ ಮನ ತನು ಮನೆ ಮಾನಿನಿ ತನುಜರೇನೇನು ।
ಅನಿರ್ವಿಣ್ಣ ವಿಜಯ ವಿಠ್ಠಲಗಿತ್ತು ಸುಖಬಡೂ ॥೬॥



## ಸುಳಾದಿ-೪೭

ಆಶಾ ನಿವೃತ್ತಿ ಮಿತ ಆಹಾರಾದಿ ವೈರಾಗ್ಯವಿಷಯ

### ರಾಗ-ಭೈರವಿ ಧ್ರುವತಾಳ

ಆಶೆವೆಂಬೊ ಪಿಶಾಚಿ ಸೋಂಕಿದೆ ಆದಿಯಲ್ಲಿ। ಏಸೇಸು ದೇಶ ಸುತ್ತೆ ತೊಲಗದಯ್ಯಾ। ಲೇಶವಾದರು ಇದಕೆ ಹೇಯಪುಟ್ಟದು ರುವ್ವೆ। ಕಾಸಿಗಾದರು ಪ್ರಾಣ ಒಪ್ಪಿಸುವೆನೊ। ದೋಷಕಂಜದೆ ನಾನಾ ಬಗೆ ಬಗೆಯವರ ತುತಿಸಿ। ಕ್ಲೇಶದಿಂದಲಿ ಬಳಲಿ ಬರಿದಾಗುವೇ। ಘಾಸಿ ಮಾಡುವ ಪಿಶಾಚಿಗೆ ಬಲಿಯೆ ಈಯೆ। ತಾ ಸುಮ್ಮನೆ ಬಿಟ್ಟು ಪೋಗುವದೊ। ಈ ಶರೀರದೊಳಿದ್ದ ಆಶೆ ಎಂಬೊ ಪಿಶಾಚಿ। ರಾಸಿ ಬಲಿಹಾಕಿದರು ಬಿಡದಿಪ್ಪದು। ಈ ಸುಮೇರು ಬ್ರಹ್ಮಾಂಡ ಆಕಾಶ ಪರ್ಯಂತ। ಬ್ಯಾಸರವಿಲ್ಲದೆ ತಿರುಗುತಿದೆ। ಆಶೆಯಾಗುವದಿದರ ಮೊದಲು ಕೊನೆ ಆವದು। ಲೇಸಾಗಿ ನೋಡಿದರು ನೆಲೆ ತೋರದೊ। ಭೂಸುರನಾದೆನೆಂಬೊ ಗರ್ವಿಕಿಯಲ್ಲದೆ। ಮೀಸಲ ಗುಣದಲ್ಲಿ ಇರದೆಪೋದೆ। ಕಾಸು ಕೊಡುವರಿರೆ ವಾರ್ತಿಯ ಕೇಳುತ್ತಲೆ ಕಾಶಿಗೆ ಪೋಗಿ ಧಾವತಿಬಡುವೇ। ಶೇಷಶಾಯಿ ಸಿರಿವಿಜಯ ವಿಠ್ಠಲ ಜಗ। ದೀಶ ನೀನೊಲಿಯದಲೆ ಆಶೆ ಪಿಶಾಚಿ ಬಿಡದೊ ॥೧॥

### ಮಟ್ಟತಾಳ

ಕೊರಳಿಗೆ ಅಸ್ಥಿಯಸರ ಧರಿಸಿ ಮೇಲೆ। ಮಿರಗುವ ವಸನ ಪೊದ್ದರೆ ಪರರಿಗೆ ಗೋ। ಚರವಾಗದು ಕಾಣದ ತೆರದಲ್ಲಿ ನಾನು ಅಂ। ತರ ಮಲಿನ ಬಿಡದೆ ಹೊರಗೆ ನಿರ್ಮಳನೆಂದು। ಕರಿಸಿ ಕೊಂಡೆನೊ ನಿತ್ಯಾ। ಮರಗುವೆ ಮಹಾ ಆಶೆ ಶರಧಿಯೊಳಗೆ ಮುಣಗಿ। ಧರೆಯೆಲ್ಲ ಬಿಡದೆ ತಿರುಗಿ ಬಸವಳಿದೆ। ಪರಿ ಪರಿ ಗುಣವುಳ್ಳ ವಿಜಯ ವಿಠ್ಠಲ ನಿನ್ನ। ಚರಣದಲ್ಲಿ ಆಶೆ ಅರೆ ಕಾಲವಿಲ್ಲಾ ॥೨॥

### ತ್ರಿವಿಡಿತಾಳ

ಒಂದು ಆಶೆಯಿಂದ ನಿತ್ಯ ಮಾಡುವ ಸ್ನಾನ। ಸಂಧ್ಯಾನ ಜಪತಪ ಅತಿಥಿ ಪೂಜೆ। ನಂದವಾಗಿಪ್ಪ ನಿನ್ನ ನಾಮ ಸ್ಮರಣೆಯ। ಛಂದವಾಗಿಮಾಳ್ಪ ಸಜ್ಜನರ। ಸಂದರುಶನವಾಗೆ ಉತ್ತಮ ಗತಿಮಾರ್ಗ। ಹಿಂದಾಗಿ ಪೋಗೋದೊ ಕೈ ಸೇರದೆ। ಮಂದಮತಿಯು ನಾನು ಆಶೆ ಎಂಬುದು ಬಿಡದೆ। ನೊಂದು ಸತ್ಕರ್ಮವ ಮರೆವೆನಯ್ಯಾ। ಇಂದೆನ್ನಾ ಮೊರೆ ಕೇಳೊ ವಿಜಯ ವಿಠ್ಠಲ ನೀನೆ। ಬಂದು ಪೊಂದಿದ ಮೇಲೆ ಇಂತಾಗುವದೇನೊ ॥೩॥

### ಅಟ್ಟತಾಳ

ಭೋಗಿಯಾಗಿ ಬಲು ಸುಖ ಬಟ್ಟಕಾಲಕ್ಕು ಯೋಗಿಯಾಗಿ ಮಂಡೆ ಬೋಳಾದ ಕಾಲಕ್ಕು। ರೋಗಿಯಾಗಿ ಮನೆ ಸೇರಿದ ಕಾಲಕ್ಕೂ। ವಾಗರ ಉಂಡು ತೃಪ್ತಿಯಾದ ಕಾಲಕ್ಕು। ತಾಗಿನೊಂದು ನಿತ್ಯ ದುಃಖದ ಕಾಲಕ್ಕು। ತೂಗುವ ತಕ್ಕಡಿಯೊಳಗಿಟ್ಟ ಕಾಲಕ್ಕು। ಜೋಗಿಯಾಗಿ ಪೋಗಿ ತಿರತಿಂದ ಕಾಲಕ್ಕು। ಲೋಗರಿಗಿಂತ ಅಧಿಕವಾದ ಕಾಲಕ್ಕು। ಸಾಗರದಗಲ ಹೊನ್ನಿನ ಹಾಸಿಕೆ ಹಾಕಿ। ಜಾಗುಗೊಳಿಸದಲೆ ಹೊರಳಿದ ಕಾಲಕ್ಕು। ಈ ಗುಣ ಬಿಡದಯ್ಯಾ ಅನಂತ ಜನ್ಮಕ್ಕೆ। ಭೂಗೋಳದೊಳಗಿಂಥ ಆಶೆ ಬಡಕ ನಾನು। ಸಾಗರಸುತೆ ಪತಿ ವಿಜಯ ವಿಠ್ಠಲ। ಭವರೋಗದ ನರರಿಗೆ ಅಪಥ್ಯೆವೆವಿದು ॥೪॥

### ಆದಿತಾಳ

ಆಶೆ ಬಿಡುವದಕ್ಕೆ ಒಂದುಪಾಯವೆ ಉಂಟು। ಶೋಷಿಸಬೇಕು ತನ್ನ ದೇಹ ದಂಡನೆ ಮಾಡಿ। ಗ್ರಾಸವೆ ತೊರಿಯಬೇಕು ಮಿತ ಆಹಾರವೆ ಮಾಡಿ ದೋಷಕ್ಕಂಜಲಿಬೇಕು ಸಂಸಾರವೆಂಬೋದು। ಮೋಸವೆಂದು ತಿಳಿದು ಇದ್ದರು ಇರಲಿ ಉ। ದಾಸಿನದಿಂದಲ್ಲಿ ಕಾಲ ಕಳಿಯಬೇಕು। ರಾಸಿ ದ್ರವ್ಯ

ತೊಲಗದೆ ಪ್ರಾಪುತವಾದರು। ಕೇಶ ಸವಾನವೆಂದು ಬಗೆದು ನೋಡಲಿಬೇಕು ಶ್ರೀ ಸಂಬಂಧವಿಲ್ಲದ ವಿಜಯವಿಠ್ಠಲರೇಯ। ಈಸು ಲಾಭವೆನಗೆ ಮುದದಿಂದ ಪಾಲಿಪದು ॥೫॥

**ಜತೆ**

ಇದು ಬಿಡಿಸದಿರೇ ಎನಗೆ ಸಾಧನವಿಲ್ಲ ।
ಇದನೆ ಪರಿಹರಿಸೋದೊ ವಿಜಯ ವಿಠ್ಠಲ ಒಲಿದು ॥೬॥

❖ ❖ ❖

## ಸುಳಾದಿ-೪೭

ಸ್ವಸ್ಥಮನದಲ್ಲಿದ್ದು ಶ್ರೀಹರಿಯನ್ನು ನಂಬಿ ಯದ್ರಿಚ್ಛಾಲಾಭಸಂತುಷ್ಟನಾಗು

**ರಾಗ-ಕಾಂಬೋದಿ ಧ್ರುವತಾಳ**

ಲಂಪಟದೊಳು ಬಿದ್ದು ಓಡ್ಯಾಡುವಿ ಎಂದು। ಸಂಪಿನಲ್ಲಿ ನಗುವದು ಜಾಣತನವೊ। ತಂಪಾದ ನೆರಳಿನಲ್ಲಿ ಸುಖಿಸುವ ಮನುಜ। ಕುಂಪಟಿ ಮೈಗೆ ಹಚ್ಚಿಕೊಂಬೊನೆನೋ। ಇಂಪಾಗಿ ಇದ್ದ ಏಕಾಂತದಲಿ ಹಣ್ಣು ಹಂಪಲಿ ವಾತಾಂಬು ಪರ್ನಾಶನಾ। ಸಂಪತ್ತಿನಲ್ಲಿ ಸವಿದು ಕಾಲ ಕಾಲ ನಿನ್ನ ಭಜನೆ। ಗುಂಪಿನೊಳಗೆ ಇದ್ದು ಗುಪ್ತದಲ್ಲೀ। ಸಂಪದವಿಗೆ ಮಾರ್ಗಮಾಡಿಕೊಂಡು ಜ್ಞಾನ ಸಂಪಾದಿಸಿಕೊಳ್ಳುತ ಇದ್ದೆ ನಕಟ। ಸಂಘುಲ್ಲಾಕ್ಷನೆ ಕೇಳೊ ವೈಷಿಕವಾದ ಹೀನ। ಕಂಪ ಕುಡಿವೇನೇನೊ ಲೇಸು ತೊರದೂ। ಕೆಂಪಾಗಿದ್ದ ಮೋರಿಗೆ ಆವನಾದರು ಕಪ್ಪು। ಇಂಪಿನಲ್ಲಿ ಹಚ್ಚಿಕೊಂಡವನುಂಟೆ। ಕೊಂಪಿ ಮಿಕ್ಕಾದ ವಿಷಯ ಈ ದೇಹವನ್ನೆ ಬೇಡಿ। ಸಂಪರ್ಕದೊಳಗೀಡೆಂದು ಹೊರಳಿದೆನೇ। ಸಂಪಾತಿ ತಮ್ಮ ನೊಡಿಯ ನಮ್ಮ ವಿಜಯ ವಿಠ್ಠಲರೇಯ। ಸಂಪ್ರಜ್ಞ ಅಸಂಪ್ರಜ್ಞ ಸಮಾಧಿಗಳ ಪ್ರೀಯಾ ॥೧॥

## ಮಟ್ಟತಾಳ

ಕಸ್ತೂರಿಗೆ ಪೋಗಿ ಕಂಡ ಕಡಿಗೆ ತಿರುಗಿ। ದುಸ್ತರವಾಗಿದ್ದಾರಣ್ಯವೆ ಪೊಕ್ಕಂತೆ। ಹಸ್ತದೊಳಗೆ ತೋರುವ ವಿದ್ಯವ ಓದದಲೆ। ಪುಸ್ತಕವನೆ ನೋಡಿ ಪಠಿಸಿಕೊಂಬುವನಂತೆ। ವಸ್ತ ಮುಂದಿಟ್ಟಿರಲು ವಶ ಮಾಡಿಕೊಳದೆ। ಅಸ್ತ ಮಾನವಿಡಿದು ಬಳಲಿ ಸೊರಗಿದಂತೆ। ಮಸ್ತಕದ ಮೇಲೆ ಮಣಿ ಮಕುಟವೆ ಇರಲು। ಹಸ್ತಿ ತೂಕದ ಕಲ್ಲು ಪೊತ್ತು ತಿರುಗಿದಂತೆ। ಸ್ವಸ್ತ ಮನಸಿನಲ್ಲಿ ಇದ್ದಲ್ಲಿ ಇರದೇ। ವಿಸ್ತೀರ್ಣವಾದ ಲಂಪಟದೊಳು ಹೊರಳಿ। ವಸ್ತೀಕಾರನಂತೆ ವಸ್ತಿ ಬಡುವೆನೆಂದು ನುಡಿವದು ಘನತನವೆ। ಹಸ್ತಿವರದ ನಮ್ಮ ವಿಜಯ ವಿಠ್ಠಲ ಪರ। ವಸ್ತುವೆ ಇಂದೆನ್ನ ಹಂಗಿಪದೇನಯ್ಯಾ ॥೨॥

## ತ್ರಿವಿಡಿತಾಳ

ಗುಣಹೀನನೆಂದು ನಗುವರೆ ಹೀಗೆ। ಇನಿತು ನಿತ್ಯನಯ್ಯಾ ಸಮರ್ಥರ ಪ್ರಿಯಾ। ಜನವೆಲ್ಲಿ ನೋಡಿದರು ಡೊಂಕೆ ಇಲ್ಲಾ। ಗುಣ ಪೂರ್ಣ ಪರದೈವ ವಿಜಯವಿಠ್ಠಲ ನಿನ್ನ। ಮನಸಿಗೆ ತಿಳಿದುಳ್ಳರೆ ಸಾಕು ಎನಲ್ಯಾಕೆ ॥೩॥

## ಅಟ್ಟತಾಳ

ಭಳಿರೆ ನಿನ್ನಾಟವು ನಿನಗೊಳಿತಾಗಿದೆ। ನೆಲಿಯ ಬಲ್ಲವನಾಗಿ ಇರಬೇಕು ಇರಬೇಕು। ಜಲಜ ಲೋಚನ ನಿನ್ನ ಸಂಗಡ ಅನುಗಾಲ। ಸುಲಭ ನಂದವನಾವಾ ಅವಗೆ ವಂದಿಸಬೇಕು। ಕಲಿಯುಗದೊಳಗಿದು ವಿಹಿತವಲ್ಲೆಂಬಿಯಾ। ಚಲಿಸುವನಾರು ಪೋಪನಾರು ಮಿಕ್ಕಾದಾ। ಫಲಪ್ರಾಪ್ತಿ ಮಾಡಿ ಕೊಡುವನಾರು ಎಂದಿಗೆ। ಒಲಿದು ಕೇಳುವದಯ್ಯ ಮತ್ತೆ ನಾನೊಬ್ಬನೆ। ಬಳಿವಿಡಿದು ಸರ್ವದ ಬಪ್ಪರು ನಿನ್ನ। ಬಳಗವಲ್ಲವೇನೊ ಭಾಗ್ಯವಂತ ಹರಿ। ಬಲು ಜ್ಞಾನಿಗಳ ಪ್ರಿಯಾ ವಿಜಯ ವಿಠ್ಠಲ ಎನ್ನ। ಒಳಗಿದ್ದು ಈ ಪರಿ ನುಡಿಸಿ ನಡಿಸುವ ದೀಪ್ತಾ (ದೈವಾ) ॥೪॥

### ಆದಿತಾಳ

ಒಬ್ಬರಿಬ್ಬರೆನೊ ಭುಂಜಿಸುವರು ನಿತ್ಯಾ। ಹಬ್ಬಿಗಿಕ್ಕದೆ ನೋಡು ಸಾಲು ಸಾಲಾಗಿ ಇದ್ದು। ಉಬ್ಬಿ ಮತ್ಸರದಿಂದ ಎಲ್ಲ್ಯಾದರು ನಾನೊಬ್ಬನೆ ಉಂಬೆನೆಂದು ಪೇಳಿಕೊಂಡರೆ ಎನ್ನನಿಬ್ಬರ ಕರ್ಮದಲ್ಲಿ ಬಿಡದೆ ಹಾಕಲಿ ಬೇಕು। ಗುಬ್ಬಿಯ ಮರಿ ಒಂದು ತೃಟಿಯಾಗಿ ಪೋಗಿ ಏಳು। ಅಬ್ಧಿಯ ಜಲವನ್ನು ಪಾನ ಮಾಡಿತು ಎಂದು। ಬೊಬ್ಬಿಟ್ಟು ಪೇಳಿದರು ಆರಾದರೊಪ್ಪೊರೇ। ಉರ್ಬಿಯೊಳಗೆ ನಾನೊಬ್ಬನೆ ಎನಗಿಷ್ಟು ಲಬ್ಧವಾದದೆ ಫಲ ತಂದುಕೊಡುವೆ ನೀನೂ। ಶಬ್ದಾತೀತ ನಮ್ಮ ವಿಜಯ ವಿಠ್ಠಲ ಕೇಳೊ। ಸದ್ಬ್ರಾಹ್ಮರೆ ಸಾಕ್ಷಿ ಎನಗೆ ನಿನಗೆ ದೇವ ॥೫॥

### ಜತೆ

ಬೇಕೆಂಬೋದೆ ಇಲ್ಲ ಲೇಶ ಮಾತುರ ಪೇಕ್ಷಾ ।
ನೀಕೊಟ್ಟರೆ ಇರಲಿ ವಿಜಯ ವಿಠ್ಠಲರೇಯಾ ॥೬॥



## ಸುಳಾದಿ-೬೮

(ಆಶಾನಾಶಕ)

**ಸ್ವಹಂಕಾರ ಖಂಡನ ಪೂರ್ವಕ ಸಕಲ ಹರಿಕತೃತ್ವಾನುಸಂಧಾನವೈರಾಗ್ಯಪರ**

### ರಾಗ-ಕಲ್ಯಾಣಿ ಧ್ರುವತಾಳ

ವ್ಯಾಕುಲವೇನೊ ಮನವೇ ಯಾಕೆ ನಿನಗೆ ನಿತ್ಯ। ಸಾಕುವ ದಾತಾರ ಶ್ರೀಕಾಂತನನುದಿನ। ಲೋಕಲೋಕವನೆಲ್ಲ ಸಾಕುವ ಭಾರ ಕರ್ತಾ। ಬೇಕೆಂದು ಪ್ರತಿದಿನ ಜೋಕೆ ಮಾಡುವನೊ। ಕಕ್ಕುಲಾತೆ ಬಿಡಿದು ಲೌಕೀಕದೊಳು ಬಿದ್ದು। ಕುಕರ್ಮವನು ಸರಿಸಿ ಶೋಕಕ್ಕೊಳಗಾಗದಿರು।

ನೂಕು ಸಂತಾಪವನೇಕ ಬಗೆಯಿಂದ ವಾಕುಸಾರಿದೆನಿದು। ನೀ ಕೇಳು ದೃಢವಾಗಿ ಈ ಕುಂಭಿನಿಯ ಮಧ್ಯ। ಪ್ರಾಕೃತವಿಡಿದು ಬದುಕುವ ಜೀವಿಗಳ ಸಾಕುವ ನಾರು। ಗೋಕುಲಾಂಬುಧಿ ಚಂದ್ರವಿಜಯ ವಿಠ್ಠಲ ಗ್ರಾಸ। ಹಾಕುವ ನಿರಲಾಗಿ ನೀ ಕಳವಳಿಸುವರೇ ॥೧॥

## ಮಟ್ಟತಾಳ

ಒರ ಬಂದರೇನು ಬಾರದಿದ್ದರೆ ಯೇನು। ಧರೆ ಎಲ್ಲ ಇಂದು ಕರಗಿ ಪೋದರೆ ಯೇನು। ಅರಸಾಗಿದ್ದವರ ಕರುಣ ತಪ್ಪಿದರೇನು। ವರುಷಂಗಳ ತಡೆದು ಇರಲಿ ಇದ್ದರೆ ಯೇನು। ಗಿರಿ ಸಮುದಾಯಗಳು ಹರಿದು ಬಂದರೆ ಯೇನು। ಹರಿದು ಮುಗಿಲು ಮೇಲೆ ಒರಗಿದರೇನು। ಧರಣಿ ಪಾಲಕ ರಂಗ ವಿಜಯು ವಿಠ್ಠಲರೇಯ। ಪರಮ ಪುರುಷ ಹರಿಯ ಶರಣಗೆ ಭಯವೇನು ॥೨॥

## ತ್ರಿವಿಡಿತಾಳ

ಶಾರೆ ಹೊನ್ನಿಗೆ ಭತ್ತ ಶಾರೆಯಾದರೆ ಯೇನು। ನೂರಾರು ಖಂಡಗ ಕಾಸಿಗಾದರೆ ಯೇನು। ಊರು ಊರಲಿ ಧನ ಸೂರೆಬಿಟ್ಟರೆ ಯೇನು। ಮಾರುವ ಧಾರಣಿ ಏರಿ ಇಳಿದರೇನು। ಘೋರಾರಣ್ಯದೊಳು ಪೋಗಿ ಇದ್ದರೆ ಯೇನು। ನೀರು ಇಲ್ಲದ ಠಾವು ದೊರಿತಾರೇನು। ಅರಾಜಕವಾಗಿ ಭೀತಿ ಬಂದರೇನು। ಆರಾದರು ಮೋರೆ ತಿರುಹಲೇನು। ಮೇರೆದಪ್ಪಿ ಏಳು ವನಧಿ ಹೆಚ್ಚಿದರೇನು। ದಾರಣದಲಿ ದೇಹ ಬಳಲಾಲೇನು। ಶರೀರವೆ ಶ್ರೀನಿವಾಸನ ಚರಣಕ್ಕೆ। ಆರೋಪಿಸಿದ ತರುವಾಯದಲ್ಲೀ। ವಾರ ವಾರಕೆ ಮನ (ಕೆ) ವೆ ಯೋಚನೆ ಗೊಳಸಲ್ಲ। ಪೂರೈಸಿ ತಿಳಿಯೊ ಹರಿಯ ಮಹಿಮೆಯನ್ನು। ನಾರಾಯಣ ರಂಗ ವಿಜಯವಿಠ್ಠಲ ನಿತ್ಯ। ಭಾರ ಕರ್ತನಾಗಿ ಪೊರೆವನು ಪ್ರತಿದಿವಸ ॥೩॥

**ಅಟ್ಟತಾಳ**

ಉದರದೊಳಗೆ ಬಂದು ಉದುಭವಿಸಿದಾಗ। ವದನಕ್ಕೆ ತಂದು ತೊಡದವರಾರೊ ಬೆಣ್ಣಿಯ। ಬದಿಗನು ತಾನಾಗಿ ಪದೆ ಪದೆಗೆ ಹರಿ। ಬದಿಯಲ್ಲಿ ನಿಂದು ಹದುಳ ನೋಡುತಲಿದ್ದು। ಪೊದೆ ವನ ಗಿರಿ ಗುಹೆ ಹೊದರಿನೊಳಿದ್ದರು। ಕ್ಷುಧೆಯಾಗಗೊಡದಂತೆ ಮಧುರನ್ನವ ತಂದು। ಉದಯಾಸ್ತ ಮಾನ ಬಿಡದೆ ಉಣಿಸುವ ಸತ್ಯ। ಮದಡು ಮಾನವ ನಿನ್ನ ಉದರ ಚಿಂತಿಯ ಬಿಡು। ಹೃದಯದೊಳಗೇ ಸಿರಿ ಪದುಮನಾಭನ ಇಡು। ಒದಗಿ ಸಾಕುವ ತಂದೆ ವಿಜಯವಿಠಲನಿರೆ। ಇದೆ ಧೈರ್ಯವಿಡಿದು ಮುದದಿಂದ ನಲಿದಾಡು ॥೪॥

**ಆದಿತಾಳ**

ಹಿಂದೆ ಬಹು ಜನನಂಗಳು ಬಂದು ಬಂದು ಪೋದುದಕ್ಕೆ। ಒಂದು ತೃಣವಾದರೂ ನಿನ್ನಿಂದ ನೀನೆ ಫಳಿಸಲಿಲ್ಲಾ। ಇಂದಿರಾ ರಮಣನು ತಾ ಒಂದು ಒಂದು ಪರಿಯಲ್ಲಿ। ಬಾಂಧವನಾಗಿ ನಿತ್ಯ ನಿಂದು ಭಾರ ಕರ್ತನಾಗಿ। ಒಂದು ನಿಮಿಷ ಮೀರಗೊಡದೆ ಸಂದೇಹ ಬಡದಂತೆ। ಚಂದವಾಗಿ ವಲಿದು ಆನಂದ ಸುಖ ಬಡಿಸುವಾ। ಮುಂದು ಗೆಡದಲೆ ಹೇಗೆಂದು ಚಿಂತೆ ಮಾಡದಲೆ। ಎಂದೆಂದಿಗೂ ಕಳೆ ಗುಂದದಲಿರು ಮನವೆ। ಹಿಂದೆ ಇಂದು ಮುಂದು ಬಿಡದೆ ತಂದೆಯಾಗಿ ಸಾಕುವ। ಗೋವಿಂದ ವಿಜಯ ವಿಠ್ಠಲಂಗೆ ವಂದಿಸುವದು ಬಿಡದಿರು ॥೫॥

**ಜತೆ**

ಅಣು ರೇಣು ಪೊಟ್ಟಿಗೆ ನಡೆಸುವ ದೇವನು ।
ನಿನಗೀಯದಿಪ್ಪನೆ ವಿಜಯವಿಠ್ಠಲ ಸ್ವಾಮಿ ॥೬॥



## ಸುಳಾದಿ-೪೯

ಅತಿಥಿ ಅಭ್ಯಾಗತ ಪೂಜಾ ಉತ್ತಮರಿಗೆ ಅನ್ನದಾನ ಮಾಡುವದು

**ರಾಗ- ಧ್ರುವತಾಳ**

ಉತ್ತಮರಿಗೆ ಒಂದು ತುತ್ತನ್ನ ದಾನದಿಂದ। ಇತ್ತವನ ಕುಲ ಹತ್ತು ಹತ್ತು ಒಂದು ಸ। ಮತ ಗೋತ್ರಾಖಿಳ ಹತ್ತಿ ಹೊಂದಿದವರು। ಸುತ್ತಣ ಪರಿವಾರ ಎತ್ತಲೆತ್ತ ಉಳ್ಳವರು। ಅತ್ಯಂತ ವಾದ ಪಾಪ ಮೊತ್ತದಾ ಸಕ್ತರಾಗಿ। ಮೃತ್ಯು ಲೋಕದಲ್ಲಿ ಆಪತ್ತು ಬಡುತಲಿರೆ। ಹೆತ್ತ ಜನನಿಯಂತೆ ಎತ್ತಿಕೊಂಡೊಯ್ದು ಪುನರಾ। ವರ್ತಿ ಇಲ್ಲದ ಲೋಕದತ್ತ ಸೇರಿಸುವದು। ಎತ್ತಲು ಸರಿ ಗಾಣೆ ಕ್ಷುಧಾತುರ್ಯರಾಗಿ ಬಂದ। ಸೋತ್ತಮರಿಗಿತ್ತ ಫಲ ಚಿತ್ತದಲ್ಲಿ ಎಣಿಸೆ। ಹತ್ತಾವತಾರಾ ಸಿರಿ ವಿಜಯವಿಠ್ಠಲರೇಯನ। ನಿತ್ಯ ಕರುಣ ಪಡೆದು ಸತ್ಯದಲ್ಲಿ ನಡದ ॥೧॥

**ಮಟ್ಟತಾಳ**

ಹರಿ ಸರ್ವೋತ್ತಮ ವೆಂಬೊ ಜ್ಞಾನ ಮರುತ ದೇವನ ಮತವೆಂಬೊ ಮತವ। ಹರಿ ಗುರು ಭಕುತಿ ನಿರಂತರದಲ್ಲಿ। ವಿರಕುತಿಯಾಗಿ ಚರಿಸುವ ಜ್ಞಾನಿಯರ ಸಂಗದಲ್ಲಿ। ಹರಿಕಥಾ ಶ್ರವಣ ನಿರಮಲ ಮನದಿ ಎರಗುತಲಿಪ್ಪಾ। ಚರಣೆಯ ಮಾನವನು ಧರೆಯೊಳಗವನೆ ಪರಮ ಉತ್ತಮನೊ। ಅರಿದೀ ಪರಿಯಲ್ಲಿ ವಿಜಯವಿಠ್ಠಲ ಹರಿಯಾ। ಶರಣನಾಗಲಿ ಬೇಕು ತಾರತಮ್ಯವ ತಿಳಿದು ॥೨॥

**ತ್ರಿವಿಡಿತಾಳ**

ಬಂದ ಅತಿಥಿಯನ್ನು ತನ್ನಯ ಬಾಗಿಲ। ಮುಂದೆ ಕಾಣುತ್ತಲಿವೆ ನಿಂದು ಎದಿರುಗೊಂಡು। ವಂದಿನಿ ಕರಮುಗಿದು ದ್ವಂದ್ವ ಪಾದಕ್ಕೆರಗಿ। ತಂದೆ ಆವಲ್ಲಿಂದ ದಯಮಾಡಿ ಬಂದಿರಿ ಎಂದೂ। ಒಂದೊಂದು

ಮಾತನು ನಂದಾದಿಂದಲಿ ಪೇಳಿ। ತಂದು ಪೀಠವನಿತ್ತು ಚಂದದಿಂದಲಿ ನಡು। ಮಂದಿರದೊಳಗೆ ವಸುಂಧರ ವಿಬುಧನ್ನ। ಮಂದ ಹಾಸದಲಿ ನಯದಿಂದ ಕುಳ್ಳಿರಿಸಿ ಜಲ। ದಿಂದ ಚರಣ ತೊಳದಾನಂದ ಮಯದಿಂದ। ಸಂದೇಹ ಬಿಟ್ಟು ಸೊಬಗಿಂದ ಶಿರದ ಮೇಲೆ। ಬಿಂದು ಮಾತುರ ಜಲ ಬಂಧು ಬಳಗ ಕೂಡಿ। ಕುಂದದೆ ಧರಿಸಿ ತಾ ಮಂದಿರದಲ್ಲಿ ಚಲ್ಲಿ। ಒಂದೊಂದು ಪರಿಯಲ್ಲಿ ಪೊಂದಿ ಸುಖದಲ್ಲಿರು। ಮಂದರಧರ ನಮ್ಮ ವಿಜಯವಿಠ್ಠಲ ಹರಿಯ। ಎಂದಿಗೆಂದಿಗೆ ಬಿಡದೆ ವಂದಿಸು ಮನದಲ್ಲಿ ॥೩॥

### ಅಟ್ಟತಾಳ

ಜೀವೇಶ ಒಂದೆಂಬೊ ಪೇಳುವ ಪಾಪಿಗೆ। ಶ್ರೀ ವೈಷ್ಣವೋತ್ತಮ ಕರದು ತುತ್ತನ್ನವ। ಪಾವನನಾಗುವೆನೆಂದು ಇತ್ತರೆ ಅದು। ಪಾವಕನೊಳು ಹಾಕಿದಂತೆ ಬಯಲಾಗಿ। ಯಾವತ್ತು ಪುಣ್ಯವು ನಾಶವಾಗೋದು। ಆವಾವ ಕಾಲಕ್ಕೆ ಯಳ್ಳನಿತು ಕಾಣೆ। ದೇವೇಶ ವಿಜಯವಿಠ್ಠಲ ಜಗದೊಡಿಯ ರಾ। ಜೀವ ನೇತ್ರ ಪದದಾವರೆ ಭಜಿಪಂಗೆ। ಕೋವಿದನಾಗಿ ಯಿತ್ತವಗೆ ಸರಿಗಾಣೆ ॥೪॥

### ಆದಿತಾಳ

ಅನ್ನ ಯಿತ್ತರದು ಭವನ್ನವಾಗಿ ತೋರೋದು। ಅನ್ನವೀಯದಿರೆ ಕಾನನ್ನಕ್ಕೆ ಸರಿಯನ್ನಿ। ಅನ್ನದಿಂದಲಿ ಬಂದ ಘನದುರಿತ ಹರ। ಅನ್ನದಿಂದಲಿ ಸರ್ವ ಪುಣ್ಯ ಫಲಿಸುವದು। ಅನ್ನ ಯಿತ್ತದನ ಕೀರ್ತಿ ಉನ್ನತವಾಗಿ ತ್ರಿಭು। ವನದೊಳಗೆ ತುಂಬಿ ಚನ್ನಾಗಿ ಪೊಳೆವದಯ್ಯಾ। ಅನ್ನ ದಾನಕ್ಕಿಂತ ಇನ್ನು ಮಿಗಿಲೆ ಇಲ್ಲಾ। ಹೊನ್ನು ಹಣಾದಿ ಕೊಡಲು ಗಣ್ಯ ಅನ್ನದಾನಕ್ಕೆ। ಅನಂತಕಾಲ ಮಖವನ್ನೆ ಮಾಡಲು ವಿಪ್ರ। ಗುಣಿಸಿದುದಕ್ಕೆ ಸರಿಯನ್ನಬಹುದೋ ತಿಳಿದು। ಅನಂತ ಮೂರುತಿ ವಿಜಯವಿಠ್ಠಲರೇಯ। ತನ್ನವ ನಿವನೆಂದು ಮನ್ನಿಸಿ ಸಲಹುವ ॥೫॥

### ಜತೆ

ಅತಿಥಿ ಅಭ್ಯಾಗತಿಯ ಸಂತೋಷ ಬಡಿಸಲು ।
ಸತತ ಪೊಳಿವ ವಿಜಯವಿಠ್ಠಲ ಮನಸಿನೊಳು ॥೬॥

❖ ❖ ❖

## ಸುಳಾದಿ-೫೦

ಅಹಂಕಾರ ಖಂಡನ

### ರಾಗ-ಕೇದಾರಗೌಳ ಧ್ರುವತಾಳ

ಏನು ಮಾಡಲಿ ಹರಿ ಹೀನ ಮನಸು ನಿತ್ಯ। ಗಾಣದೆತ್ತಿನಂತೆ ಸುತ್ತುತಿದಕೊ। ಭಾನು ಉದಯಾಸ್ತಮಾನ ಪರಿಯಂತ। ನಾನಾ ಕಾಲೋಚನೆಧೇನಿಸುತ್ತ। ಮಾನಾಭಿಮಾನದ ಭೀತಿಗೆ ಅಳುಕದೆ। ಕಾನನ ಕಪಿಯಂತೆ ಚರಿಸುತಲಿ। ದೀನ ಜನರ ಸ್ತೋತ್ರವನು ಮಾಡೆ ಒಂದು। ಗೇಣುದರಲ್ಲದೆ ಅಧಿಕವಿಲ್ಲಾ। ಕಾಣಿಸುವ ದರ್ಪಣ ಪಾಣಿಯೊಳಗಿರಲು। ಗೋಣೆತ್ತಿ ಗೋಡಿಗೆ ಹಲ್ಲು ತೆರದಂತೆ। ನೀನೆ ಬಿಡದೆ ಎನ್ನಾಧೀನವಾಗಿರಲಿಕ್ಕೆ। ಯೋನಿ ಜರಿಗೆ ಕರವನು ನೀಡುವೆನಯ್ಯಾ। ಸ್ಥಾಣುವೆ ನಾಮ ನಮ್ಮ ವಿಜಯ ವಿಠ್ಠಲ ನಿನ್ನ। ಧ್ಯಾನ ಧ್ಯಾನ ಮಾಡುತ್ತ ಏನೇನು ಬಯಸೋಧು ॥೧॥

### ಮಟ್ಟತಾಳ

ಅಹಂಕಾರ ವಳಿಯುದೊ ಅಹಂಕಾರ ವಳಿಯುದೊ। ಅಹಂಕಾರವಳಿದರೆ ದೇಹಕ್ಕೆ ನಿರ್ಮಲವು। ಅಹಂಕಾರದಿಂದಲ್ಲಿ ಬಾಹ ಫಲಂಗಳು। ಬಹು ದೂರವಾಗಿ ಸಹಗತಿಗೊದಗವು। ಅಹ ಸಂವತ್ಸರನೆ ವಿಜಯ ವಿಠ್ಠಲ ಇಂಥ। ದ್ರೋಹಿಗೆ ಇನ್ನಾವ ಸಹಾಯ ಸಂಪತ್ತು ॥೨॥

## ತ್ರಿವಿಡಿತಾಳ

ಇಳಿಯ ಕಳೆದು ಅದಕೆ ಗುಡುಸು ಕೊಟ್ಟರೆ ನಾನು। ಇಳಿ (ಯೀ)ವೆನೋ ನರಕಕ್ಕೆ ಬಲು ದೂರಾಗುವೆನಯ್ಯಾ। ಇಳಿಯೊಳು ಬಂದು ಪುಟ್ಟುವ ಕರ್ಮ ಬಾರದು। ಇಳಿಯ ವಲ್ಲಭಕೇಳು ಎನ್ನ ಮಾತಾ। ಇಳಿಧರ ಮಾಡದೆ ಇನ ಶಶಿ ಉಳ್ಳನಕ। ಇಳಿಯ ಕಳೆದು ಎನ್ನ ಮನದ ಬಯಕೆ। ಇಳಿಜಾರ ಮಾಡದಲೆ ತತ್ವವಿಜಯ ವಿಠ್ಠಲ। ಇಳಿಯ ತರುವಾಯ ನೀನೆಂಬೊದಲ್ಲವೆ ರಂಗ ॥೩॥

## ಅಟ್ಟತಾಳ

ಶಿಲಿಯೊಳು ನಿರ್ಮಳವಾದ ಜಲದಾ। ಜಲೆ ಪುಟ್ಟಿದಂತೆ ಚನ್ನಾಗಿ ಪುಟ್ಟಿದೆ ಎನ್ನ। ಶಿಲೆಯಂಬೊ ಹೃದಯದೊಳಗೆ ನಿನ್ನ ದಯದಿಂದ। ಥಳ ಥಳಿಸುವ ವಿಮಲನಾಮ ಸುಧೆ ಎಂಬ। ಜಲೆ ಉದಭವಿಸಿತ್ತು ಆನಂದಮಯವಾಗಿ। ಇಳೆಯೊಳು ಪ್ರವಾಹಿನಿಯಾಗಿ ನಿನ್ನ ನಿ। ಶ್ಚಲ ಭಕ್ತರಂತರಂಗವೆಂಬ ಸಾಗರ ಮಿಳಿತ ವಾ। ಗಲಿ ಪ್ರಕಾಶಿತದಿಂದಲ್ಲಿ। ಲಲಿತ ಮೂರುತಿ ನಮ್ಮ ವಿಜಯ ವಿಠಲರೇಯ। ಶಿಲೆಯ ಪಾವನ ಗೈಸಿದ ಪುಣ್ಯಶೀಲಾ ॥೪॥

## ಆದಿತಾಳ

ಪುರದೊಳು ನಾನಾಕ ಕುಲದವರಿದ್ದರು। ಇರಲಿ ಎನಗವರ ಬಳಿವಿಡಿದು ಮನಸು। ಎರಗದಂತೆ ಮಾಡುವದು ವಾಲಯದಲ್ಲಿ ಉ। ದ್ಧರಿಸೋದು ಉತ್ತಮರ ಮನಿಗಳಿಗೆ ಪೋಗಿ। ಪರಮ ಭಕುತಿಯಿಂದ ಶರಣೆಂದು ಬಾಗಿ ತೀ। ವರದಿಂದ ಗತಿಗೆ ಅಂಕುರವಾಗುವಂತೆ ಎನಗೆ। ಸ್ಥಿರವಾಗಲಿ ಮನಸು ನಿನ್ನ ದಯದಿಂದ ಜನೇ। ಶ್ವರ ನಾಮ ವಿಜಯವಿಠ್ಠಲ ಎನ್ನಾಳುವ ಧೊರಿಯೆ ॥೫॥

### ಜತೆ

ನತಜನ ಹೃದಂಬುಕುಮುದ ವನಧಿ ಬಾಂಧವ ।
ಕೃತಗಾಮ ವಿಜಯ ವಿಠ್ಠಲ ಸರ್ವಾಂತರ್ಯಾಮಿ ॥೬॥

❖ ❖ ❖

## ಸುಳಾದಿ-೫೧

ಅಹಂಕಾರ ಮಮಕಾರ ತ್ಯಾಗಪೂರ್ವಕ, ದೇಹ ಅನಿತ್ಯವೆಂದು ತಿಳಿದು ಸಾಧನ.

### ರಾಗ-ಕಾಂಬೋದಿ ಧ್ರುವತಾಳ

ಬಿಡಿ ದೇಹದಭಿಮಾನ ಪಿಡಿಯಾದಿರು ಸಯವೆಂದು। ಒಡವೆ ವಸ್ತುವನ್ನ ಪಡೆದವರು। ಮಡದಿ ಸುತರಾದಿಗಳು ಒಡೆತನದ ಸೊಬುಗೆ ಎ। ನ್ನೊಡ ನೊಡನೆ ಸಯವೆಂದು ನುಡಿಯದಿರು। ಗಡೆ ತೆಗಿಯಲು ಸಂಗಡಲೆ ನುಡಿಯಲ್ಲಿ। ಎಡೆ ಎಡಿಗೆ ಹಿಗ್ಗಿ ಮುಗ್ಗಿ ಪಡಗಾಗದಿರು। ಅಡಿ ಒಂದರ್ಧರೊಳಗೆ ಕಡೆ ಇಲ್ಲದ ದುಃಖ। ಬಿಡುವದಕ್ಕೆ ಯಳ್ಳಿನಿತು ಕಡಿಮೆ ಇಲ್ಲಾ। ಸಡಲಿ ಪೋಗದ ಮುನ್ನೆ ಕ್ಷಮೆ ವಿಜಯ ವಿಠ್ಠಲನ। ಒಡೆಯನ ಕರುಣ ಪಡೆದು ಘಡೆ ಸಹಿತ ಸೇರೋ ॥೧॥

### ಮಟ್ಟತಾಳ

ಉಳ್ಳಾಗಲು ನಿನ್ನ ಉಳ್ಳೆಪ್ಪನೆಂದು ಎಲ್ಲ ಬಳಗ ಬಂಧು। ಸೊಲ್ಲು ಸೊಲ್ಲಿಗೆ ಪಾಡಿ ಬೆಲ್ಲಕ್ಕೆ ನೊಣಗಳು। ವಲ್ಲಡಿಯದಂತೆ ಒಳ್ಳೇತನದಲ್ಲಿ। ಉಲ್ಲಾಸರಾಗಿ ಗಲಭೆ ಇಂದಲಿ। ಚಲ್ಲವರಿದಿಪ್ಪರು ಮೆಲ್ಲಮೆಲ್ಲನೆ ಸಿರಿದೇವಿ ವಲ್ಲಭ ವಿಜಯ ವಿಠ್ಠಲ ದಯದಪ್ಪೆ। ಎಲ್ಲ ಮಾನವರು ನಿಲ್ಲದೆ ಪೋಗುವರು ॥೨॥

## ತ್ರಿವಿಡಿತಾಳ

ಜರೆ ನರೆ ಅರೆ ಮರವು ಹರಿಯ ತಪ್ಪಿಸಿ ಉ। ಸರು ಕೊರಳಲ್ಲಿ ಸಿಕ್ಕಿ ತಿರುಗದೆ ಉಬ್ಬಸ ಬರೆ। ಮರುವಾಗಿ ಕರ್ನಕಂಗಳ ರೋತಿಯ ಸೋರೆ। ಸಿರ ನಡುಗಿ ಪರರ ಕರವ ಪಿಡಿದು ಅಡಿಗಿ। ಗುರು ಗುರು ಗುಟ್ಟುತ ಗಲ್ಲಸುಕ್ಕಿ ಹರಳ್ಹೋದ ಗೆಜ್ಜೆ ಬಾಯದೆರದಂತೆ। ತೆರೆದು ಅಲ್ಪರಿಗೆ ಚಾಲ್ವರಿದು ಮು। ಸರಿ ಎಂಜಲೆನ್ನದೆ ಕರಣಿಯೆಲೆಂದು ಉ। ದರ ಮೊರಿವಿಯಲ್ಲದೆ ಸ್ಮರಣೆ ತಪ್ಪಲು ಯಮನ। ಮುರ ಕೆಳದೊಯ್ಯ ಬಹು ಶಿರಸ ವಿಜಯ ವಿಠಲನ್ನ। ಸ್ಮರಣೆ ಬಾರದು ಕಾಣೊ ॥೩॥

## ಅಟ್ಟತಾಳ

ತನುವೆ ಬೀಳಲು ವುಳ್ಳ ತನು ಸಂಬಂಧಿಗಳೆಲ್ಲ। ಎನಗೇನು ತನಗೇನು ಗತಿ ಎನುತಲಿ। ಧನವಾರಿಗೆ ನಿನ್ನ ಮನಿಯಾರಿಗೆ ಎಂದು ಮಣಿದು ಧೊಪ್ಪನೆ ಬಿದ್ದು ಹೊರಳುವರಾ। ಕ್ಷಣ ವಿರಗೊಡದೆ ಹೊತ್ತನ್ನು ಹೋಯಿತೆಂದು। ಪೆಣನೆಂದು ತೆಗಿದು ಬೀಡನು ಬಿಡಿಸುವರು। ಮನಿಯೊಳಗಿದ್ದ ಕಾಷ್ಟೇನುವಾದರೆ ಒಂದು ಹಣವಾದರೂ ಇವನ ಕೂಡ ಹಾಕರು। ಭಣಗು ಸಂಸಾರವು ಕ್ಷಣ ಭಂಗುರ ಕಾಣೊ। ಜನುಮ ಮೃತ್ಯು ಜರಾತಿಗ ವಿಜಯ ವಿಠ್ಠಲ। ಮನದೆಗಿಯೆ ನಿನಗಿನಿತು ಸಾಧನವಿಲ್ಲಾ ॥೪॥

## ಆದಿತಾಳ

ಕಾಲು ಕೈ ಜವಗುಂದಿ। ಕಾಲವ ತಿಳಿಂಯದೆಲೆ। ಕಾಲಕರ್ಮವೊದಗಲು। ಕಾಲನ ದೂತರು ಕೋಪದಲ್ಲಿ। ಕಾಲು ಕೈ ಬಿಗಿದು ಕಟ್ಟಿ। ಕಾಲು ಕಾಲಿಲೆ ಒದ್ದು ನೂ। ಕಲು ಬೇಡ ಬೇಕೆಂದು। ಕಾಲಕಡ್ಡ ಬರುವರಿಲ್ಲಾ। ಕಾಲ ಪ್ರಿಯ ಪುಷ್ಪಹಾಸ್ಯ ವಿಜಯವಿ। ಠ್ಠಲನ್ನ। ಕಾಲ ಕಾಲಕೆ ನೆನದು ಪಂ। ಕಾಯನಿಲ್ಲದೆ ದಾಟು ॥೫॥

**ಜತೆ**

ಗರ್ಭೋತ್ಪತ್ತ್ಯಾರಭ್ಯ ಮರಣ ಪರ್ಯಂತ ।
ಭೂರ್ಭುವ ಸ್ವಸ್ತಿರೆ ವಿಜಯವಿಠ್ಠಲಗೆ ನಮಿಸೋ ॥೬॥

❖ ❖ ❖

## ಸುಳಾದಿ-೫೨

ಜನರ ಆಭಾಸ ತಾಳ್ಮೆ, ಪೂರ್ವಿಜರ ಕವನ ನಿಂದಾವರ್ಜ, ಶ್ರೀಪಾದ ರತಿ

### ರಾಗ- ಭೈರವಿ ಧ್ರುವತಾಳ

ಇಂದೆ ಆಭಾಸವಾಗಲಿ ನಾಳೆ ಆಭಾಸವಾಗಲಿ। ಇಂದೆ ನಾಳೆ ಎಂಬೊ ಚಿಂತೆ ಯಾತಕೆ। ಒಂದಕ್ಕನಂತವಾಗಿ ಕಾಲ ಕ್ಷಣದಲ್ಲಿ। ಮುಂದೆ ಅಭಾಸವಾಗಲಿ। ಇಂದೇ ಪೊಂದಿದವರೆಲ್ಲ ತೊಲ ತೊಲಗಿ ಪೋಗಲಿ। ವಂದಿಸೂವ ಜನ ನಿಂದೆಯು ಮಾಡಲಿ। ಬಂಧು ಬಳಗವು ತೊರೆದುಬಿಡಲಿ। ಇಂದೇ ಅಭಾಸವಾಗಲಿ। ನಿಂದಲ್ಲಿ ಕುಳಿತಲ್ಲಿ ಎಲ್ಲೆಲ್ಲಿ ಇದ್ದರು। ಮಂದಿಗಳೆಲ್ಲ ತಮಗೆ ಸರಿ ಸರಿ। ಬಂದಂತೆ ಪೇಳಲಿ ಕೇಳಲಿ ಕಿವಿಗೊಟ್ಟು। ಇಂದೆ ಆಭಾಸವಾಗಲಿ। ಕುಂದುಗಳಾರಿಗೆ ಕೊರತೆಗಳಾರಿಗೆ। ನಂದವಾರಿಗೆ ಆನಂದವಾರಿಗೆ ಸಂದೇಹವಿಲ್ಲ ಸುಖ। ಸಂದೋಹ ಎನಗುಂಟು ಇಂದಿರಾಪತಿ ಒಲಿದದ್ದೆ ವಲ್ಲೆ। ನೆಂದರೆ ಬಿಡದು ಬರಿದೆ ವ್ಯಾಕುಲ ಮನಕೆ। ತಂದು ಕೊಂಡದರಿಂದ ಅಂಥ ಜ್ಞಾನವಲ್ಲದೆ। ಇಂದೆ ಆಭಾಸವಾಗಲಿ। ಗಂಧ ಗಂಧವೆಲ್ಲ ಸಮವಾಗಿ ಇಪ್ಪೋದು। ಎಂದೆಂದಿಗೆ ಪ್ರಾರಬ್ಧ ತಪ್ಪದು। ಹಂದಿ ಹಸ್ತಿಯ ಜನುಮ ಬರಲಿ ಬರಲಿ। ಮಂದಿಗ್ಯಾತಕೆ ಅವರಿವರ ಚಿಂತೆ ಅರದವಾಗಿ ಶ್ರೀಹರಿಯ ಕೊಟ್ಟದು ಉಂಡು। ಚಂದ ಚಂದ ಕರ್ಮ ಮಾಡಬಾರದೆ। ಇಂದೆ ಆಭಾಸವಾಗಲಿ। ಶಿಂಧು ಶಯನ ಶಿಂಧು ಜನಕ ಕರುಣಾ ಶಿಂಧುರಂಗನ ಪಾದ। ದ್ವಂದ್ವದ್ವಾರವಿಂದ ಇಂದಿರೆ

ಕಾಣಳು। ಮಂದಮತಿ ನರನೆಂತು ಕಾಂಬುವಾ। ಎಂದೆಂಬೊ ಸಿದ್ಧವೆ ಪ್ರಸಿದ್ಧ। ಮಂದರಿಗೆ ತಕ್ಕಮತಿ ಕೊಡುವನು। ಚಂದಿರ ವದನ ನಮ್ಮ ವಿಜಯವಿಠ್ಠಲನ್ನ। ಪೊಂದಿ ಕೊಂಡಾಡುವಂಗೆ ಏನಾದರೂ ವಪ್ಪೋ॥೧॥

## ಮಟ್ಟತಾಳ

ವರುಷ ಒಂದೆರಡು ಹನ್ನೆರಡು ಎಂದು। ಪರಿಮಿತವನೆ ಕಟ್ಟಿ ಅನ್ಯರ ಮುಂದುಚ್ಚರಿಸುವ ಬಗೆ ಏನು। ಅರಘಳಿಗೆಯೊಳಗೆ ಮಾನವಗಾಗದ। ಪರಿಪರಿ ಲಪಹಾಸ ಬಂದೊದಗಲಿ ಇಂದೆ ಸ್ವಿ ಕರ ಮಾಡುವನಾರು ವಲ್ಲೆನೆಂಬುವನಾರು। ಪರಮ ಸೌಖ್ಯವೆ ಸರಿ। ಪ್ರತಿಕೂಲ ಎನಗಲ್ಲ। ಶರಣರ ಪರಿಪಾಲಾ ವಿಜಯವಿಠ್ಠಲರೇಯನ। ಚರಣ ನೆನಹು ಒಂದೆ ಮನದೊಳಿದ್ದರೆ ಸಾಕು॥೨॥

## ತ್ರಿವಿಡಿತಾಳ

ಮೊದಲೆ ಫಣಿಯಲಿ ಬೊಮ್ಮ ಬರದು ಇದ್ದ ಬರಹ। ಉದರಿಸಿಕೊಂಡರೆ ಪೋಗುವದೆ। ಕುದಿದು ವ್ಯರ್ಥ ಪರರ ಅತಿಶಯವನೆ ಕಂಡು। ಎದೆ ಬಾಯಿ ಒಣಗಿ ದುಃಶ್ಚಿತ್ತ ವೃತ್ತಿಯಲಿ। ಪದೋ ಪದಿಗೆ ನಿತ್ಯಯೋಚನೆ ಮಾಡಿ ಇಲ್ಲದ ಮಾತಿನಿಂದಲಿ ಭ್ರಮಣಗೆಟ್ಟು। ಮುದದಿಂದ ನಮಗಿದ್ದ ದಿನವೆ ಎಣಿಸಿಕೊಳ್ಳದೆ। ವಿಧಿಯು ಬೆನ್ನಿಲಿ ಕಾದುದು ನೊಡದೆ। ಉದರದೊಳಗೆ ಬಿದ್ದ ಅನ್ನ ಸಾರ್ಥಕ ಮಾ। ಡದೆ ಕೆಡುವರ್‍ಯೆ ತಿಳಿಯದಲೆ। ನದಿಯ ಡೊಂಕನೆ ನೋಡಿ ಪಾತ್ರಿಯೊಳಗೆಯಿದ್ದ। ಉದಕ ವುಲ್ಲಂಘಿಸಿ ಬರುವನಂತೆ। ಪದಗಳು ಡೊಂಕಾಗಿ ತೊರದೋದಿ ಪರೆ। ಅದರ ಅನ್ವಯವನ್ನು ತೋರದಿರಲು ಇದು ಎಲ್ಲಿ ಇಲ್ಲೆಂದು ಕಂಡಂತೆ ಮಾತು ಪೇ। ಳಿದವಂಗೆ ಏನೆಂಬೆನಯ್ಯಾ ಸತತ। ಪದುಮ ನಾಭನು ವೊಲಿದು ಪಿರಿಯರಿಂದಲಿ ಅಂದು। ಪದವ ಪೇಳಿಸಿದ್ದು ಸತ್ಯವೆಂದು। ಹೃದಯದಲ್ಲಿ ತಿಳಿದು ಅವರ ಕಿಂಕರನಾಗಿ। ವಿಧಿ ನಿಷೇಧ ವಾಕ್ಯ ನುಡಿದದ್ದೆಲ್ಲ। ಪದವಿಗೆ

ಪಾವಟಿಗೆ ಎನಗಾಗಲಿ ಅವಗಾ। ಗದೆ ಪೋದರೆ ಇತ್ತ ಯತ್ನವೇನು। ಕುದರಿಯ ಮೇಲೆ ಕೋಪದಿ ಪೋಗಿ ರಾಸಭವೇ। ರಿದ ತೆರದಿ ಕಾಣೊ ದುರುಳರಿಗೆ। ನಿಧಿಯ ಮೇಲೆ ಮುನಿದು ತಿಪ್ಪಿ ಮೇಲಿನ ಬೂದಿ। ಸದನದೊಳಗೆ ತಂದು ಹಾಕಿದಂತೆ। ಇದರಿಂದೇನು ಫಲವಾಗುವದೋ ತಮ್ಮ। ವದನ ಬರಿದಲ್ಲದೆ ಲಾಭವಿಲ್ಲಾ। ಮದನನಯ್ಯನೆ ನಮ್ಮ ವಿಜಯವಿಠ್ಠಲರೇಯನ। ಪದವ ಭಜಿಸಿ ಹದುಳ ಪಡಕೊಂಡವನೆ ಧನ್ಯ॥೩॥

## ಅಟ್ಟತಾಳ

ಜನುಮಾಂತರದಲ್ಲಿ ಮಾಡಿದ ಬಗೆ ಕರ್ಮ। ಉಣಿಸದೆ ಬಿಡನಯ್ಯಾ ದೇವ ದೇವೋತ್ತಮ। ದಿನ ದಿನದಲಿ ಜೀವ ಆವಾವದಾದರು। ಉಣಬೇಕು ಉಂಡು ತೀರಿಸದಲೆ ತಪ್ಪದು। ಗುಣವಾಗಲಿ ಆಗದೆ ಪೋಗಲಿ ಬಹು। ಜನರಿಗೆ ವಿರುದ್ಧವಾಗಿ ತೋರಲಿ ನಿತ್ಯ। ತನು ಮನ ವಾಕ್ಯದಿಂದಲಿ ಬಂದವೆಲ್ಲ। ಅನುಭವಿಸಬೇಕು ಆರಗೊಡವಿ ಯಾಕೆ। ಮನುಜರು ಭಗವಂತ ಸ್ವಾತಂತ್ರ ಜ್ಞಾನವ। ಎಣಿಸದೆ ಈ ಪರಿ ಉತ್ತರ ನುಡಿವರು। ದನುಜ ಮರ್ದನ ಸಿರಿ ವಿಜಯ ವಿಠ್ಠಲರೇಯನು। ಘನವಾಗಿ ಪಾಲಿಸೆ ನರ ಮುನಿದರೇನು ॥೪॥

## ಆದಿತಾಳ

ಆರತಿಶಯವಾಗಿ ಬದುಕಿದರೇನವೆ। ಆರು ದುರ್ಜನರಾಗಿ ತಿರುಗಿ ದರೇನವಗೆ। ಪಾರಮಾರ್ಥಿಕನಾಗಿ ಇರಬಾರದೆಂದೆಡೆ। ಕ್ರೂರರ ಸ್ವಭಾವ ತೊಲಗುವದೇನೊ ವಿ। ಸ್ತಾರವಾಗಿ ಸಜ್ಜನರಲ್ಲಿ ಇದ್ದರು। ದೂರದೆ ಬಿಡನಯ್ಯಾ ಬುದ್ಧಿ ಪಲ್ಲಟನಾಗಿ। ಶಾರೀರದೊಳು ಸಮಗ್ರ ಕುಹಕ ತನದಿಂದ। ಧಾರುಣಿಯಲ್ಲಿ ತಿರುಗಿ ಹೊತ್ತು ಪೋಗಾಡುವ। ಪಾರು ಮುಟ್ಟನು ಕಾಣೊ ಮುಣಗುವ ಭವವೆಂಬೊ। ವಾರಿಧಿಯೊಳು ಬಿದ್ದು ಭೀತಿ ಬಡುತಲಿ। ಬೇರರಸಿ। ಕಿತ್ತಿ ಭವವ ಕಳೆವ ದೇವ। ಭೂ ರಮಣ ವಿಜಯವಿಠ್ಠಲ ರೇಯನ। ಸೇರಿಕೊಂಡು ಸಾಧನೆ ಮಾಡದೆ ಬರಿದಾಹ ॥೫॥

**ಜತೆ**

ಆಭಾಸವಾಗಲಿ ಅಡಿಗಡಿಗೆ ಜನರಿಂದ ।
ಲಾಭವೆ ಏನಗದು ವಿಜಯವಿಠ್ಠಲನಿಂದ ॥೬॥

❖ ❖ ❖

## ಸುಳಾದಿ–೫೩

ನೀಚ ಗುಣಗಳನ್ನು ಬಿಟ್ಟು ಉತ್ತಮ ಗುಣ ಸ್ವೀಕರಿಸಿ ಉತ್ತುಮ ವರ್ತನವೆ ಹಬ್ಬ, ಮಂಗಳಕರವಾದ ಹರಿ ಭಕುತಿ. (ವೈರಾಗ್ಯ)

**ರಾಗ– ಕಾಂಬೋದಿ ಧ್ರುವತಾಳ**

ಹಬ್ಬಂಗಳಿವೆ ಕೇಳಿ ಊರ್ಬಿಯೊಳಗೆ ವೈ। ದರ್ಭರಮಣ ಕರುಣಾಬ್ಧಿವೊಲಿದ ಬಳಿಕ। ಒಬ್ಬರ ಕಾಡಿ ಬೇಡಿ ಒಬ್ಬರ ಹಬ್ಬ ಮಾಡಿದರಿಂದ। ಉಬ್ಬು ತೀರದು ಕಾಣೊ ಅರ್ಬುದ ಜನನಕ್ಕೆ। ಅಬ್ಬಿದಾವರ್ತ ಧಾನ್ಯ ರುಬ್ಬಿ ಗಂಜಿಯಕಾಸಿ। ಹಬ್ಬಿದ ಸುಖಮಾನ ವಬ್ಬಿಗೆ ಸತಿ–ಪತಿ। ಇಬ್ಬರಾನಂದದಲ್ಲಿ ಹೆಬ್ಬಟ್ಟಿನಲ್ಲಿ ಸವಿದು। ಸಭ್ಯವಾಗಿಪ್ಪದು ಹಬ್ಬವೆ ಬಲುಹಬ್ಬ। ನಿರ್ಭಯವಾದ ರತ್ನ ಗರ್ಭದಲ್ಲಿ ಕುಟಿರ। ಗುಬ್ಬಿ ಗೂಡಿನಷ್ಟು ಗರ್ಭವಾಸವೆ ರಚಿಸಿ। ಹಬ್ಬಿಗಿಕ್ಕದೆ ಏನು ನಿರ್ಬಂಧನವಿಲ್ಲದೆ। ಲಭ್ಯವಾಗಿಪ್ಪ ಗರ್ಭದ ಸುಖಿಗಳವರು। ಕರ್ಬುರನಂತೆ ತಿಂದು ಕೊಬ್ಬಿ ತಿರುಗುವಂಗೆ। ದುರ್ಭಾಗ್ಯವಲ್ಲದೆ ಹಬ್ಬವೆನಿಸುವದೆ। ಕಬ್ಬು ಬಿಲ್ಲಿನಯ್ಯ ವಿಜಯ ವಿಠಲರೇಯ। ದರ್ಭೆ ಏರಿಸಲು ಹಿಬ್ಬರ ಕರವ ವಿಡಿವಾ ॥೧॥

**ಮಟ್ಟತಾಳ**

ಕಾಮ ಕ್ರೋಧಂಗಳು ಬಿಡುವದೆ ಬಲುಹಬ್ಬ। ನೇಮ ನಿತ್ಯವನ್ನೆ ಮಾಡುವದೇ ಹಬ್ಬ। ತಾಮಸ ಜನರುಗಳ ಬಿಡುವದೆ ಮಹಹಬ್ಬ। ಕಾಮನ

ಉಪಹತಿಗೆ ಅಂಜುವದೇ ಹಬ್ಬ। ಭೂಮಿಯೊಳಗೆ ಜ್ಞಾನಿಯಾಗುವದೆ ಹಬ್ಬ ಸ್ವಾಮಿ ಭೃತ್ಯ ನ್ಯಾಯ ತಿಳಿಯುವದೆ ಮಹಹಬ್ಬ। ಶ್ರೀಮಾರುತಿ ಮತವ ಹಾರೈಪದೇ ಹಬ್ಬ। ಯಾಮ ಯಾಮಕ್ಕೆ ಹರಿಯನಾಮ ನೆನಿವದೆ ಹಬ್ಬ। ವ್ಯೋಮ ಗಂಗೆಯ ಜನಕ ವಿಜಯ ವಿಠ್ಠಲಹರಿಯ। ಧಾಮವ ಬಯಸುವದೆ ಧರೆಯೊಳು ಮಹಾಹಬ್ಬ ॥೨॥

### ತ್ರಿವಿಡಿತಾಳ

ಬಂದ ದುರಿತಗಳ ಪೋಗಾಡುವದೇ ಹಬ್ಬ। ಮಂದಾಕಿನಿಯಲ್ಲಿ ಮಜ್ಜನವೆ ಹಬ್ಬ। ನಿಂದ್ಯಕಾರರ ನಿತ್ಯ ನಿಂದೆ ಮಾಳ್ಪುದೆ ಹಬ್ಬ। ವಂದಿಸಿ ಗುರುಗಳಿಗೆ ಎರಗುವದೇ ಹಬ್ಬ। ಮುಂದೆ ಪುಟ್ಟುವ ಜನನ ನೀಗಿಕೊಂಬುದೆ ಹಬ್ಬ। ಬಂಧಾನವಾಗದ ಯೋಚನೆ ಬಲುಹಬ್ಬ। ತಂದೆತಾಯಿಗಳಿಗೆ ಅನುಕೂಲವೆ ಹಬ್ಬ। ಅಂದರೆ ನಗುತ ಸಂತೋಷವಾಹದೆ ಹಬ್ಬ। ಕುಂದು ಸಜ್ಜನರಿಗೆ ನುಡಿಯದಿಪ್ಪದೆ ಹಬ್ಬ। ಬಿಂದು ಮಾತುರ ಭೋಗ ಬಯಸದಿಪ್ಪದೆ ಹಬ್ಬ। ಬಂದ ಅತಿಥಿಗಳ ಪೂಜಿಸುವದೇ ಹಬ್ಬ। ಮಂದಿರದಲ್ಲಿ ಕಲಹವಿಲ್ಲದ್ದೆ ಮಹಾಹಬ್ಬ। ಇಂದು ನಾಳಿಗೆ ಎಂಬೊ ಚಿಂತೆ ಬಿಡುವದೆ ಹಬ್ಬ। ಸಂದಣೆ ತೊರೆದು ಏಕಾಂತ ವಾಹದೆ ಹಬ್ಬ। ನಿಂದಿದ್ದಖಳರೊಳು ನೆರೆಯದಿಪ್ಪದೆಹಬ್ಬ। ನಿಂದೆ ಬಾರದಂತೆ ಬಾಳುವದೆ ಹಬ್ಬ। ಇಂದ್ರರ್ಕವುಳ್ಳನಕ ವಿಜಯ ವಿಠ್ಠಲರೇಯನ। ಒಂದೆ ಭಕುತಿಯಲಿ ಭಜಿಪದೆ ಮಹಾಹಬ್ಬ ॥೩॥

### ಅಟ್ಟತಾಳ

ಋಣರೂಪವಾಗದ ಸಂಸಾರವೆ ಹಬ್ಬ। ಗುಣವಂತನಾಗಿ ಸಂಚರಿಸುವದೇ ಹಬ್ಬ। ಕನಸೀಲಿ ಹಣವನ್ನು ಬಯಸದಿಪ್ಪದೆ ಹಬ್ಬ। ಮನವಾಚ ಕಾಯಕ ಬಡತನವೆ ಹಬ್ಬ। ವನಜನಾಭನ ನೋಡಿ ಪಾಡುವದೇ ಹಬ್ಬ। ದಿನ ಪ್ರತಿದಿನ ಸತ್ಕರ್ಮಾಚರಣೆ ಹಬ್ಬ। ಮಣಿ

ಕರ್ಣಿಕೆಯಲ್ಲಿ ದೇಹತ್ಯಾಗವೆ ಹಬ್ಬ। ಮನೆ ನೆರೆಹೊರೆ ನೋಡಿ ಬಳಲದಿಪ್ಪದೆ ಹಬ್ಬ। ಅನಿಮಿಷ ಜಾಗರ ಹರಿವಾಸರವೆ ಹಬ್ಬ। ತನುವಿಗೆ ವ್ಯಾಧೆ ಬಾರದ್ದೊಂದೆ ಮಹಾಹಬ್ಬ। ಚಿನುಮಯ ಮೂರುತಿ ವಿಜಯ ವಿಠ್ಠಲರೇಯನ। ಮನಸಿನೊಳನುದಿನ ಈಕ್ಷಿಸುವದೇ ಹಬ್ಬ॥೪॥

**ಆದಿತಾಳ**

ಕಾಲನ ಬಾಧಿಗೆ ಸಿಲುಕದಿಪ್ಪದೆ ಹಬ್ಬ। ಕಾಲ ಕಾಲಕೆ ತೀರ್ಥಯಾತ್ರೆ ಮಾಳ್ಪದೆಹಬ್ಬ। ಕೇಳುವ ಹರಿಕಥಾ ಶ್ರವಣವೆ ದೊಡ್ಡಹಬ್ಬ। ನಾಲಿಗಿಂದಲಿ ಹರಿಯ ಸ್ತೋತ್ರ ಮಾಳ್ಪದೆ ಹಬ್ಬ। ಆಳಾಗಿ ಒಬ್ಬನಲ್ಲಿ ವಶವಾಗದ್ದೊಂದು ಹಬ್ಬ। ಹಾಳು ಹರಟೆ ಬಿಟ್ಟು ಹೊತ್ತು ಗಳಿಯುವದೆ ಹಬ್ಬ। ಶ್ರೀಲೋಲ ಪರನೆಂದು ಕೂಗ್ಯಾಡುವದೆ ಹಬ್ಬ। ವಾಲಯ ಗಯದಲ್ಲಿ ಕುಲ ಪವಿತ್ರವೆ ಹಬ್ಬ। ಭಾಳ ಲಿಪಿಗೆ ನೋಯ ಆಡದಿಪ್ಪದೆ ಹಬ್ಬ। ವೇಳ್ಯಗೆ ದೊರೆತದು ಭುಂಜಿಸುವದೆ ಹಬ್ಬ। ಪಾಲಾಬ್ಧಿ ಶಾಯಿ ನಮ್ಮ ವಿಜಯ ವಿಠಲರೇಯನ। ಊಳಿಗದವನಾಗಿ ವಾಲ್ಗೈಸುವದೆ ಹಬ್ಬ ॥೫॥

**ಜತೆ**

ದಂಪತಿಗಳು ಏಕವಾಗಿಪ್ಪುದೆ ಹಬ್ಬ ।
ಶಂಪದಂತೆ ವಿಜಯ ವಿಠ್ಠಲ ಪೊಳೆವದೆ ಹಬ್ಬ ॥೫॥



## ಸುಳಾದಿ-೫೪

ಜಡವಾದ ಒಡವೆಗಳಲ್ಲಿ ವೈರಾಗ್ಯ ತಾಳಿ ಉತ್ತಮಗುಣವಾದ
ಗುಣಾತಿಶಯವುಳ್ಳ ಒಡವೆ ಇಡುವದು.

**ರಾಗ- ಕಲ್ಯಾಣ ಧ್ರುವತಾಳ**

ಒಡಿವೆಗಳಿಡುವದು ಬಿಡದೆ ಪತಿ ಭಕುತಿ। ಪಿಡಿವ ನಡಿವ ಗುಣದ ಮಡದೇರು ಸರ್ವರು। ಪೊಡವಿಯೊಳಗೆವುಳ್ಳ ಜಡವಾದ ದ್ರವ್ಯದಿಂದ।

ಜಡಿತ ವಸ್ತ್ರದ ನಿಬಿಡ ಧರಿಸಿದರದು। ಕೆಡಿಸುವದು ಸ್ವರೂಪ ತಡಿಯದೆಕಾಮಜನರು। ಇಡುವರು ಮನಕ್ಲೇಶ ಬಡುವರು ತಮ್ಮೊಳಗೆ। ಬಡಿವಾರ ಬಪ್ಪದು ಒಡನೆ ಅಹಂಕಾರ ಮಮತೆ। ಕಡು ಪೆಚ್ಚುವರು ಬಲು ಕಡೆ ಮೊದಲಿಲ್ಲದೆ। ಅಡಿಗಡಿಗೆ ಭಯ ಬಡಬೇಕು ಒಬ್ಬರಿಗೆ। ಕೊಡಬೇಕು ಕಡುದುಃಖ ಬಡಬೇಕು ಈಯುದಿರೆ। ಎಡಬಲ ರಿಪು ಜನರು ಘುಡಿಘುಡಿಸುವರು ಬ। ಚ್ಚಿಡಬೇಕು ನಾನಾ ತೊಡಕು ಬಂದಾಗಲೂ। ಬಡತನ ಮಿಕ್ಕಾದ ತೊಡರು ಒದಗಿದಾಗ ಮಿಡಕಬೇಕು ವತ್ತೆ ಇಡುವಾಗ ಮಾರುವಾಗ। ಬಿಡು ಬಿಡು। ವಸ್ತ್ರದಗೊಡಿವೆ ನಿಮಗ್ಯಾತಕೆ। ದೃಢ ಮಾಡಿ ಮನ ಸಂಗಡಲೆ ಕೈವಲ್ಯಕೆ। ತಡಿಯುಂಟು ತೀವ್ರವಾಗಿ ಒಡೆತನ ಘನವೆನ್ನ। ಕಡಲಾಶಯನ ನಮ್ಮ ವಿಜಯ ವಿಠ್ಠಲನ್ನ ನಾಮವೆಂಬೊ। ಒಡವೆವಸ್ತ ಇಟ್ಟು ನಡೆ ಪತಿವೃತರಾಗಿ ॥೨॥

### ಮಟ್ಟತಾಳ

ವಾಲಿಭಂಜನನೆಂಬೊ ವಾಲಿಯನ್ನು ಧರಿಸಿ। ಬಾಲಲೋಲನೆಂಬೊ ಕಾನಬಾವಲಿ ಇಡಿ। ಹಾಲಸಾಗರ ಸದನನೆಂಬೊ ಮೇಲಾದ ಬುಗುಡಿ। ಕಾಳಿಂಗ ಭಂಗನೆಂಬಕಠಾಣಿಯು ಕಟ್ಟಿ। ಭೂಲೋಲನೆಂಬೊ ಭುಜಕೀರ್ತಿಯ ಧರಿಸಿ। ಮೂಲ ಮೂರುತಿ ನಮ್ಮ ವಿಜಯ ವಿಠಲನ್ನ। ಆಳಾದವನ ನಿಜ ತೋಳಿಲಿ ನಲಿದಾಡಿ ॥೨॥

### ರೂಪಕತಾಳ

ಕಮಲನಾಭನೆಂಬೊ ಕಡಗ ಕಂಕಣ ವಿಡಿ। ಅಮರ ಪಾಲಕನೆಂಬೊ ಅಚ್ಚ ಮೋಹನ ಹಾರ। ತಮಹರನೆಂದೆಂಬೊ ತಳಕು ಪದಕ ಹಾಕಿ। ರಮಾರಮಣನೆಂದೆಂಬೊ ರಾಜಿಪ ಉಂಗುರ। ಉಮೆಯರಸ ವಂದ್ಯ ಸಿರಿ ವಿಜಯ ವಿಠ್ಠಲನಂಘ್ರಿ। ಕಮಲವ ನೆನದು ಸಂತತ ಸುಖಿಯಾಗಿ ॥೩॥

**ಝುಂಪೆತಾಳ**

ಶೇಷಹಾಸಿಕೆ ಎಂಬೊ ಸರಿಗೆಂಯುನು ಧರಿಸುವದು। ದೋಷನಾಶನವಾದ ದ್ವಾ(ದೋ)ರೆಯನ್ನು। ವಾಸುದೇವಾ ನೆಂಬೊ ವಾಲಿಯ ಸರಪಳಿ। ಕೇಶವಾನೆಂಬೊ ಕಾಲಂದಗಿಯಾ। ಸಾಸಿರ ನಾಮನೆಂಬೊ ಸರದ ಮುತ್ತನೆ ಕಟ್ಟಿ। ದೇಶಾಧಿಪತಿ ಎಂಬೊ ಕಾಂಚಿದಾಮಾ। ಲೇಸಾಗಿ ವರವೀವ ವಿಜಯ ವಿಠಲರೇಯನ। ದಾಸನಾದವನ ಸಂತೋಷವನು ಬಡಿಸಿ ॥೪॥

**ತ್ರಿವಿಡಿತಾಳ**

ಪರಮ ಪುರುಷನೆಂಬೊ ಹರಡಿಯ ಕೈ ಕಟ್ಟು। ಮುರವಿರೋಧಿ ಎಂಬೊ ಮುತ್ತಿನ ಸರವೊ। ಪುರುಷೋತ್ತಮ ನೆಂಬೊ ಪುಣಗು ಸಾದಿನಬೊಟ್ಟು। ಕರಿವರದನೆಂಬೊ ನ್ಯಾವಳ (ಹವಳ)ದ ಸರ। ಪರ ದೈವ ಹರಿ ಎಂಬೊ ಮುತ್ತಿನ ಮೂಗುತಿಯು। ತರಣಿ ಭಾಸನೆಂಬೊ ಮುತ್ತಿನ ಚಿಂತಾಕ। ಸರುವ ದೇವರ ದೇವ ವಿಜಯ ವಿಠ್ಠಲನ್ನ। ಸ್ಮರಣೆ ಮಾಡುತ ಸಂಚರಿಸೋದು ಪ್ರತಿದಿನ ॥೫॥

**ಅಟ್ಟತಾಳ**

ಪಿನಾಕಿ ಸಖನೆಂಬ ಪಿಲ್ಲೆಯ ಇಡುವದು। ಶ್ರೀ ನಾಥನೆಂದೆಂಬೊ ಕಾಲುಂಗುರನಿಟ್ಟು। ಪ್ರಾಣನಾಯಕನೆಂಬೊ ಕಿರಿಪಿಲ್ಲೆಯನು ಇಟ್ಟು। ವಾಣಿ ಪತಿಪಿತನೆಂಬೊ ಮೆಂಟಿಕಿಯಾ। ಬಾಣಾಂತಕನೆಂಬೊ ಬಣ್ಣ ಬಣ್ಣದ ಸರ। ಕ್ಷೋಣಿಧರನೆಂಬೊ ಚಂದ್ರ ಸೂರ್ಯರ ಕಾಂತಿ। ಮಾನದೊಡಿಯ ನಮ್ಮ ವಿಜಯ ವಿಠ್ಠಲನ್ನ। ಜ್ಞಾನ (ಧ್ಯಾನ) ದಲ್ಲಿಪ್ಪದೆ ಮಂಗಳಸೂತ್ರ ॥೬॥

**ಆದಿತಾಳ**

ಪತಿದೈವವೆಂದು ತಿಳಿದು ಸತತ ನಡಿಯಬೇಕು। ಪತಿ ದರುಶನವೆ ಶ್ರೀಪತಿ ದರುಶನವೆನ್ನಿ। ಪತಿಯ ಸಲ್ಲಾಪವೆ ಶ್ರುತಿವಚನ ಎನಬೇಕು। ಪತಿ

ಉಪಚಾರ ಲಕ್ಷ್ಮೀಪತಿ ಸೇವೆ ಎನಬೇಕು। ಪತಿ ಪಾದ ಜಲ ತೀರಥ ಜಲವೆನಬೇಕು। ಪತಿ ಉಚ್ಚಿಷ್ಟ ಅಮೃತ ಪ್ರಾಶನೆನಬೇಕು। ಪತಿ ಅಂಗಸಂಗ ಉನ್ನತಗತಿ ಎನಬೇಕು। ಪತಿಯಲ್ಲದನ್ಯತ್ರ ದೈವವಿಲ್ಲೆನಬೇಕು। ಪತಿ ಮಾತಿಗೆ ನಿತ್ಯ ಪ್ರತಿಕೂಲವಾಗದೆ। ಹಿತದಲ್ಲಿ ನಡೆದು ಭಕುತಿ ಪಡಿಯಲುಬೇಕು। ಪತಿ ಅಂತರ್ಗತನಾದ ವಿಜಯ ವಿಠ್ಠಲಹರಿಯ। ನುತಿಸಿ ಸಾಧನದಿಂದ ಮತಿವಂತರಾಗುವದೂ ॥೭॥

**ಜತೆ**

ವೈರಾಗ್ಯವೆಂಬೊ ಭಾಗ್ಯದಲಿ ಲೋಲಾಡಿ ।
ವೀರನಾದ ವಿಜಯ ವಿಠ್ಠಲನ್ನ ನೆನೆಸೋದು ॥೮॥

❖ ❖ ❖

## ಸುಳಾದಿ–೫೫

ಪರನಾರಿ ಸಂಗ ವರ್ಜ ಇಂದ್ರಿಯಜಯ ವಿಷಯ.

**ರಾಗ– ಸಾವೇರಿ ಧ್ರುವತಾಳ**

ಹೆಣ್ಣಿನ ಬಣ್ಣ ನೋಡಿ ಕಣ್ಣಾಗೆಡದಿರಿ। ಹೆಣ್ಣು ಹೆಡತಲೆ ಮೃತ್ಯು ಕಾಣೊ। ಅನಂತ ಬಗೆಯಿಂದ ಜನ್ಮ ಜನ್ಮದಲ್ಲಿದ್ದ। ಪುಣ್ಯ ರಾಸಿಗಳೆಲ್ಲ ಹ್ರಾಸ ಕಾಣೋ। ಹೆಣ್ಣು ಹೊನ್ನು ಮಣ್ಣು ನಿನ್ನಾದೆನ್ನದಿರೋ। ಮುನ್ನೆ ದಾಯಿಗಳುಂಟೊ ಒಳ ಒಳಗೆ। ಹೆಣ್ಣಿನ ಮನದಲ್ಲಿ ಹಗಲುಗತ್ತರೆ ಇಪ್ಪದು। ನಿನ್ನೊಳು ನೀ ತಿಳಿದು ನೆಚ್ಚಾದಿರೋ। ತನ್ನ ಮೊದಲು ಮಾಡಿ ಮಾವ ಅತ್ತೆ ಗಂಡ ತಾಯಿ। ಅಣ್ಣ ತಮ್ಮ ಮಿಕ್ಕಾದ ಬಾಂಧವರ। ಚನ್ನಾಗಿ ಹಿಂಸೆ ಮಾಡಿ ಥೈ ಎಂದು ಧೈರ್ಯದಲ್ಲಿ ತಿರುಗುವಳು। ಬಣ್ಣಣಿ ಬಾಯಲ್ಲಿ ಹೇಳಲಳವೆ। ಬಣ್ಣಿಸಿ ರಂಬಿಸಿ ನಿನ್ನ ಕರದುಕ್ಕಿನ। ಕಣ್ಣೊಲಿ ಕುಟ್ಟಿ ಸುಖವ

ಬಡಿಸೀ। ತಿನ್ನಹಾಕುವಳು ತಿಕ್ತಾದಿ ರಸದಿಂದ। ಖಿನ್ನವಿಲ್ಲದಂತೆ ವಿಟಪುರುಷಗೆ ಅನುಗುಣ್ಯವಾಗಿ। ಇಪ್ಪಳೊ ಪೆದರದಂತೆ। ಕಣ್ಣೊಳೊಬ್ಬ ಚನ್ನಿಗನ್ನ ಇಟ್ಟು। ಅನ್ಯಾಯವೆನಿಸಳು ನೋಳ್ಪರಿಗೆ। ಅಣ್ಣ ತಮ್ಮ ತಂದೆ ಮಾವ ಮೈದುನ ಭಾವ। ತನ್ನ ನಂದನ ಅಳಿಯ ಗೋತ್ರಜರು। ಚನ್ನಾಗಿ ಚನ್ನಿಗರಾಗಿ ಸುಳಿದಾಡಲು। ಮನುಮಥನ ಪೇಕ್ಷ ಮಾಡುವಳು। ಸಣ್ಣವ ಪ್ರಾಯವೃದ್ಧ ಚಾಂಡಾಲಾದಿ ಜಾತಿಯ। ಉನ್ಮದಪಿಡಿಸಿ ಪೀಡಿಪಳೋ। ವಿಣ್ಮೂತ್ರ ಮಲಿನ ಹೊಲಸು ಮಲಶ್ಲೇಷ್ಮ। ಕೆನ್ನೀರು ತ್ವಕು ಚರ್ಮ ಅಸ್ಥಿ ಮಜ್ಜಾ। ಘನ್ನ ಮಾಂಸ ಮೇಧನರದ ಬಳ್ಳಿಗಳು ವಾ। ಸನೆ ಬೆವರು ಕಫ ರೋಮ ಭರಿತಾ। ಅನ್ನದಿಂದಲ್ಲಿ ಇವಳು ಚಿತ್ರ ವಿಚಿತ್ರ ಲಾ। ವಣ್ಯವಾಗಿ ತೋರುವಳು ಇಲ್ಲದಿರೆ ಬರಿದೆ। ಹೆಣ್ಣುಕುಣುಪ ಸಮವೆಂದು ತಿಳಿದ ಮನುಜ ಧನ್ಯಧನ್ಯ। ನವನೊ ಧಾರುಣಿಯೊಳಗೆಲ್ಲ ಗನ್ನ ಗತಿಯೊ। ಅನ್ಯ ಸ್ತ್ರೀಯರ ಒಲಮಿಯು। ತಣ್ಣನ ಪಾವಕನು ತತ್ಕಾಲಕ್ಕೆ। ಎಣ್ಣಿಯೊಳಗೆ ನೊಣಬಿದ್ದಂತೆ ದೀವಿಗಿ। ಹಣ್ಣೆಂದು ಕ್ರಿಮಿಗಳು ಬಂದು ಎರಗಿದಂತೆ। ಉಣ್ಣದಿರು ಈ ಭವಣಿ ಉದ್ದಂಡತನ ಬೇಡ। ನಿನ್ನ ಕುಲಕ್ಕೆ ಕೀರ್ತಿ ಬರಲಿ ವೇಗಾ। ಚನ್ನಿಗರಾಯ ವಿಜಯವಿಠ್ಠಲರೇಯನ ಕಾ। ರುಣ್ಯ ಪಡದು ಮಹಾಧೈರ್ಯ ಮಾಡೋ ॥೧॥

### ಮಟ್ಟತಾಳ

ಜನನಿ ತನುಜೆ ಅತ್ತಿಗೆ ನಾದುನಿ ಅತ್ತೆ ಮಿಕ್ಕಾ। ಜನರ ಸಂಗಡೆವ್ವನದಲ್ಲಿ ನೀನು ಕನಸಿನೊಳಗೆ ಏಕಾಸನದಲ್ಲಿರದಿರು। ಮುನಿಗಳಿಗಾದರೂ ಮನಸು ಹಿಡಿವದು ಬಲು ಕಠಿಣ ಕಾಣೊ ಮರುಳೆ। ವನುತಿಯರ ಕಂಪನೆ ಕುಡಿಯದಿರು। ಮನಸು ನಿನ್ನಧೀನವಾದರು ಒಂದು। ಕ್ಷಣಾತುರವೆಂದು ಎನದಿರು ಪ್ರತಿದಿನ। ಪಣವ ಮಾಡಿದರು ಗುಣವಂತಳು ಎಂದೂ। ನೆನೆ ನೆನೆದು ಯೋಚನೆಯೊಳಗಾಗದಿರು। ಧನವುಳ್ಳನಕ ನಿನ್ನನು ಸೇವಿಸುವಳು। ಜನನಿಗಿಂತ ಮಿಗಿಲೆನಿಪಳು ಹಿತದಲ್ಲಿ। ಧನರಹಿತನಾಗೆ

ತೃಣಕಿಂತಲಿ ನೀ। ಚನ ಮಾಡಿ ತನ್ನ ಮನಿಯ ಮುಂದಣ ಭೃ। ತ್ಯನ ತೆರದಿ ಉದಾಸೀನದಿಂದಲಿ ಮಾತನು ಪೇಳುವಳು ವಂ। ಚನಿಯಲ್ಲಿ ಅನುಗಾಲ ಕುಣಿಸುವಳೊ ಕಡಿಗೆ ಹೆಣ ಮನುಜನ ಮಾಡಿ ಘನಗುಣಗಣ ಸರ್ವ ಸ। ಜ್ಜನ ನಡತಿಗಳು ನಾಶನ ಕಾಣೊದಾಗುವವು ಯಾ। ತನ ಗೆಡೆಮಾಡಿ ಅನಳನ ಮುಂದೆ ಬೆಣ್ಣೆಯನು ಅಯಸ್ಕಾಂತ। ಮಣಿಯ ಬಳಿಯ ಕಬ್ಬಿಣವ ತಂದಿಡಲು ಸುಮ್ಮನೆ ಇರಬಲ್ಲದೆ। ವನಧಿಶಯನ ನಮ್ಮ ವಿಜಯ ವಿಠ್ಠಲ ಮೋ। ಹನ ಮೂರುತಿಯ ಸ್ಮರಣೆಯ ಬಿಡದಿರು॥೨॥

## ತ್ರಿವಿಡಿತಾಳ

ಸ್ತ್ರೀಯರ ಮೋಹಕ್ಕೆ ಸೌಭರಿ ಮಹಋಷಿ। ರಾಯನಲ್ಲಿಗೆ ಪೋಗಿ ಬೇಡಿಕೊಂಡಾ। ರಾಯಾ ಋಷಿ ವಿಶ್ವಾಮಿತ್ರ ಕಾಮನುಪಹತಿಗೆ। ನಾಯಿ ಎಂದದಿ ಪೋದಾ ಸ್ವರ್ಗದೆಡಿಗೇ। ಕಾಯಾ ಕೆಡಿಸಿಕೊಂಡ ಇಂದ್ರನು ಮದದಿಂದ। ಹಾಯಿದು ಚಂದ್ರನು ತನ್ನ ಕಳೆಗುಂದಿದ। ನ್ಯಾಯವಿಲ್ಲದೆ ತಿಲೋತ್ತಮಿಯ ಗೋಸುಗವಾಗಿ। ಸಾಯಬಟ್ಟರು ಒಡಹುಟ್ಟಿದವರು। ಬಾಯಿ ಕೊಬ್ಬಿನಲ್ಲಿ ಕೀಚಕ ಕುಲದೊಡನೆ। ಆಯುದಿಂದಲಿ ಪೋದ ದುಃಖದಲ್ಲಿ। ರಾಯ ರಾಯರು ಮಹಾ ಧೈರ್ಯಶಾಲಿಗಳಾಗಿ। ಬಾಯಿ ಬಿಡುವರು ಹೆಣ್ಣಿನ ಕಾಣುತ್ತ। ಮಾಯಾದೊಳಗೆ ಬಿದ್ದು ಕಡೆಗೆದ್ದವ ನಿಲ್ಲ। ಛಾಯಾ ಸೋಂಕಲು ಲೋಕ ಮರುಳಾಹೋದು। ಕಾಯಜನು ಹೊಲ್ಲ ಎಂದೆಂದಿಗೆ ಬಿಡದೇ। ದಾಯಿಗನಾಗಿ ಬೆಂಬಿಡದಲಿಪ್ಪ। ಸಾಯಕ ಹೊಡೆದು ರುದ್ರನ ತಪಗೆಡಿಸಿದ। ತಾಯಿ ಮಕ್ಕಳ ನೋಡ ಒಬ್ಬನಿರೇ। ಕಾಯಿದು ಕೊಳಲಾಗಿ ಅಂಗಜನಬಾಧೆ ಸ್ತ್ರೀಯರ ಶೋಭನ ಸ್ವಭಾವ ವಿಶೇಷವು। ವಾಯು ಇದ್ದಾಗಲೆ ಇನಿತೆಂದು ತಿಳಿದು ಉ। ಪಾಯ ಚಿಂತಿಸೋ ಮುಂದಿನಗತಿ ಮಾರ್ಗಕೆ। ಪ್ರಾಯ ಎರಡು ದಿವಸ ಅದರೊಳು ಈ ಸುಖ। ಹೇಯವು ಸ್ಥಿರವಲ್ಲ ಕಾಣೊ ಅರ್ಕಶಾಕ ಅರೆದು। ನೋಯ ಮಾಡಿ ಅದರ ಕ್ಷೀರ ಕುಡಿದಂತೆ। ಪ್ರಯಾಸ ಬಡದಿರೂ ಬರಿದೆ ಬಳಲೀ। ತೋಯ

ನದಿಯೊಳಗೆ ಸೂಸಿದಂತೆ ಇದರೊಳು। ಪ್ರೀಯವಾಗದು ಕಾಲ ಹೋದ ಮೇಲೆ। ಮಾಯವಲ್ಲದೆ ಲೇಶ ಗತಿಗೆ ಸಾಧನವಲ್ಲ। ತೋಯಸದಿರು ಪಾಪದಲ್ಲಿ ದೇಹವ। ಆ ಯಮರಾಯನು ನಿನ್ನಯ ಕುಲ ನೀ। ಕಾಯವ ಎಳೆದೊಯ್ದು ಭಂಗಬಡಿಸೀ। ಪೂಯಾಸ ಮಿಗಿಲಾದ ನರಕದಲ್ಲಿ ಇಟ್ಟು। ಸ್ರೇಯಸ್ಸು ಕೆಡಿಸುವ ಬಲು ಜನುಮದ। ಶ್ರೀಯರಸ ರಂಗ ವಿಜಯ ವಿಠ್ಠಲರೇಯನ। ಗಾಯಕನಾಗಿ ಸಂತತದಿ ಸುಖಿಸೊ ॥೩॥

### ಅಟ್ಟತಾಳ

ಶ್ರುತಿ ಶಾಸ್ತ್ರ ಪುರಾಣ ನಾನಾತೀರಿತ ಧರ್ಮ। ವ್ರತಗಳು ಚರಿಸಿ ಪುಣ್ಯವಂತನಾದರು। ಗತಿಗೆ ವಿರೋಧವಾಗಿದ್ದ ಕರ್ಮ ಅನ್ಯ। ಸತಿಯರ ಒಲಿಮಿಗೆ ಸೋಲಲು ಸತ್ಕರ್ಮ। ಗತವಾಗಿ ಪೋಗೊದು ಏನೆಂಬೆ ಸೋಜಿಗ। ಕ್ಷಿತಿಯೊಳು ಕಲಿಗೆ ಕೇವಲ ಆಶ್ರಯವೆನ್ನಿ। ಹಿತವಾಗಿ ಪೇಳುವೆ ಕಣ್ಣಿನಿಂದಲಿ ಕಾ। ಣುತಲೆ ಮದ್ಯಪಾನ ಮಾಡಿದಕಿಂತ। ಅತಿಶಯವಾದ ಮಂದಮದ ಹೆಚ್ಚೋದು। ಪ್ರತಿಲೋಮ ಅನುಲೋಮ ರುದ್ಭವರಾಗಿ ಶಾ। ಸ್ವಿತದಲ್ಲಿ ಬೆಳೆಯುಲು ಮುಕುತಿಯು ಮಾರ್ಗಕ್ಕೆ। ಪ್ರತಿಕೂಲವಲ್ಲದೆ ಶೋಭನವಂದಿಲ್ಲ ಯತಿಯಾದರೇನು ಮೋಕ್ಷ ಮಾರ್ಗಕ್ಕೆ ಸಲ್ಲ। ಮತಿವಂತರು ಕೇಳಿ ಮರಿಯದಿರೀ ಪರ। ಸತಿಯರ ಕೂಟ ಕಾಳಕೂಟದ ಲೇಪ। ತತುಕಾಲಕೆ ದುರ್ವ್ಯಸನ ಸೀತಳವಾದ। ಹುತವಹನಂತೆ ತೋರುವದು ಆ ತರುವಾಯ। ಖತಿಗೊಳಿಸುವದು ಇಹಪರದಲಿ ಬಂದು। ಅತಿ ಕಾಮಾತುರ ನೀನಾದಡೆ ನಿಜ ಸು। ತಿಯಲ್ಲಿ ರಮಿಸೋದು ಇದಕ ವಿವರ ಉಂಟು। ಋತುಕಾಲ ನಿಷಿದ್ಧ ಅನಿಷಿದ್ಧ ದಿನವೆಂದು। ಮಿತವುಂಟು ಉತ್ತಮ ಮಧ್ಯಂತವೆಂಬೊದು। ಹಿತವಾಹೋ ದಂಗಕ್ಕೆ ಕುಲಕ್ಕೆ ಭೂಷಣ ಕೀ। ರುತಿ ಬಪ್ಪದು ಗುರುಹಿರಿಯರ ಸಮ್ಮತ। ಸುತ ಸುತರಾದ್ಯರು ವಂಶಜರೆನಿಪರು। ಪಿತ ಪಿತಾಮಹ ಪ್ರಪಿತಾ ಮಹ ಮಾತಾಮಹ। ತತಿಗಳು ಇವರಿತ್ತ ದಾನಾದಿಗಳಿಂದ। ಕೃತ ಕಾರ್ಯರಾಗಿ ತಾವೆಲ್ಲ ತಮ್ಮಯೋ। ಗ್ಯತ

ದನಿತು ಗತಿಯಲ್ಲಿ ಹರಿಭಕ್ತಿಯಲ್ಲಿಪ್ಪರು ಪತಿತ ಪಾವನ ಸಿರಿ ವಿಜಯ ವಿಠ್ಠಲಗೆ ಆ। ರ್ಪಿತವಾಗುವಂತೆ ನಿಜರಾಣಿಯ ಪ್ರೀತಿ ಬಡಿಸೊ ॥೪॥

**ಆದಿತಾಳ**

ಹಣಿ ಬೆವರುತಲಿರೆ ಮಣಿದು ಏಳುತಲಿರೆ। ಕುಣಿದಾಡುತಲಿರೆ ತನುವು ಮುಚ್ಚದಲಿರೆ। ಮನೆಯೊಳಗೊಬ್ಬಳಿರೆ ಧನಿಕನ ಸಂಗವಿರೆ। ಹೆಣಲು ಬಿಚ್ಚಿಕೊಂಡಿರೆ ಜನರು ಹಳಿಯುತಿರೆ। ಹಣವ ಬೇಡುತಲಿರೆ ಮುನಿದು ಪೋಗುತಲಿರೆ। ಕೊನೆ ನೋಟ ನೋಡುತಿರೆ ಋಣವ ಮಾಡುತಲಿರೆ। ಅನದೆ ಕನಿಕರ ವಿಲ್ಲದಿರೆ ಕನಕ ಬಯಸುತಿರೆ। ಉಣುತ ಏಳುತಲಿರೆ ನುಣಪು ತಿದ್ದುತಲಿರೆ ಇನಿತುಳ್ಳ ನಾರಿಯ ಗುಣಗಳ ತಿಳಿದು ಒ। ಬ್ಬನೆ ಇರಲಾಗದು ಜನವಿರಹಿತನಾಗಿ। ನಿನಗ ನೀನೇ ತಿಳಿದು ವನಿತೇರ ಮರೆ ಮೋಸ। ವೆಣಿಸಿದ ಕಾಲಕ್ಕೂ ಅನಿಮಿಷರಿಗರಿದು। ದ್ಯುಣಕವಾದರು ಸ್ತ್ರೀಜನ ಸಂಗವಾದರೆ। ಗುಣವೆ ಕದುವಳು ಲೋಚನದಿಂದಲಿ ಸೆಳೆದು। ಎನಿತುಕೊಟ್ಟರು ತಾನು ದಣಿಯಳು ಇವನ। ದಣಿಸೋಳು ಮುಂದಣ ಮಾರ್ಗ ತೋರದಂತೆ। ಫಣಿಶಾಯಿ ವಿಜಯ ವಿಠ್ಠಲರೇಯನ ನಾಮವ। ನೆನೆದು ಏಕಾಂತದಲ್ಲಿ ನಿರ್ಮಲ ನೀನಾಗೊ ॥೫॥

**ಜತೆ**

ಸೊಲ್ಲು ಎತ್ತಲಿ ಸಲ್ಲ ಪರನಾರಿಯರ ಕೂಡ ।
ನಿಲ್ಲದುಸುಕೃತ ವಿಜಯ ವಿಠ್ಠಲ ಮುನಿವ ॥೬॥



---

## ಸುಳಾದಿ-೫೭

---

ಗರ್ವ-ಅಹಂಕಾರ ತ್ಯಜನಪೂರ್ವಕ ಸಾಧನ ವೈರಾಗ್ಯ ಲಕ್ಷಣ.

**ರಾಗ- ಭೈರವಿ ಧ್ರುವತಾಳ**

ಗರ್ವದಲಿ ಕೆಡದಿರು ಸರ್ವ ವಿಷಯದಲ್ಲಿ। ದುರ್ವ್ಯಸನ ಚೇಷ್ಟಿಗೆ ನಿರ್ವಿಣ್ಣನಾಗು। ತ್ಯರ್ವಿಲ್ಲದಂತೆ ತತ್ಪೂರ್ವದ ದುರಿತರಾಸಿ। ನೀರ್ವದು

ಮಹಪರ್ವತಕಧಿಕ। ಖರ್ವಜನ್ಮಗಳಲ್ಲಿ ಊರ್ವಿಯ ಸುತ್ತಿದರು। ಊರ್ವಿಸುರ ರಾಜನನ ಸರ್ವದ ಸಾಧ್ಯ। ಗೀರ್ವಾಣ ಸಿದ್ಧ ಗಂಧರ್ವರು ಬಲ್ಲರು। ದುರ್ವ್ಯಸನ ತೊರೆದು ಓರ್ವನಾಗಿ। ಸರ್ವತ್ರ ಚಕ್ಷುನಾಮ ವಿಜಯ ವಿಠ್ಠಲರೇಯ। ಸರ್ವರಾಧಾರನೆನ್ನು ಸರ್ವಕಾಲದಲ್ಲಿ ॥೧॥

**ಮಟ್ಟತಾಳ**

ನಿರ್ಮಳ ಮನಸ್ಸಿನಲ್ಲಿ ನಿರ್ಮತ್ಸರನಾಗಿ। ಚರ್ಮಾಂಗದ ಚಿಂತೆ ನಿರ್ಮೂಲವೆ ತೊರದು। ದುರ್ಮತಿ ಇಂದ್ರಿಯಂಗಳ ಮರ್ಮನನು ಮೆಟ್ಟಿ ಧರ್ಮಾನುಕೂಲದ ಕರ್ಮಜ್ಞಾನೇಂದ್ರಿಯದಲ್ಲಿ ಧರ್ಮಗುಪ್ತವಾದ ವಿಜಯ ವಿಠಲರಂಗನ। ಪೇರ್ಮೆಯಿಂದಲಿ ಕರುಣವರ್ಮವ ತೊಡು ತೊಡು ॥೨॥

**ರೂಪಕತಾಳ**

ದೃಢಾಂಗನಾಗುವದು ಕಡೆಕಡೆಯಲಿ ಮನ। ಬಿಡದಿರು ಭಯವಾದರೆ ಭೀತಿಗೊಳದಿರು। ಕೆಡದಿರು ದುಷ್ಟವ್ಯಾಪಾರದಲ್ಲಿ ಬಿದ್ದು। ಒಡಲಿಗಾಗಿ ಪೋಗಿ ಕಾಯದಿರು ಜನರ। ಬಡವನಾಗಿ ಬ್ರಹ್ಮವಿದ್ಯ ವಿಜಯ ವಿಠ್ಠಲನ್ನ ಅಡಿಗಳನು ಚೆನ್ನಾಗಿ ಹೃದಯದಲ್ಲಿರಿಸು ॥೩॥

**ಝಂಪೆತಾಳ**

ಚಂಚಲವನು ಬಿಟ್ಟು ಚತುರಾರ್ಥಕೊಳಗಾಗಿ। ಪಂಚೇಂದ್ರಿಯಂಗಳು ವಶಮಾಡಿಕೊಂಡು। ವಂಚನಿಯ ತೊರೆದು ಕಾಮಕ್ರೋಧ ಬಲದ ಪ್ರಾ। ಪಂಚವನು ಬಿಡು ಬಿಡು ಜಡಮನವೆ। ಪಂಚದಶ ವಿಜಯ ವಿಠ್ಠಲನ ಪದಸೇವಿಗೆ। ಸಂಚಗಾರವ ಪಿಡಿಯೊ ವೈರಾಗ್ಯಪಡಿಯೋ ॥೪॥

### ತ್ರಿವಿಡಿತಾಳ

ಹರಿಸೇವಿಗೆ ಅಂಗೀಕರಿಸಿ ಬಾಳಿದವಂಗೆ। ದುರಿತ ಪರ್ವತಂಗಳು ಪರಿಹಾರವೋ। ಭರದಿ ಸಿಡಲು ಬಂದು ಸಿರದಲ್ಲಿ ಎರಗಿದರು। ಅರಳಿದ ಮಲ್ಲಿಗಿ ಸರವಾಗಿ ತೋರೋದು। ತರಬಿ ಮುನಿದ ಕಳ್ಳಪರಮ ಸಖನಾಗುವ। ವರಸು ವಾಪಮೃತ್ಯು ತೊಡರದಲೆ ದೂರದಲ್ಲಿ। ಸರಿದುನಿಂದು ನಿರಾಕರಿಸಿ ಓಡುವದು। ಹರಿ ಭಕುತಿಗೆ ಒಂದರೆ ಮರೆ ಇಲ್ಲವೋ। ಶರಣಾಗತ ಸ್ತೋತ್ರ ವಿಜಯ ವಿಠ್ಠಲನ್ನ। ಕರುಣ ಸಂಪಾದಿಸಿ ಮರಣರಹಿತನಾಗೋ ॥೫॥

### ಅಟ್ಟತಾಳ

ಕರ್ನ ಕೇಳಸದಂತೆ ಕಣ್ಣು ಕಾಣಿಸದಂತೆ। ಉನ್ನತ ಮದಹುಚ್ಚು ಹಿಡಿದಂತೆ ಪೋಗುತ್ತ। ತನ್ನ ಎಚ್ಚರಿಕೆ ತನಗೆ ಇಲ್ಲದಂತೆ। ಮಣ್ಣು ಸಮಾನವೆಂದು ಪವಳಿಸುತ್ತ। ಅನ್ಯರಿಗೆ ಬಲು ಹೇಸಿಕೆ ತೋರುತ್ತ। ತನ್ನೊಳಗಿದ್ದ ಪರಮಾತ್ಮನ ಧ್ಯಾನ। ವನ್ನು ಮಾಡುತಾ ಸಾಧನಪೂರತಿಯಲ್ಲಿ। ಚಿನ್ನಮಲಿನದಲ್ಲಿ ಪೊಳೆದಂತೆ ತೋರುತ। ವರ್ನಾಶ್ರಮದೊಳು ರನ್ನ ನೀನಾಗು ಸು। ವರ್ನನಾಮ ಸಿರಿ ವಿಜಯ ವಿಠ್ಠಲ ಸಂ। ಪನ್ನನ ಮತ್ತೊಂದು ಕಣ್ಣಿನಿಂದಲಿ ನೋಡು ॥೬॥

### ತ್ರಿವಿಡಿತಾಳ

ನೆಳಲಿಗೆ ಅಂಜಿ ನಡೆದು ಅಳಕುವದು ಪರ ವಸ್ತಕ್ಕೆ। ಗಲಭೆಯಿಂದಲಿ ಪೋಗಿ ಸುಳಿಯದಿರು ಎಲೊ ಮನವೆ। ಜಲಜಾಕ್ಷ ವೀರಘ್ನ ವಿಜಯವಿಠ್ಠಲನಂಘ್ರಿ। ವೊಲಿಸಿಕೊಂಡಳಾಗಿದ್ದು ಉಳಿದಿನ ಪೋಗಾಡು ॥೭॥

### ಜತೆ

ದುಷಕರ್ಮ ನೆನಸದೆ ದೂರಾಗು ಜನನಕ್ಕೆ।
ಪುಷ್ಕರಾಕ್ಷನಾಮ ವಿಜಯ ವಿಠಲನೊಲಿಸೊ ॥೮॥



# ಸುಳಾದಿ-೫೭

ದುಷ್ಟ ಕರ್ಮಾಚರಣೆ ತ್ಯಜನ ಮಾಡಿ ಶ್ರೀಹರಿಕರ್ತೃತ್ವ ಸ್ಮರಣೆ ಪೂರ್ವಕ ಸಕಲ ಸು ಕರ್ಮಾಚರಣೆಯೆ ಮಡಿ.

## ರಾಗ- ಕಾಂಬೋಧಿ ಧ್ರುವತಾಳ

ಮಡಿ ಮಾಡುವದೊ ಮಾನವ। ನಡತಿ ನುಡತಿ ತಿಳಿದು। ಬಿಡದೆ ಪ್ರತಿದಿನ ನಿರ್ಮಳದಲ್ಲಿ। ಮಡಿ ನೀರೊಳಗೆ ಒಗೆದು। ಮಡಿಸಿ ಬಗೆಬಗೆಯಿಂದ ಮಡಿಕಿ ಹಾಕಿ ಉಟ್ಟರೆ। ಮಡಿಯಲ್ಲ ಮಡಿಯಲ್ಲ। ಮಡಿವಾಳನಂಥೇ ಮಲಿನ ಕಡೆ ಮಾಡಿದರೆ ವಸ್ತ್ರ ಬಿಡು ಶುಚಿ ಆಗುವದೆ। ದೃಢದಲ್ಲಿ ತಿಳಿದು ನೋಡು ಮಡಿನೀರೊಳಗೆ ಇಲ್ಲ। ಮಡಿವಸನದೊಳಗಿಲ್ಲ। ಮಡಿದೇಶದೊಳಗಿಲ್ಲ। ಮಡಿನಭದಲ್ಲಿ ಇಲ್ಲ। ಮಡಿಮಾಡು ಉಪಾಯ। ಒಡನೆ ತನ್ನಲ್ಲಿ ಉಂಟು। ಪೊಡವಿತಿರುಗಸಲ್ಲ। ಅಡಿಗಡಿಗೆ ದಣಿವದಲ್ಲ। ಅಡಿಗಳಿಟ್ಟು ನೋಡಿ। ನಡೆದರೆ ಮಡಿ ಅಲ್ಲ। ಮಡಿಯಾಗಿಪ್ಪೆನೆಂದು। ಉಡಿಗೆ ಮುದರಿಕೊಂಡು। ಎಡೆಗಡಿಗ್ಹಾರಿದರೆ। ಮಡಿಯಾಗುವದೇನೊ ಮಾನವ। ಕಡುಮುದ್ದು। ಮೋಹನ್ನ ವಿಜಯ ವಿಠ್ಠಲರೇಯನ। ಅಡಿಗಳಿಗೆರಗದವನ। ಮಡಿಯಾತಕೆ ಬಪ್ಪದೊ ॥೧॥

## ಮಟ್ಟತಾಳ

ಕಾಮ ಕ್ರೋಧದಲಿ ತಿರುಗಲು ಮಡಿಯಲ್ಲ। ಕಾಮನ ಬಳಗಕ್ಕೆ ಸೋಲಲು ಮಡಿಯಲ್ಲ। ತಾಮಸ ಮತಿಯಲಿ ಇದ್ದರು ಮಡಿಯಲ್ಲ। ಹೇಮವ ಬಯಕೆಯಲಿ ಚರಿಸಲು ಮಡಿಯಲ್ಲ। ಸ್ವಾಮಿದ್ರೋಹವ ಮಾಡಿ ನಡೆದರೆ ಮಡಿಯಲ್ಲ। ಯಾಮ ಯಾಮಕೆ ಹರಿಯ ಮರೆದರೆ ಮಡಿಯಲ್ಲ। ನಾಮವ ಧರಿಸದಿದ್ದರೆ ಅದು ಮಡಿಯಲ್ಲ। ನೇಮ ನಿತ್ಯಗಳು ತೊರೆದರೆ ಮಡಿಯಲ್ಲ। ಭೂಮಿ ಪಾಲಕ ನಮ್ಮ ವಿಜಯ ವಿಠಲರೇಯನ। ನಾಮವನು ಮರೆದವನು ಎಂದಿಗೆ ಮಡಿಯಲ್ಲ ॥೨॥

## ತ್ರಿವಿಡಿತಾಳ

ಹಸವು ಕಾಲಲಿ ಒದೆದರೆ ಮಡಿ ಅಲ್ಲ। ಹಸು ಮಕ್ಕಳ ನೂಕಿ ಬಿಟ್ಟರೆ ಮಡಿ ಅಲ್ಲ। ವಶವಾದ ನಾರಿ ತೊರೆದರೆ ಮಡಿಯಲ್ಲ। ವಸುಧಿಸುರರ ಕಂಡು ಬೈದರೆ ಮಡಿ ಅಲ್ಲ। ವಿಷವ ನಿಕ್ಕಿ ಜನರ ಕೊಲ್ಲಲು ಮಡಿಅಲ್ಲ। ನಿಸಿಯಲ್ಲಿ ಉಂಡವರು ಎಂದಿಗೆ ಮಡಿ ಅಲ್ಲ। ಹುಸಿಯ ಬೊಗಳುವಂಗೆ ಆವದು ಮಡಿ ಅಲ್ಲ। ಅಸೂಯ ಬಟ್ಟಕೊಂಡರೆ ಅದು ಮಡಿ ಅಲ್ಲ। ಅಸುರ ಕರ್ಮವು ಆಚರಿಸಲು ಅದು ಮಡಿ ಅಲ್ಲ। ಅಶನ ಘಾತಕನಾಗಿ ಇದ್ದವಗೆ ಮಡಿಯಲ್ಲ ದಶಮಿ ದ್ವಾದಶಿ ಕನ್ಯಾದಾನ ಮಾಡೆ ಮಡಿಯಲ್ಲ। ಕುಶಲ ಮೂರುತಿ ನಮ್ಮ ವಿಜಯ ವಿಠ್ಠಲರೇಯನ। ಬೆಸನೆ ಭಕುತಿಯ ಬೇಡದಿದ್ದರೆ ಮಡಿ ಅಲ್ಲ ॥೩॥

## ಅಟ್ಟತಾಳ

ಸಕೇಶಿ ಕೈಯಿಂದ ಉಂಡರೆ ಮಡಿಯಲ್ಲ। ಸಿಕ್ಕಿದವರ ಬಳಲಿಸಿದರೆ ಮಡಿಯಲ್ಲ। ವಾಕುಬದ್ಧವಿಲ್ಲದವನಿಗೆ ಮಡಿಯಲ್ಲ। ಶ್ರೀಕಾಂತನ ಸ್ಮರಣೆ ಮರೆದಾರೆ ಮಡಿ ಅಲ್ಲ। ಹೇಕೆತನ ಕಲಿತವಗೆ ಮಡಿ ಅಲ್ಲ। ಬೇಕೆಂದು ದುರನ್ನ ಉಂಡರೆ ಮಡಿಯಲ್ಲ। ಏಕಾಂತ ಧ್ಯಾನವು ಇಲ್ಲದೆ ಮಡಿ ಅಲ್ಲ। ಪಾಕ ಶಾಸನ ವಂದ್ಯ ವಿಜಯ ವಿಠ್ಠಲರೇಯ। ಸಾಕುವನೆನ್ನದಿರೆ ಸಚೈಲ ಮಡಿ ಅಲ್ಲ ॥೪॥

## ಆದಿತಾಳ

ಗುರುಗಳಿಗೆ ನಮಿಸಾದಿದ್ದರದು ಮಡಿ ಅಲ್ಲ। ದುರುಳ ಜನರ ಸಂಗತಿ ಇದ್ದರೆ ಮಡಿ ಅಲ್ಲ। ಕರ ಕರೆ ಸತಿಯಿಂದ ಧ್ಯಾನಾದಿಗೆ ಮಡಿ ಅಲ್ಲ। ತರಳೆ ದೃಷ್ಟಣಿಗೆ ಕೇವಲ ಮಡಿ ಅಲ್ಲ। ಹರಿ ನೈವೇದ್ಯವನು ಕೊಳದಲೆ ಮಡಿಯಲ್ಲ ನೆರೆಮನೆ ಸೇರಿಕೊಂಡವನಿಗೆ ಮಡಿಯಲ್ಲ। ಪರಮ ಶುದ್ಧ ವಿಜಯ ವಿಠ್ಠಲನ ಚರಣದಲಿ ರತಿ ಇಲ್ಲದಲೆ ಮಡಿ ಅಲ್ಲ ॥೫॥

**ಜತೆ**

ಕೋಪದವನ ಸಂಗಡಲಿರೆ ಮಡಿಯಲ್ಲ ।
ಶ್ರೀಪತಿ ವಿಜಯ ವಿಠ್ಠಲನೊಲಿಯದಿರೆ ಮಡಿಯಲ್ಲ ॥೬॥

❖ ❖ ❖

## ಸುಳಾದಿ-೫೮

ಪರಮಾತ್ಮ ತದ್ಭಕ್ತರು ತಾತ್ವಿಕರ ವಿನಾ ಹಕ್ಕಲಅನ್ಯ ದೇವತಾ ಆರಾಧನಾ ವರ್ಜ.

**ರಾಗ- ಕೇದಾರ ಗೌಳ ಧ್ರುವತಾಳ**

ಅನ್ಯದೇವತೆಗಳ ಕಣ್ಣೆತ್ತಿ ನೋಡದಿರು। ಪುಣ್ಯವಿಲ್ಲವೊ ಮನವೆ ಎನ್ನ ಮತಕೆ ಹಿತ। ಸುಣ್ಣ ಕರ್ದಮ ಕ್ಷೀರವನ್ನು ಕೂಡಿಸಿ ದಿ। ವ್ಯಾನ್ನದೊಡ ಉಂಬೊ ಕನ್ನನಂತೆ ಕಾಣಿರೊ। ಅನ್ಯಾಯವಾಹದು ಅರಣ್ಯದೊಳು ಪೊಕ್ಕು ಮಣ್ಣು ತೂರಿ ತೂರಿ ಧಾನ್ಯ ಆರಿಸಿದಂತೆ। ಕನ್ನಡಿ ತಿರಿವಿಡಿದು ತನ್ನ ನೋಡಿ ಕೊಂಡಂತೆ। ಖಿನ್ನವಾಗದಲೆ ಪಾವನ್ನ ಎಂದಿಗೆ ಇಲ್ಲ। ಭಿನ್ನ ದೈವದಗಂಡ ವಿಜಯ ವಿಠ್ಠಲನಂಘ್ರಿ। ಎನ್ನು ಭುಜಿಸುವಂಗೆ ಸನುಮತವಲ್ಲವೆನ್ನಿ ॥೧॥

**ಮಟ್ಟತಾಳ**

ಎಲ್ಲಾಯಿ ಯಕನಾತಿ ಬನದಶಂಕರಿ। ಮಲ್ಲಗ ಜಟ್ಟಿಂಗ ಮಾಳಿಗೆ ಮನಿದೇವಿ। ಕಲ್ಲದ ಚವಡಿಕಿ ಮಾರಿ ಮಸಣೆ ಜಕ್ಕಿ। ಸಲ್ಲದ ಹಿರಿಯಣ್ಣ ಗುರುವ ಜಲದೇವಿ। ಕೊಲ್ಲುವ ಪೋತಗನು ಕಚ್ಚಿನ ಗಡಿಗೆಮ್ಮ। ಸುಳ್ಳು ಚಂದಮ್ಮನು ಖಂಡಿಕೇತಾರಯ್ಯಾ। ಬೊಳ್ಳೊಟ್ಟು ಬೊಗಳುವ ಅಡವಿಯ ಮಹಮಂತ। ಅಲ್ಲಾದ ಮಹದೇವಿ ತುಳಜಾಭವಾನಿ। ಬೆಲ್ಲಾದ ಬೇಲಾಯಿ

ಕೋಣ ಕುರಿ ವೈರಿ। ಹಳ್ಳದ ಜೋಗಾಯಿ ಬೇತಾಳ ಬೊಮ್ಮಯ್ಯಾ। ಮುಳ್ಳಿನ ಮಹಾವೀರ ಸಂಕಟ (ಚೌತಿ) ಜ್ಯೋತಿಗನು। ಉಳ್ಳಾ ಮೂಕಾರತಿ ಮುಂಡೆಚಾ ಮುಂಡಣಿ। ಹಲ್ಲಿನ ಜೋಕು ಮಾರ ಕರಿಯಾ ಶೀರಿಯಾ ಶಟವಿ। ಗುಳ್ಳಕೆ ಪೊಳಕಾಯಿ ಅಗಸರ ಮನೆ ಕೊಡತಿ। ಹೊಲ್ಲಿ ಮನವುಳ್ಳ ನರಸ ಸಕ್ಕರಿಗಾ। ಜೊಳ್ಳುಮತಿಯ ಕೊಡುವ ಜಂಪೆ ಜಡದೈವ। ಬಳ್ಳಿ ಉಡಿಗೆ ಉಡುವ ಉಟ್ಟಿಗೆ ಪಟ್ಲಾಯಿ। ಉಳ್ಳೆ ಮೆಲುವ ಹೀನ ಮದ್ಯಪಾನದ ಭಾಂಡ। ಕೊಳ್ಳೆ ಪಚ್ಚಿಸಿಕೊಂಬ ದೀಪದ ಮಾರಾಯೀ। ಎಲ್ಲರು ದಾಟುವ ಹೊಸ್ತಲು ಬುಡ್ಡಗನು। ಕಲ್ಲು ಮೂರರಿಂದ ತೋಟದ ಹೆಬ್ಬಯ್ಯಾ। ಬುಳ್ಳನು ಸುಂಕ್ಲಾಯಿ ಹಾದಿ ಬೀದಿ ಒಡಿಯಾ। ಬಿಲ್ಲಿಯಾ ಮಹಕೆಂಚೆ ಮಾತಂಗಿ ಬಕ್ಕಾಯಿ। ಎಲ್ಲ ನಾನಾಕದಾ ಕಳ್ಳದೇವತೆಗಳ। ನಿಲ್ಲದೆ ಒಲಿಸಿದರು ಪೊಳ್ಳಲ್ಲದೆ ಗತಿ। ಎಲ್ಲವೊ ಎಂದಿಗೂ। ಚಿಲ್ಲರ ದೈವಕ್ಕೆ ಬಲ್ಲಿದ ವಿಜಯ ವಿ। ಠ್ಠಲನಲ್ಲದೆ ಪ್ರತಿ ಇಲ್ಲಿವೊ ಆವಲ್ಲಿ ॥೨॥

## ತ್ರಿವಿಡಿತಾಳ

ಬಿನಗು ದೇವತಿಗಳಿಗೆ ಇನಿತಾದರು ಬಾಗಿ। ಕನಸಿನೊಳಾದರು ನೆನಿಸಲಾಗದು ಮನವೆ। ನಿನಗೇನು ಉಪಹತಿಯನು ಮಾಡಿದರೆ ಪ। ಲ್ಲನು ಉಚ್ಚ ಬಡಿ ಇದಕೆ ಅನುಮಾನ ಸಲ್ಲದು। ಘನತಿಯ ಪಿಡಿದು ತೊತ್ತಿನ ಮಕ್ಕಳನ ಜೀರಣ ಕಂಟಕಾರಿಯಲ್ಲಿ ಹಣಿದು ಹಣಿಯಬೇಕು। ಹೆಣೆಗಾಡಿದರೆ ನಿನ್ನೊಡನೆ ಮಾರಿಗಳನ್ನು। ತೃಣವೆಂದು ಬಗಿದು ಗಣನೆ ಮಾಡದಿರಬೇಕು। ಜನುಮಾನಂತ ಜನುಮ ದಿನದೊಳಗೆ ಬಂದು। ಕ್ಷಣವಾದರು ಅರ್ಚನೆಸಲ್ಲ ದುಷ್ಟರಿಗೆ। ತನುಮನ ಒಡಿವೆ ವಾಹನ ಧನ ಸರ್ವವು। ಮುನಿದೆಲ್ಲವನು ಶಳದೂ ದಣಿಸಿದ ಕಾಲಕ್ಕೂ। ಮಣಿಯದಿರವರಿಗೆ ಶಣಸುತ್ತ ಧೈರ್ಯದ। ಖಣಿಯಾಗಿ ಬಾಳು ಸಾಧನವನ್ನು ಮಾಡುತ್ತ ಸನಕಾದಿಗಳ ದಾತಾ ವಿಜಯ ವಿಠಲನ್ನ। ಗುಣವ ಕೊಂಡಾಡುತ್ತ ಭಣಗುವದದು ಕಳಿಯೊ ॥೩॥

**ಅಟ್ಟತಾಳ**

ಹೊಟ್ಟೆಕಿಚ್ಚಿನ ದೈವವೆಷ್ಟು ಪೂಜಿಸಲೇನು। ಪುಟ್ಟದು ವೈರಾಗ್ಯನಿಷ್ಠೆಯಾದಿಗಳು। ಬೆಟ್ಟದ ಕೊನೆಯಿಂದ ಸೃಷ್ಟಿಗುರುಳಿದಂತೆ। ನಷ್ಟವಲ್ಲದೆ ಎಲ್ಲ ಇಷ್ಟ ಪ್ರಾಪುತಿ ಇಲ್ಲಿ। ಬಟ್ಟು ನೀರೊಳಗದ್ದಿ ನೆಟ್ಟನೆ ಬಾಯೊಳ। ಗಿಟ್ಟು ಚಪ್ಪರಿಸಲು ಪುಟ್ಟುವದೆ ಸುಖ। ತಟ್ಟದು ಎಂದಿಗೂ ಭ್ರಷ್ಟದೇವರುಗಳ। ಮುಟ್ಟಿದರೆ ಯಮ ಕುಟ್ಟಿ ತಮಸಿನೊಳ। ಗಿಟ್ಟು ಬಿಡುವನು ಧಿಟ್ಟಮೂರುತಿ ಜಗ। ಜಟ್ಟಿ ಶ್ರೀವಿಜಯ ವಿಠ್ಠಲನ ಪಾದ। ಬಿಟ್ಟರೆ ಗತಿ ಇಲ್ಲ ಬಿಟ್ಟರೆ ಗತಿ ಇಲ್ಲವೊ ॥೪॥

**ಆದಿತಾಳ**

ಈ ಪರಿ ಇರಲು ಸ್ವರೂಪ ಜ್ಞಾನವೆ ಉಂಟು। ಅಪಾರ ಜನುಮದ ಪಾಪ ಸಂಹಾರವೊ। ಶ್ರೀಪತಿ ಭಜನಿಗೆ ಸೋಪಾನ ಬಿಗಿದಂತೆ। ಅಪವರ್ಗದ ತನಕ ಪಥ ನಿಜವೆನ್ನಿ। ಚೀಪುಗೂಲಿಯ ದೈವ ಪಾಡಿದರನ್ನ। ತಾಪತ್ರಯವಲ್ಲದೆ ಪೋಪದೆ ದುಷ್ಕರ್ಮ। ಭೂಪಾರದೊಳಗಿದ್ದ ಧೂಪದ ಹೊಗೆ ಸರ್ವ। ಲೇಪವಾದರು ತಾರಾಪಥಕೆ ಸಮವುಂಟೆ। ತ್ಯಾಪೆ ಕಂಗಾಲ ದೈವಗಳ ಪ್ರೀತಿ ಬಡಿಸಿದರು। ರೂಪ ಹೀನವಲ್ಲದೆ ಆಪತ್ತು ಹೋಗದಯ್ಯಾ। ಆಪನ್ನಪಾಲಾ ನಮ್ಮ ವಿಜಯವಿಠ್ಠಲಸಪುತ। ದ್ವೀಪಾಧಿ(ಪತಿ) ಪ ಎಂದು ಧೃಡವಾಗಿನಂಬು ಮನವೆ। (ಪಾಠಾಂತರ) ದ್ವೀಪವನಧಿ ಪತಿ ಸರ್ವಲೋಕಾಧಿಪನೆಂದು ನಂಬು ಮನವೆ ॥೫॥

**ಜತೆ**

ಹಕ್ಕಲ ದೈವಗಳ ಹಾದಿಗೆ ಬೇಲಿ ಬಡದು ।
ರಕ್ಕಸಾಂತಕ ವಿಜಯವಿಠ್ಠಲನ್ನ ಕೊಂಡಾಡು ॥೬॥



## ಸುಳಾದಿ-೫೮

ಹೊಲೆಯ (ದುಷ್ಟ ಗುಣಗಳ) ತ್ಯಜನಮಾಡಿ ಹೊಲತಿಯಾಗುವದು ಬಿಡು.
ಪತ್ಯಂತರ್ಗತ ಪರಮಾತ್ಮನ ಭಜನೆ ಮಾಡು.

### ರಾಗ- ಭೈರವಿ ಧ್ರುವತಾಳ

ಹೊಲತಿ ಮತ್ತಾವಳೊ ಹೊಲಗೇರಿಯೊಳಗಿಲ್ಲ। ಹೊಲಗೇರಿಯೊಳಗಿದ್ದ ಹೊಲೆ ಹೊಲತೆ ಎಲ್ಲ। ಕುಲವೇ ಅವಳಾದರು ಹಳಿಯುವ (ಹಳುವ) ದಿನ್ನ್ಯಾಕೆ ಆವಳು। ಒಳಗೆ ಬಾರಳು ನಮ್ಮೊಳಗೆ ತಿರುಗಬಲ್ಲಳೀ। ಕಲ ಕಾಲವಾಗಿ ನಮ್ಮ ಬಳಿಯಲ್ಲಿ ಒಂದರ। ಘಳಿಗೆ ಬಿಡದಲೆ ಮಗ್ಗಲ ಒಳಗಾಡುವಳೂ। ಹೊಲೆ ಗಲೆಸುವಳವಳು ಅಗಲದೆ ಇಪ್ಪಳು ಸರ್ವ। ಕುಲ ಕೋಟಿಗಳ ಕೇವಲವಾಗಿ ನಿತ್ಯಾನಿತ್ಯ। ಸುಲಭವಾಗಿಪ್ಪ ಕರತಳದೊಳಗುಳ್ಳ ಮುಕುತಿ। ಬಲು ದೂರವಾಗಿ ನರಕಕ್ಕಿಳಿಯುವಂತೆ ಮಾಡುವಳೂ। ಇಳಿಯೊಳಗೆ ಮಹಾ ಹೊಲತಿಯ ನಡತಿಯ। ನೆಲಿಯ ತಿಳಿದು ಸ್ನೇಹ ಬಳಿಸಿರೊ ಸಜ್ಜನರು। ಬಲುದೈವ ವಿಜಯವಿಠ್ಠಲನ ಪದಾಬ್ಜಕೆ (ಭಕ್ತಿ) ಎಳಿಯದವಳು ಶುದ್ಧ ಹೊಲತಿಕಾಣಿರೊ ನಿತ್ಯ ॥೧॥

### ಮಟ್ಟತಾಳ

ಮಕ್ಕಳ ಬಲುಮೆಯಲ್ಲಿ ಗಂಡನ ಪಾದದಲ್ಲಿ। ಭಕ್ತಿ ಮಾಡದವಳು ಅವಳೇ ಬಲು ಹೊಲತಿ। ರೊಕ್ಕ ಬಡ್ಡಿಗೆ ಕೊಟ್ಟು ವ್ಯವಹಾರ ಮಾಡುವ। ನಿಕ್ಕರುಣಿಯಾಗಿ ತಿರುಗುವಳು ಹೊಲತಿ। ನಕ್ಕು ನಾಚಿಗೆ ಬಿಟ್ಟು ಕಂಡಲ್ಲಿ ಚರಿಸುವ। ರಕ್ಕಸ ಮನದಲ್ಲಿ ಇಪ್ಪುವಳು ಹೊಲತಿ। ರಕ್ಕಸಾಂತಕ ನಮ್ಮ ವಿಜಯವಿಠ್ಠಲ ಹರಿಯ। ಭಕ್ತರಲ್ಲಿ ದ್ವೇಷ ಮಾಡುವವಳೆ ಹೊಲತಿ ॥೨॥

### ತ್ರಿವಿಡಿತಾಳ

ಪಂಕ್ತಿಯೊಳಗೆ ಪ್ರಾಪಂಚದವಳೆ ಹೊಲತಿ। ವಂತು ವಾಸ್ಯ ಇಕ್ಕುವಳೇ ಹೊಲತಿ। ಕಾಂತ ಗಂಜದವಳೇ ಮಹಾ ಹೊಲತಿ। ಮಂತ್ರ

ಉಪದೇಶವಿಲ್ಲದವಳೇ ಹೊಲತಿ। ಚಿಂತಿಸಿ ಪರರಿಗೆ ಕುದಿವಳೆ ಹೊಲತಿ। ಶಾಂತ ಮೂರುತಿ ನಮ್ಮ ವಿಜಯ ವಿಠ್ಠಲನಂಘ್ರಿ ಸಂತತ ನೆನಿಯದವಳೇ ಹೀನ ಹೊಲತಿ ॥೩॥

## ಅಟ್ಟತಾಳ

ಮದ್ದಿಕ್ಕಿ ಜನರ ಕೊಲ್ಲುವಳೇ ಹೊಲತಿ। ಇದ್ದು ಇಲ್ಲವೆಂದು ನುಡಿವಳೇ ಹೊಲತಿ। ಸಿದ್ಧವಾದದ್ದು ಕೆಡಿಸುವಳೆ ಹೊಲತಿ। ಸುದ್ಧಿಗೆ ಕಿವಿ ಜೋತು ಪೋಗುವಳೆ ಹೊಲತಿ। ನಿದ್ರಿಯಲ್ಲಿ ಆಸಕ್ತಳೆ ಕೆಟ್ಟ ಹೊಲತಿ। ಮುದ್ರಾಂಕಿತ ಇಲ್ಲದವಳೆ ಹೊಲತಿ। ಕದ್ದು ಬಾಯಿ ಸವಿ ತಿಂಬವಳೆ ಹೊಲತಿ। ಬುದ್ಧಿ ಸ್ಥಿರ ಇಲ್ಲದವಳೂ ಹೊಲತಿ। ಸಿದ್ಧ ಮಹಿಮಸ್ವಾಮಿ ವಿಜಯವಿಠ್ಠಲ ಹರಿಯ। ಸದ್ಭಕ್ತಿ ಇಲ್ಲದವಳೀಗ ಹೊಲತಿ ॥೪॥

## ಆದಿತಾಳ

ವೈಷ್ಣವ ಜ್ಞಾನ ಅರಿಯದವಳೇ ಹೊಲತಿ। ಶಿಷ್ಟಾಚಾರವ ಬಿಟ್ಟವಳೇ ಹೊಲತಿ। ಕೆಟ್ಟವರ ಸಂಗ ತಿರುಗವಳೇ ಹೊಲತಿ। ಮಟ್ಟಾಗಿ ಸಂಸಾರ ಮಾಡದವಳೇ ಹೊಲತಿ। ಹೊಟ್ಟೆಗೋಸುಗ ಸತ್ಕರ್ಮ ಬಿಡುವಳೇ ಹೊಲತಿ। ಅಟ್ಟು ಹಾಕುವೆನೆಂಬ ಸೊಲ್ಲಿನವಳೇ ಹೊಲತಿ। ನಿಷ್ಠುರ ವಚನವ ಆಡುವಳೇ ಹೊಲತಿ। ಪುಟ್ಟಿದವರ ಮನಿಗೆ ಅಪಕೀರ್ತಿ ತರುವಳೆ ಹೊಲತಿ। ದಿಟ್ಟ ಮೂರುತಿ ನಮ್ಮ ವಿಜಯವಿಠ್ಠಲನ್ನ। ಪಟ್ಟಣ ಸೇರುವಂಥ ಮನಮಾಡದವಳೆ ಹೊಲತಿ ॥೫॥

## ಜತೆ

ಸಂತತ ನೆಸಗಿದ ಕರ್ಮ ತನ್ನ ಪತಿಯ ।
ಕಾಂತ ವಿಜಯವಿಠ್ಠಲಗೀಯದವಳೆ ಹೊಲತಿ ॥೬॥



## ಸುಳಾದಿ-೩೦

ಉತ್ತುಮವಾದ ಸದ್ಗುಣಗಳನ್ನು ಬಿಟ್ಟುಬಿಡುವವ. ಮತ್ತು ದೇವರ ಪಾದದಲ್ಲಿ ಸದ್ಭಕ್ತಿ ಮಾಡದವನೆ ಹೊಲಿಯ.

### ರಾಗ- ಶಂಕರಾಭರಣ ಧ್ರುವತಾಳ

ಹೊಲಿಯನಾವನೊ ಈ ಕಲಿಯುಗದೊಳಗೆ ನಿ। ಶ್ಚಲವ ತಿಳಿವದು ಸುಲಭ ಮಾನವರು। ಒಲಿದು ಕೇಳುವದು ಚಂಚಲಮನ ಮಾಡದಲೆ। ಫಲಿತಾರ್ಥವಿದು ಹಂಬಲಿಸೋದು ಸತತದಲ್ಲಿ। ಹಲವು ಮಾತೇನು ನಿರ್ಮಳನಾಗಿ ಕೋಪವ। ಕಳೆಯಲರಿಯದವ ಹೊಲೆಯ ಶುದ್ಧ ಹೊಲೆಯ। ಕಳವು ಮತ್ತೊಂದು ವಾರ್ತೆ ಘಳಿಕೆಯಾಗದ ಮುಶಿ। ಕಲಕಾಲ (ವಾಗಿ) ಬಿಡದಲೆ ಆಡುವವನು ಹೊಲೆಯ। ಘಳಿಗೆ ತೊಲಗದವರ ಬಳಿಯಲಿ ನಿರಂತರ। ಸುಳಿದಾಡುವನು ಕೇವಲ ಅನಾಚಾರಿ ಹೊಲೆಯ। ಹಲವರ ಕೂಡಲಿಟ್ಟು ಇಳಿಯಸುರನು ನಿತ್ಯ। ಹಲ ಧರ್ಮವನ್ನು ಮಾಡಿ ಬೆಳಸು ಸವಿವ ಹೊಲೆಯ। ಬಳಗ ಬರಲು ಬಿಟ್ಟು ಒಳಗುಂಬವನು ಹೊಲೆಯ। ಕುಲಗೇಡಿಯಾಗಿ ವಂಶಾವಳಿಯ ಕೆಡಿಸುವ ಹೊಲೆಯ। ಮಲಗಿದವರ ಮೋಸಗೊಳಿಸಿ ಮನಿಯ ಬದಕು। ಕಳೆದುಕೊಂಡು ಪೋಗುವ ಖಳನೆ ಎಂದಿಗೂ ಹೊಲೆಯ। ಇಳಿಯ ವಲ್ಲಭ ನಮ್ಮ ವಿಜಯವಿಠ್ಠಲರೇಯನ। ತಿಳಿದು ಪೂಜಿಸದವ ಮಲಭಕ್ಷಿಸುವ ಹೊಲೆಯ॥೧॥

### ಮಟ್ಟತಾಳ

ಅನ್ನದಾನವನ್ನು ಮಾಡದಿದ್ದವ ಹೊಲೆಯ। ಹೊನ್ನು ಹಣವನ್ನು ಕೂಡಿಸುವನು ಹೊಲೆಯ। ಕನ್ನಿಕೆಯನ್ನು ಮಾರಿಕೊಂಬುವನೆ ಹೊಲೆಯ। ಹೆಣ್ಣಿನ ಬಣ್ಣಕ್ಕೆ ಸೋಲುವವನೆ ಹೊಲೆಯ। ತನ್ನ ಪರಾಕ್ರಮವ ಪೇಳುವನೆ

ಹೊಲೆಯ। ಮನ್ನಣೆ ಮಾಡಲು ಹಿಗ್ಗುವನೆ ಹೊಲೆಯ। ಅನ್ನದಗೋಸುಗ ಹೊತ್ತುಗಳೆವ ಹೊಲೆಯ। ಅನ್ಯಜನರ ನೋಡಿ ಬಳಲುವನೆ ಹೊಲಿಯ। ಬೆನ್ನ ಬಿದ್ದವನ ಒಪ್ಪಿಸಿಕೊಡುವ ಹೊಲೆಯ। ಮಣ್ಣುಕೂಡಿಸಿ ಧಾನ್ಯ ಮಾರುವನೆ ಹೊಲಿಯ। ಎನ್ನದು ಎಂದೆಂಬೊ ಸೊಲ್ಲು ಪೇಳುವ ಹೊಲಿಯ। ಪನ್ನಗ ಶಯನ ವಿಜಯ ವಿಠ್ಠಲನ್ನ। ಸನ್ನುತಿಸಿ ಜ್ಞಾನ ಪಡಿಯದಿದ್ದವ ಹೊಲಿಯ ॥೨॥

## ತ್ರಿವಿಡಿತಾಳ

ಶ್ರವಣ ಕೇಳುತಲೆದ್ದು ಪೊಗುವವನೆ ಹೊಲಿಯ। ಅವಸರದೊಳಗೆ ಕೈ ಬಿಡುವವನೆ ಹೊಲಿಯ। ನವನೀತ ವಿಕ್ರಯಕ್ಕೆ ಕೊಡುವ ಭೂಸುರ ಹೊಲಿಯ। ಯವನನಲ್ಲಿ ಸೇವೆ ಬಯಿಪನು ಮಹಾಹೊಲಿಯ। ಕವಿಗಳ ಆವಾಗ ನಿಂದಿಸುವನೆ ಹೊಲಿಯ। ಪವನ ಮತದಲ್ಲಿ ಇರದವನೆ ಹೊಲಿಯ। ದಿವದಲ್ಲಿ ಸಂಭೋಗ ಮಾಡುವವನೆ ಹೊಲಿಯ। ವಿವಹ ಕೆಡಿಸುವನು ಖೋಡಿ ಹೊಲಿಯ। ಶಿವನು ತಾನೆಂದು ಪೇಳುವನು ತಾಮಸ

ಪಡಿಯದಿದ್ದವ ಹೊಲಿಯ ॥೨॥

ತ್ರಿವಿಡಿತಾಳ

ಶ್ರವಣ ಕೇಳುತಲೆದ್ದು ಪೊಗುವವನೆ ಹೊಲಿಯ। ಅವಸರದೊಳಗೆ ಕೈ ಬಿಡುವವನೆ ಹೊಲಿಯ। ನವನೀತ ವಿಕ್ರಯಕ್ಕೆ ಕೊಡುವ ಭೂಸುರ ಹೊಲಿಯ। ಯವನನಲ್ಲಿ ಸೇವೆ ಬಯಿಪನು ಮಹಾಹೊಲಿಯ। ಕವಿಗಳ ಆವಾಗ ನಿಂದಿಸುವನೆ ಹೊಲಿಯ। ಪವನ ಮತದಲ್ಲಿ ಇರದವನೆ ಹೊಲಿಯ। ದಿವದಲ್ಲಿ ಸಂಭೋಗ ಮಾಡುವವನೆ ಹೊಲಿಯ। ವಿವಹ ಕೆಡಿಸುವನು ಖೋಡಿ ಹೊಲಿಯ। ಶಿವನು ತಾನೆಂದು ಪೇಳುವನು ತಾಮಸ

[illegible]

ಇಲ್ಲದಿದ್ದವ ಹೊಲಿಯ। ಕಿವಿ ಮೊದಲಾದಲ್ಲಿ ತುಲಸಿ ಇಡದವ ಹೊಲಿಯ। ಜವನ ಭೀತಿಯ ಕೇಳಿ ಎಚ್ಚರಿಯದವ ಹೊಲಿಯ। ಸವತಿಯ ಮೇಲೆ ಮಗಳ ಕೊಡುವನೆ ಹೊಲಿಯ। ಬವರದಲ್ಲಿ ನೃಪನ ಒಪ್ಪಿಸಿ ಬಾಹನೆ ಹೊಲಿಯ। ಕವಳ ಎತ್ತುವಾಗ ಸುಮ್ಮನಿಪ್ಪನೆ ಹೊಲಿಯ। ಗವ ಹೂಡಿ ಬದಕು ಮಾಡಿದವನೆ ಹೊಲಿಯ। ನವದ್ವೇಷ ತಾಳಿ ಇದ್ದವನೆ ಹೊಲಿಯ। ಪವಮಾನನುತ ನಮ್ಮ ವಿಜಯ ವಿಠ್ಠಲನಂಘ್ರಿ ನವ ಭಕುತಿಯಿಂದ ಅರ್ಚಿಸಿದವ ಹೊಲಿಯ ॥೩॥

ಹೊಲೆಯ। ಮನ್ನಣೆ ಮಾಡಲು ಹಿಗ್ಗುವನೆ ಹೊಲೆಯ। ಅನ್ನದಗೋಸುಗ ಹೊತ್ತುಗಳೆವ ಹೊಲೆಯ। ಅನ್ಯಜನರ ನೋಡಿ ಬಳಲುವನೆ ಹೊಲಿಯ। ಬೆನ್ನ ಬಿದ್ದವನ ಒಪ್ಪಿಸಿಕೊಡುವ ಹೊಲೆಯ। ಮಣ್ಣುಕೂಡಿಸಿ ಧಾನ್ಯ ಮಾರುವನೆ ಹೊಲಿಯ। ಎನ್ನದು ಎಂದೆಂಬೊ ಸೊಲ್ಲು ಪೇಳುವ ಹೊಲಿಯ। ಪನ್ನಗ ಶಯನ ವಿಜಯ ವಿಠ್ಠಲನ್ನ। ಸನ್ನುತಿಸಿ ಜ್ಞಾನ ಪಡಿಯದಿದ್ದವ ಹೊಲಿಯ ॥೨॥

### ತ್ರಿವಿಡಿತಾಳ

ಶ್ರವಣ ಕೇಳುತಲೆದ್ದು ಪೊಗುವವನೆ ಹೊಲಿಯ। ಅವಸರದೊಳಗೆ ಕೈ ಬಿಡುವವನೆ ಹೊಲಿಯ। ನವನೀತ ವಿಕ್ರಯಕ್ಕೆ ಕೊಡುವ ಭೂಸುರ ಹೊಲಿಯ। ಯವನನಲ್ಲಿ ಸೇವೆ ಬಯಿಪನು ಮಹಾಹೊಲಿಯ। ಕವಿಗಳ ಆವಾಗ ನಿಂದಿಸುವನೆ ಹೊಲಿಯ। ಪವನ ಮತದಲ್ಲಿ ಇರದವನೆ ಹೊಲಿಯ। ದಿವದಲ್ಲಿ ಸಂಭೋಗ ಮಾಡುವವನೆ ಹೊಲಿಯ। ವಿವಹ ಕೆಡಿಸುವನು ಖೋಡಿ ಹೊಲಿಯ। ಶಿವನು ತಾನೆಂದು ಪೇಳುವನು ತಾಮಸ ಹೊಲಿಯ। ಯುವತಿಯ ವಶದಲ್ಲಿ ಇಪ್ಪನೆ ಹೊಲಿಯ। ಸವಿಯೆಂದು ನೀರುಳ್ಳಿ ತಿಂಬುವನೆ ಹೊಲಿಯ। ರವಿ ಮೂಡಲು ಮಲಗಿ ಉಳ್ಳವನೆ ಹೊಲಿಯ। ಶವಕೇರಿಯೊಳಗಿರಲು ಭುಂಜಿಸುವನೆ ಹೊಲಿಯ। ಕಿವಿಗೊಟ್ಟುಕೊಂಡಿಯ ಕೇಳುವವನೆ ಹೊಲಿಯ ಅವನಿಯೊಳಗೆ ಕ್ಷಮೆ ಇಲ್ಲದಿದ್ದವ ಹೊಲಿಯ। ಕಿವಿ ಮೊದಲಾದಲ್ಲಿ ತುಲಸಿ ಇಡದವ ಹೊಲಿಯ। ಜವನ ಭೀತಿಯ ಕೇಳಿ ಎಚ್ಚರಿಯದವ ಹೊಲಿಯ। ಸವತಿಯ ಮೇಲೆ ಮಗಳ ಕೊಡುವನೆ ಹೊಲಿಯ। ಬವರದಲ್ಲಿ ನೃಪನ ಒಪ್ಪಿಸಿ ಬಾಹನೆ ಹೊಲಿಯ। ಕವಳ ಎತ್ತುವಾಗ ಸುಮ್ಮನಿಪ್ಪನೆ ಹೊಲಿಯ। ಗವ ಹೂಡಿ ಬದಕು ಮಾಡಿದವನೆ ಹೊಲಿಯ। ನವದ್ವೇಷ ತಾಳಿ ಇದ್ದವನೆ ಹೊಲಿಯ। ಪವಮಾನನುತ ನಮ್ಮ ವಿಜಯ ವಿಠ್ಠಲನಂಘ್ರಿ ನವ ಭಕುತಿಯಿಂದ ಅರ್ಚಿಸಿದವ ಹೊಲಿಯ ॥೩॥

## ಸುಳಾದಿ-೩೦

ಉತ್ತುಮವಾದ ಸದ್ಗುಣಗಳನ್ನು ಬಿಟ್ಟುಬಿಡುವವ. ಮತ್ತು ದೇವರ ಪಾದದಲ್ಲಿ ಸದ್ಭಕ್ತಿ ಮಾಡದವನೆ ಹೊಲಿಯ.

### ರಾಗ- ಶಂಕರಾಭರಣ ಧ್ರುವತಾಳ

ಹೊಲಿಯನಾವನೊ ಈ ಕಲಿಯುಗದೊಳಗೆ ನಿ। ಶ್ಚಲವ ತಿಳಿವದು ಸುಲಭ ಮಾನವರು। ಒಲಿದು ಕೇಳುವದು ಚಂಚಲಮನ ಮಾಡದಲೆ। ಫಲಿತಾರ್ಥವಿದು ಹಂಬಲಿಸೋದು ಸತತದಲ್ಲಿ। ಹಲವು ಮಾತೇನು ನಿರ್ಮಳನಾಗಿ ಕೋಪವ। ಕಳೆಯಲರಿಯದವ ಹೊಲೆಯ ಶುದ್ಧ ಹೊಲೆಯ। ಕಳವು ಮತ್ತೊಂದು ವಾರ್ತಿ ಘಳಿಕೆಯಾಗದ ಪುಶಿ। ಕಲಕಾಲ (ವಾಗಿ) ಬಿಡದಲೆ ಆಡುವವನು ಹೊಲೆಯ। ಘಳಿಗೆ ತೊಲಗದವರ ಬಳಿಯಲಿ ನಿರಂತರ। ಸುಳಿದಾಡುವನು ಕೇವಲ ಅನಾಚಾರಿ ಹೊಲೆಯ। ಹಲವರ ಕೂಡಲಿಟ್ಟು ಇಳಿಯಸುರನು ನಿತ್ಯ। ಹಲ ಧರ್ಮವನ್ನು ಮಾಡಿ ಬೆಳಸು ಸವಿವ ಹೊಲೆಯ। ಬಳಗ ಬರಲು ಬಿಟ್ಟು ಒಳಗುಂಬವನು ಹೊಲೆಯ। ಕುಲಗೇಡಿಯಾಗಿ ವಂಶಾವಳಿಯ ಕೆಡಿಸುವ ಹೊಲೆಯ। ಮಲಗಿದವರ ಮೋಸಗೊಳಿಸಿ ಮನಿಯ ಬದಕು। ಕಳೆದುಕೊಂಡು ಪೋಗುವ ಖಳನೆ ಎಂದಿಗೂ ಹೊಲೆಯ। ಇಳಿಯ ವಲ್ಲಭ ನಮ್ಮ ವಿಜಯುವಿಠ್ಠಲರೇಯುನ। ತಿಳಿದು ಪೂಜಿಸದವ ಮಲಭಕ್ಷಿಸುವ ಹೊಲೆಯ॥೧॥

### ಮಟ್ಟತಾಳ

ಅನ್ನದಾನವನ್ನು ಮಾಡದಿದ್ದವ ಹೊಲೆಯ। ಹೊನ್ನು ಹಣವನ್ನು ಕೂಡಿಸುವನು ಹೊಲೆಯ। ಕನ್ನಿಕೆಯನ್ನು ಮಾರಿಕೊಂಬುವನೆ ಹೊಲೆಯ। ಹೆಣ್ಣಿನ ಬಣ್ಣಕ್ಕೆ ಸೋಲುವವನೆ ಹೊಲೆಯ। ತನ್ನ ಪರಾಕ್ರಮವ ಪೇಳುವನೆ

ಹೊಲೆಯ। ಮನ್ನಣೆ ಮಾಡಲು ಹಿಗ್ಗುವನೆ ಹೊಲೆಯ। ಅನ್ನದಗೋಸುಗ ಹೊತ್ತುಗಳೆವ ಹೊಲೆಯ। ಅನ್ಯಜನರ ನೋಡಿ ಬಳಲುವನೆ ಹೊಲಿಯ। ಬೆನ್ನ ಬಿದ್ದವನ ಒಪ್ಪಿಸಿಕೊಡುವ ಹೊಲೆಯ। ಮಣ್ಣುಕೂಡಿಸಿ ಧಾನ್ಯ ಮಾರುವನೆ ಹೊಲಿಯ। ಎನ್ನದು ಎಂದೆಂಬೊ ಸೊಲ್ಲು ಪೇಳುವ ಹೊಲಿಯ। ಪನ್ನಗ ಶಯನ ವಿಜಯ ವಿಠ್ಠಲನ್ನ। ಸನ್ನುತಿಸಿ ಜ್ಞಾನ ಪಡಿಯದಿದ್ದವ ಹೊಲಿಯ ॥೨॥

## ತ್ರಿವಿಡಿತಾಳ

ಶ್ರವಣ ಕೇಳುತಲೆದ್ದು ಪೊಗುವವನೆ ಹೊಲಿಯ। ಅವಸರದೊಳಗೆ ಕೈ ಬಿಡುವವನೆ ಹೊಲಿಯ। ನವನೀತ ವಿಕ್ರಯಕ್ಕೆ ಕೊಡುವ ಭೂಸುರ ಹೊಲಿಯ। ಯವನನಲ್ಲಿ ಸೇವೆ ಬಯಿಪನು ಮಹಾಹೊಲಿಯ। ಕವಿಗಳ ಆವಾಗ ನಿಂದಿಸುವನೆ ಹೊಲಿಯ। ಪವನ ಮತದಲ್ಲಿ ಇರದವನೆ ಹೊಲಿಯ। ದಿವದಲ್ಲಿ ಸಂಭೋಗ ಮಾಡುವವನೆ ಹೊಲಿಯ। ವಿವಹ ಕೆಡಿಸುವನು ಖೋಡಿ ಹೊಲಿಯ। ಶಿವನು ತಾನೆಂದು ಪೇಳುವನು ತಾಮಸ ಹೊಲಿಯ। ಯುವತಿಯ ವಶದಲ್ಲಿ ಇಪ್ಪನೆ ಹೊಲಿಯ। ಸವಿಯೆಂದು ನೀರುಳ್ಳೆ ತಿಂಬುವನೆ ಹೊಲಿಯ। ರವಿ ಮೂಡಲು ಮಲಗಿ ಉಳ್ಳವನೆ ಹೊಲಿಯ। ಶವಕೇರಿಯೊಳಗಿರಲು ಭುಂಜಿಸುವನೆ ಹೊಲಿಯ। ಕಿವಿಗೊಟ್ಟುಕೊಂಡಿಯ ಕೇಳುವವನೆ ಹೊಲಿಯ ಆವನಿಯೊಳಗೆ ಕ್ಷಮೆ ಇಲ್ಲದಿದ್ದವ ಹೊಲಿಯ। ಕಿವಿ ಮೊದಲಾದಲ್ಲಿ ತುಲಸಿ ಇಡದವ ಹೊಲಿಯ। ಜವನ ಭೀತಿಯ ಕೇಳಿ ಎಚ್ಚರಿಯದವ ಹೊಲಿಯ। ಸವತಿಯ ಮೇಲೆ ಮಗಳ ಕೊಡುವನೆ ಹೊಲಿಯ। ಬವರದಲ್ಲಿ ನೃಪನ ಒಪ್ಪಿಸಿ ಬಾಹನೆ ಹೊಲಿಯ। ಕವಳ ಎತ್ತುವಾಗ ಸುಮ್ಮನಿಪ್ಪನೆ ಹೊಲಿಯ। ಗವ ಹೂಡಿ ಬದಕು ಮಾಡಿದವನೆ ಹೊಲಿಯ। ನವದ್ವೇಷ ತಾಳಿ ಇದ್ದವನೆ ಹೊಲಿಯ। ಪವಮಾನನುತ ನಮ್ಮ ವಿಜಯ ವಿಠ್ಠಲನಂಘ್ರಿ ನವ ಭಕುತಿಯಿಂದ ಅರ್ಚಿಸಿದವ ಹೊಲಿಯ ॥೩॥

### ಅಟ್ಟತಾಳ

ಕೃತು ಮಾಡುವಲ್ಲಿ ಪೋಗದಿದ್ದವ ಹೊಲಿಯ। ಸತಿ ಪತಿಗೆ ಭೇದವಿಕ್ಕುವನೆ ಹೊಲಿಯ। ಋತು ಕಾಲದಲ್ಲಿ ಬೇರೆ ಇಪ್ಪನು ಹೊಲಿಯ। ಗತಿಗೆಟ್ಟವರ ಪೋಗಲಾಡುವನೆ ಹೊಲಿಯ। ಪಿತಾಮಾತಾ ಗುರುಗಳ ಬೈವವನು ಹೊಲಿಯ। ಯತಿಗಳ ನಿಂದಿಸುವನು ಹೇಡಿ ಹೊಲಿಯ। ಹಿತ ಮಾಡಿದವರಿಗೆ ಪ್ರತಿಕೂಲನು ಹೊಲಿಯ। ಮತಿಯಲಿ ಸಾಲ ತಂದು ತಿದ್ದವನೆ ಹೊಲಿಯ। ಕ್ಷಿತಿಯೊಳು ಅಪಕೀರ್ತಿ ಹೊತ್ತವನು ಹೊಲಿಯಾ। ರತಿ ಪತಿಪಿತ ನಮ್ಮ ವಿಜಯ ವಿಠ್ಠಲನ ಬಿಟ್ಟು ಸತತ ಸಂಸಾರದಾಸಕ್ತನು ಹೊಲಿಯ ॥೪॥

### ಆದಿತಾಳ

ಬಿಸಿಜ ನಾಭನ ದಿವಸ ಮಾಡದಿದ್ದವ ಹೊಲಿಯ। ನಸಲಲಿ ಅನ್ಯಪುಂಡ್ರವ ಪಚ್ಚಿಕೊಂಡವ ಹೊಲಿಯ। ಅಶನ ಘಾತಕನಾಗಿ ತಿರುಗುವನು ಹೊಲಿಯ। ಪಶು ಶಿಶುಗಳ ಒದ್ದು ನೂಕುವನು ಹೊಲಿಯ। ಹಸಿದು ಬಂದವರನ್ನು ಕಳುಹುವನು ಹೊಲಿಯ। ಸೊಸಿಮಕ್ಕಳವಾವೆ ಅರಿಯದಿದ್ದವ ಹೊಲಿಯ। ರಸ ರುಚಿ ಬಿಡುವ ವ್ರತವ ಮಾಡದವ ಹೊಲಿಯ। ಹಸನಾದ ಹರಿಪಾದ ತೀರ್ಥಕೊಳದವ ಹೊಲಿಯ। ಪಸರಿಸಿ ಅನ್ಯಾರ್ಪಿತದನ್ನ ಉಂಡವ ಹೊಲಿಯು। ವಸುಧಿ ಲವಣವನೆ ಕೊಂಬುವವನೆ ಹೊಲಿಯ। ನಿಶದಲ್ಲಿ ಸ್ನಾನಾದಿ ಮಾಡುವವನೆ ಹೊಲಿಯ। ಅಸುರಾರಿ ವಿಜಯ ವಿಠ್ಠಲ ಪರದೈವವೆಂದು। ಕುಶಲದಲಿ ಹಾಡಿ ಪಾಡದವನು ಹೊಲಿಯ ॥೫॥

### ಜತೆ

ಇದರೊಳು ಕ್ರಮ ಉಂಟು ವಿಜಯ ವಿಠ್ಠಲನ್ನ ।
ಪದಗಳರ್ಚಿಸದವ । ಎಂದಿಗೂ ನಿಜ ಹೊಲಿಯ ॥೬॥



# ಕಾಮಕ್ರೋಧಾದಿಗಳನ್ನು ಬಿಡುವಿಕೆ

## ಸುಳಾದಿ-೩೧

ಕಾಮಕ್ರೋಧಾದಿಗಳನ್ನು ಬಿಟ್ಟು ಇಂದ್ರಿಯನಿಗ್ರಹಪೂರ್ವಕ ಮನೋನಿಗ್ರಹವೇ ಮುಖ್ಯ. ಈ ಮನಸ್ಸೇ ದೇಹಾಖ್ಯ ರಥಕ್ಕೆ ಸಾರಥಿ.

**ರಾಗ- ತೋಡಿ ಝಂಪೆ ತಾಳ**

ಮನವೆ ನೀ ನೆನೆಸದಿರು ಮನಸಿಜನ ಮರುಳಾಟ। ಕನಸಿನೊಳಗಾದರೂ ಎಂದೆಂದಿಗೂ। ಧನ ಸೂರೆ ಮತಿಹಾನಿ ಗತಿಕಂಡಲ್ಲಿ ಕೆಡಗು। ಜನ ಸುಡಿಗೆ ಕುಳಿತಕಡೆ ಜಗದೊಳಗೆ। ತನು ಶುದ್ಧವಾಗದು ಎಣಿಸುವನು ಯಮರಾಯ। ಇನ ಶಶಿ ಉಳ್ಳ ಪರಿಯಂತ ನರಕಾ। ಗುಣಿಸು ನಿನ್ನೊಳು। (ವ) ಸು ಮನಸ ವಿಜಯ ವಿಠ್ಠಲ। ಘನ ಸುಲಭನೆಂದು ವಖ್ಖಣಿಸು ದಾಸನೆನಿಸು ॥೧॥

**ಮಟ್ಟತಾಳ**

ದಶೇಂದ್ರಿಯಗಳ ನಿನ್ನೊಶ ಮಾಡಿಕೊಂಡು। ದಶದಿಕ್ಕಿಗೆ ವೈದು ಹಸಗೆಡಿಸಿ ದು। ವ್ಯಸನಕ್ಕೆ ಹಾಕದೆ ಹಸನಾಗಿ ಇರು ಸ್ವ ವಶ ವಿಜಯ ವಿಠ್ಠಲ ಅಸಮ ದೈವವೆಂದು ॥೨॥

**ತ್ರಿವಿಡಿತಾಳ**

ನೀನೆ ಮಾನುಷ್ಯರು ಏನೇನು ಮಾಡುವ। ಸ್ನಾನಾದಿಗಳಿಗೆ ಪ್ರಧಾನವೆ ಮನವೆ। ನೀನೆ ನಿಲ್ಲಲು ಎನಗೆ ಧ್ಯಾನ ಪೂರ್ವಕದಿಂದ। ಜ್ಞಾನಕ್ಕೆ ಅಧಿಕಾರಿ ಎನಿಸುವೆನೊ। ನೀನೆ ಸಕಲೇಂದ್ರಿಗಳಿಗರಸೆಂದು ಪೇಳಲು। ನೀನೇ ನೀನೇ ಎಂದು ಸ್ತುತಿಸಿದೆನೊ। ನೀ ನೊಲಿದು ಸರ್ವಜ್ಞ ವಿಜಯ ವಿಠ್ಠಲನ್ನ। ಕಾಣಿಸುವದು ಎನ್ನ ಹೃದಯ ಮಧ್ಯದಲ್ಲಿ ॥೩॥

### ಅಟ್ಟತಾಳ

ಹುಲಿಯು ಕಟ್ಟಲಿಬಹುದು ಕಲಿಯು ಬಂಧಿಸಲಾಪೆ। ಜಲನಿಧಿಯೊಳು ಪೊಕ್ಕು ನೆಲೆಯ ತರಲಿ ಉಂಟು। ಸುಳಿಯುವ ಘಾಳಿಯನು ಹೊಕ್ಕಳಿಸಿ ತರಬಲಾಪೆ। ಕುಲಗಿರಿಗಳು ಪಿಡಿದೊಲಿದು ಅಲ್ಲಾಡಿಪೆ। ಒಳಗಿದ್ದ ಮನವೆ ನಿನ್ನಳವೀಗ ತಿಳಿಯದು। ಗೆಳೆಯ ನೀನಾಗು ಶುಭಾಂಗ ವಿಜಯ ವಿ। ಠ್ಠಲನ ಕೂಡ ಬೆರದಾಡು ಭರವಸ ಸಾರೂ ॥೪॥

### ಆದಿತಾಳ

ಕಾರಣ ಬಂಧ ಮೋಕ್ಷಕೆ। ಕಾರ್ಯ ಕಾರಣ ನೀನು। ಹಾರಿ ಹಾರಿ ಹೋಗದೆ। ಸೇರಿಕೊಂಡು ಎನ್ನೊಳು। ಪಾರಮಾರ್ಥವ ಬಯಿಸಿ। ವೀರ ವಿಜಯವಿಠ್ಠಲನ್ನ ಸೇರಿ ಸತತದಲ್ಲಿ ನೋಡು। ನೋಡು ನೋಡು ನೋಡು ನೋಡು ॥೫॥

### ಜತೆ

ಎತ್ತ ಪೋಗದಲೆ ಸಾರಥಿಯಾಗಿ ಅನುದಿನ ।
ಉತ್ತರ ವಿಜಯ ವಿಠ್ಠಲನಲ್ಲಿ ಸೇರುವ ॥೬॥



## ಸುಳಾದಿ-೬೨

ಕ್ರೋಧ (ಸಿಟ್ಟು) ಪರಿಹಾರ, ಉತ್ತಮರಲ್ಲಿ ಸರ್ವಥಾ ಕ್ರೋಧ ಮಾಡಕೂಡದು. ಇತ್ಯಾದಿ.

### ರಾಗ-ಸಾರಂಗ ಧ್ರುವತಾಳ

ವೇದ ಚತುರ ಶಾಸ್ತ್ರ ಪುರಾಣ ಸ್ಮೃತಿ ರಹಸ್ಯ। ಓದಿಕೊಂಡು ವಾದ ಮಾಡಿ ಜೈಸಿದರೇನು। ಓದನಾದಿ ಮುಂತಾದ ದಾನ ಧರ್ಮಂಗಳು ಅ।

ಗಾಢವಾಗಿ ನಿತ್ಯಮಾಡಿದರೇನೋ ಏನೊ। ಈ ಧಾರುಣಿಯೊಳಗಿದ್ದ ತೀರ್ಥ ತಿರುಗಿ। ಸಾಧು ಎನಿಸಿಕೊಂಡು ಖ್ಯಾತ ನಾದರೇನು। ಸಾಧಿಸಿ ನಾನಾ ವ್ರತ ದೇಹ ದಂಡಿಸಿ ವಿ। ರೋಧ ವಾಗದ ಕರ್ಮಮಾಡಲೇನು ಏನೇನೊ। ಆದಿ ಮೊದಲು ವಿಡಿದು ಒಂದೊಂದು ಬಿಡದೆ ಮಹಾ। ಸಾಧನ ಮಾಡಿ ಕೇವಲ ಸಿದ್ಧ ನಾದರೇನು। ಹಾದಿ ಯಾಗದು ಕಾಣೊ ವೈಕುಂಠಕ್ಕೆ। ಕ್ರೋಧವನ್ನು ತೊರಿಯದೆ ಆಚರಣೆ ಮಾಡಿದರು। ಮಾದಿಗ ತೀರ್ಥವನ್ನು ಮಾಡಿದಂತೆ। ಈ ದೇಹಿ ದೇಹಕ್ಕೆ ಅನಾದಿ ಕಾಲದಿಂದ। ಭೇದವನ್ನು ತಿಳಿದು ಮಮತೆ ತೊರೆದು। ಮೋದ ಚೇತನದಿಂದ ಚರಿಸುವನೆ ಧನ್ಯ। ಪ್ರಾಧಾನ್ಯ ಗ್ರಹಿಸಬೇಕು ಜಡಜೀವ ಸಂಯೋಗ। ಬೋಧ ಸಹನಶಕ್ತಿ ಅನುಭವವ। ಭಾದೆ ಬಡಿಸಿದರು ತಾಳುವದಂತಿರಲಿ। ಬೈದರೆ ಸುಮ್ಮನಿಪ್ಪ ಬಗೆ ಕೇಳಲೋ। ಈ ದೇಹದಿಂದ ಬಿದ್ದ ಛಾಯಕ್ಕೆ ಉಪದ್ರವ। ಆದರೆ ಗಾತ್ರಕ್ಕೆ ಕ್ಲೇಶ ವಹದೆ। ಶೋಧಿಸಿ ಗುಣಿಸಿ ನೋಡು ಬಿಂಬ ಪ್ರತಿಬಿಂಬ ಭಾವ। ಭೇದಾ ಭೇದದಿಂದ ಒಪ್ಪುತಿದಕೋ। ಓದಿ ಮರುಳಾದರೇನು ಎಲೊ ಮನವೆ ಇನಿತು ಮಾತ್ರ ವಾದರು ಸೈರಿಸದಿರಲು ನಿನಗೆ। ವೈದಿಕ ಮಾರ್ಗವೆಂತು ದೊರಕುವದೋ। ಮಾಧವ ಮೆಚ್ಚನು ಮನೋರಥ ಸಿದ್ಧಿಸದು। ಕ್ರೋಧ ತೊರೆದು ಹರುಷವಾಗ ತನಕ। ಮೇದಿನಿಯೊಳಗೊರ್ವ ನಾನಾರತ್ನಗಳಿಂದ। ವೇದಿ ಕಟ್ಟಿಸಿ ಗಂಗಾಮೃತ್ತಿಕೆ ಹರಹಿ। ವಾಧುರ್ಯ ನಿಗಮ ಮಂತ್ರ ಘೋಷಣೆ। ವಾದ್ಯ ಭವ್ಯನಾದದಿಂದಲಿ ದೈತ್ಯಖರ್ಜುರವ। ಪದಾರ್ಥ ಕಾಲ ದಿವಸ ಮಾನ್ಯ ಇಲ್ಲದಂತೆ। ಸಾಧಿಸಿ ಹಾಕಿದರುಫಲ ಪಲ್ಲೈಸೆ। ಭೂದೇವ ತತಿಗಳು ನಿತ್ಯಕೊಂಡಾಡಿ ಆ। ರಾಧನೆ ಮಾಡುವರೆ ಬಿಡು ಕೋಪವ। ಬೀದಿ ಬೀದಿ ತಿರುಗಿ ತತ್ವ ಕಂಡಲ್ಲಿ ಅನು। ವಾದ ಮಾಡಿದರೇನು ಬರಿದೆ ನಿನಗೆ। ಪಾದ ಮಸ್ತಕ ಪೂರ್ಣ ವಿಜಯ ವಿಠ್ಠಲ। ಮೈ ದೋರುವನೂ ನಾನುಡಿದದ್ದು ಬಿಡಲಾಗಿ ॥೧॥

## ಮಟ್ಟತಾಳ

ಎಲ್ಲ ರೋಗವನ್ನು ಕಳಕೊಂಡು ನಾಲಿಗೆ। ಮುಳ್ಳೂರಿಕೊಂಡ ತೆರದಂತಾಯಿತಲ್ಲೋ। ಹೊಲ್ಲೆ ಮನಸು ಕೇಳಿ ಹಿತವಾದ ಮಾತು। ಅಲ್ಲಿಗಲ್ಲಿಗೆ ಸರ್ವವು ತೊರೆದು ಈ ಕೋಪವನೆ। ಚೆಲ್ಲಿ ಬಿಡದಲಿಪ್ಪ ಭಾಗ್ಯವಾವದು ಕೇಳು। ಬಲ್ಲಿದತನವಲ್ಲ ಇದು ಬಂದಾಶ್ರಯಿಸೆ। ಎಲ್ಲ ತಿರುಗಿ ಬಂದು ಸೇರಿಕೊಳ್ಳುತಲಿಹವು। ಬಲ್ಲವರನ ಬಲ್ಲ ವಿಜಯ ವಿಠ್ಠಲರೇಯ। ಸೊಲ್ಲು ಲಾಲಿಸನೊ ಕೋಪವುಳ್ಳವ ತುತಿಸೆ ॥೨॥

## ತ್ರಿವಿಡಿತಾಳ

ಪಿತ್ರಕಾನನದೊಳಗೆ ಪ್ರಖ್ಯಾತವಾಗಿದ್ದ। ಉತ್ತಮ ಭೂರುಹ ಜನಿಸಲಾಗಲದಕೆ। ಪತ್ರ ಕುಸುಮ ಫಲ ನೋಡಲು ಒಂದೊಂದು। ಚಿತ್ರ ವಿಚಿತ್ರ ರಮ್ಯವಾಗಿದೆ। ತತ್ವಜ್ಞಾನಿ ಬಂದು ನೀಕ್ಷಿಸಿದ ಮೇಲೆ। ಸ್ತೋತ್ರವ ಮಾಡಿ ಫಲ ತೆಗೆದುಕೊಂಡು। ತುತ್ತು ಮಾಡಿ ಸವಿದುಂಡು ಜಗದೊಳು। ಕೀರ್ತನೆ ಮಾಡುವನೆ ಎಲೇ ಮನಸೇ। ಹತ್ತಿಲಿ ಸೇರದಲೆ ಅಸೂಯನಾಗಿ, ದೂ। ರತ್ತ ಪೋಗುವನೊ ಪ್ರೀತಿಯ ಬಿಡನೊ। ಇತ್ತ ಲಾಲಿಸು ಕೋಪ ಹಳಿ ನೂಕು ಸುಡು ನು। ಗ್ಗೊತ್ತು ಕಾಲಲಿ ಮೆಟ್ಟು ಕುಟ್ಟು ಕಳಿಯೋ। ಕತ್ತರಿಸು ಕಡಿಗೆ ಹಾಕು ಹಿಟ್ಟು ಗಳಿಯೋ। ಮುತ್ತೊ ಕೆಡಹೊ ಕಟ್ಟೋ ಕೊರಿಯೊ ಕೊಲ್ಲೋ ಅರಿಯೋ। ಕಿತ್ತು ಮುರಿಯೋ ಹೊಡಿಯೊ ಹರದಿಕ್ಕು ಅದರ ಅ। ನರ್ಥ ಮಾಡೆಲೊ ಗುದ್ದು ಎಳಿಯೊ ಶಳಿಯೊ। ಹೊತ್ತು ಇಸು ಹೊಯ್ಯೋ ಚಿವಿಟು ತಿವಿಯೊ। ಕಿತ್ತುಬೇರು ಅಟ್ಟು ಹಾರಿಸು ಮುಣಗಿಸು। ಅರ್ತಿಯ ಕೊಡು ಶೋಷಿಸು ಹೂಳು ಬಳಲಿಸು। ಹತ್ತಿಲಿ ಇರದಂತೆ ಎಬ್ಬಟ್ಟಿ ಬಲು ಆ। ವರ್ತಿ ಘೋರಿಸು ನಾನಾ ಉಪದ್ರವ। ಇತ್ತದಲ್ಲದೆ ಇದು ತೊಲಗುವದಲ್ಲವೋ। ಎತ್ತ ಪೋದರೆ ಏನು ನಿಶ್ಚಯ ಕಾಣೊ। ಚಿತ್ತವೆ ಇದು ಮಾತ್ರ ಜೈಸಿದರೆ ನಿನಗೆ ಉತ್ತಮ ಲೋಕ ಇದ್ದಲ್ಲೇ ಉಂಟು। ಸುತ್ತದಿರು ಕಂಡಲ್ಲಿ ಕ್ರೋಧ ವಶವಾಗಲು। ಕತ್ತೆ ಮರಿಗೆ

ಮುದ್ದುಕೊಟ್ಟಂತೆವೋ। ಚಿತ್ತಜ ಪಿತ ನಮ್ಮ ವಿಜಯವಿಠ್ಠಲರೇಯನ। ಭೃತ್ಯ ಜನ ಮೆಚ್ಚದು ಪುಣ್ಯ ಹೆಚ್ಚದು ಸಿದ್ಧ ॥೩॥

**ಅಟ್ಟತಾಳ**

ಅಲಂಕಾರ ವಸನ ಭೂಷಣ ಗಂಧ ಪರಿಮಳ। ಬಲುಪುಷ್ಪಿ(ಷ್ಪ) ಧರಿಸಿದ್ದ ಮುತ್ತೈದಿ ಪತಿವ್ರತೆ। ಮಲ ಮಲಿನವಾಗಿ ಇದ್ದರೆ ಅವಳನ್ನ। ಒಳಿತೆಂದು ಸ್ಪರಶ ಮಾಡಲಿ ಬಹುದೆ ಕೇಳು। ಕಾಲ ಕಾಲ ನಿರ್ಣಯ ಇದರಂತೆ ತಿಳಿ ನೀನು। ಒಳಗೆ ಕೋಪವ ತಾಳಿ ಇದ್ದರಾದಡೆ ನಿ। ರ್ಮಳ ಇಲ್ಲ ಎಂದಿಗೆ ಅವಳಂತೆ ಕಾಣೆಲವೊ। ಸುಲಭ ಜ್ಞಾನಕೆ ಪ್ರತಿಕೂಲ ಅಜ್ಞಾನಕ್ಕೆ। ನಿಲವರ ಅನುಕೂಲ ಪಾಪ ಮಾಡಿಸುವದು। ಕುಲಕೋಟಿಗೆ ಮುಂದೆ ಹಿತವಾಗದು ಮಂದ। ಘಳಿಗಿ ಒಂದೊಂದಕ್ಕೆ ಬಹು ಜನ್ಮ ಮಾಡಿದ। ಸಲೆ ಪುಣ್ಯ ಕೆಡಿಸೋದು ಎಚ್ಚರ ಕೆಡದಿರೂ। ಛಲ ಹಿಡಿ ಕೋಪದ ಮೇಲೆ ನಿರಂತರ। ತುಳಿದು ತಲೆ ಎತ್ತದಂತೆ ಮಾಡಲಿ ಬೇಕು। ಇಳಿಯ ವಲ್ಲಭ ಹರಿಯ ವಿಜಯವಿಠ್ಠನ್ನ। ಪೊಳೆವು ಬೇಕಾದರೆ ಇದನೆ ನಿರಾಕರಿಸು ॥೪॥

**ಆದಿತಾಳ**

ಕುಪಿತ ಮಾಡುವ ಬಗೆ ಕೇಳೆಲೊ ಎಲೊ ಮನಸೆ। ಕೃಪೆಯಿಂದ ಯೋಚಿಸು ಧರ್ಮಾದಿ ಮಾರ್ಗವನ್ನು। ತಪೋನಿಷ್ಠ ಜನ ಉತ್ತಮ ಮಾತೃ ಪಿತ್ರಾದಿ। ಕೃಪಣರ ಮೇಲೆ ಸದಾ ಸಲ್ಲದು ಸರ್ವದಾ। ಉಪಕಾರ ಮಾಡುತಿರು ಅವರಿಂದೇನಾದರು। ಉಪಹತಿ ಬಂದರು ಸೈರಿಸು ಸತ್ಕೀರ್ತಿ। ಅಪರಿಮಿತವಾದ ಸಾಧನ ಇದೇ ಎನ್ನು। ಗುಪುತ ಪ್ರಮೇಯವ ನುಡಿದೆ ಆತರುವಾಯ ವ। ರ್ನಿಪೆ ಮಡದಿ ಮಕ್ಕಳು ಅನುಜ ಶಿಷ್ಯಾದಿಗಳಿಗೆ। ಸಫಲಗೋಸುಗ ನಿನಗೆ ಸಲ್ಲುವದು ಕಾಣೊ। ಅಪರಾಧವೆನಿಸದು ಹರಿ ಗುರುಗಳ ಸೇವಿಗೆ। ತೃಪುತವಾಗುವರು ದೇವಾದಿ ದೇವತೆಗಳು। ಕ್ಲಿಪುತ

ಕೋಪವ ಕೇಳು ಇಹ ಪರದಲ್ಲಿ ಮಾಳ್ಪ। ಶಪುತ ತನವೆ ಉಂಟು ಅನಾದಿಯಿಂದ ಪಿಡಿದು। ವಿಪರೀತ ಜನದ ಮೇಲೆ ಸ್ವಾಭಾವಿಕ ನಮಗೆ। ದಿಪುತವಾಗಿಪ್ಪುದು ಆನಂದ ಅಭಿವ್ಯಕ್ತಿ। ಅಪಜಯವೆನ್ನದಿರು ಪೂರ್ಣ ಭಕ್ತಿ ಲಕ್ಷಣ। ಕಪಿ ಕುಲೋತ್ತಮನ ಮತದಲ್ಲಿ ಪೊಂದಿದವಗೆ। ಜಪ ತಪ ವ್ರತ ಧ್ಯಾನ ಧರ್ಮ ಸಮಸ್ತ ಕರ್ಮ। ಉಪಕ್ರಮ ಉಪಸಂಹರಣೆ ಇದೆ ಮತ್ತೆ ಮತ್ತೆ ಮತ್ತೆ। ತಪನ ಪ್ರಕಾಶ ನಮ್ಮ ವಿಜಯ ವಿಠ್ಠಲರೇಯ। ಸ್ವಪನ ಜಾಗರದಲ್ಲಿ ಕುಣಿ ಕುಣಿದಾಡುವಾ ॥೫॥

**ಜತೆ**

ಬಿಡು ಬಿಡು ಕೋಪವ ಸಾರಿದೆ ಸಾರಿದೆ ।
ಕೊಡುವ ವಿಜಯ ವಿಠಲಜ್ಞಾನ ಭಕುತಿ ಗತಿ ॥೬॥

❖ ❖ ❖

## ಸುಳಾದಿ-೬೩

ಚಿತ್ತ ಚಲಿಸದೆ, ಕೋಪಾದಿ ಮಾರ್ಗ ತೊರೆದು ಭಾಗವತಾದಿ ಧರ್ಮ ವೊಹಿಸಿ ಸಾಧನ ಮಾಡುವದು.

### ರಾಗ-ಭೈರವಿ ಧ್ರುವತಾಳ

ಚಿತ್ತವೆ ಚಲಿಸದಿರು ಪ್ರಚಂಡ ಪಂಚ ಮಾರ್ಗದ। ಮೊತ್ತದಲ್ಲಿಗೆ ನೀನು ಸಾಗಿ ಪೋಗಿ। ವಿತ್ತಾದಿಗಳ ಬಯಕೆ ಫಲವಿಲ್ಲ ಫಲವಿಲ್ಲ। ಅತ್ತಲಿತ್ತಲು ನೋಡು ತಿಳಿದರಾಗೆ। ತೆತ್ತು ಅನಂತ ಜನುಮಗಳಲ್ಲಿ ಅರಸಿದರು। ಉತ್ತಮ ಲೋಕಕ್ಕೆ ನೆಲೆಯಾಗದು। ಹತ್ತು ನೂರಾರು ಕೋಟಿ ಪಿಪಿಲಿಕಾ ಕೂಡಿಸಲು। ಉತ್ತಮದ ಗಜಕೇಸರಿ ಕೇಸರಿ ಎನಿಸುವದೆ। ತತ್ತಳ ಗೊಳದಿರು ಚನ್ನಾಗಿನ್ನು ವಿಷ್ಣು। ತತ್ವವ ವಿಚಾರಿಸು ಸುಜನರೊಡನೆ। ಹತ್ತಿ ಬಾಹೊ ದೋಷ ದೂರಾಗಿ ನಿಂದಾವು। ಚಿತ್ತ ಮಾರ್ಗದಲ್ಲಿ ನಲಿದಾಳ್ವದು।

ಹತ್ತಾರು ಕಳೆಗೂಡಿದ ಲಿಂಗದಲ್ಲಿ ಪ್ರಥಮಾವರ್ಕ। ಸತ್ತುವ ಭಾಗದಲ್ಲಿ ನಿನ್ನ ವಾಸಾ। ನಿತ್ಯದಲ್ಲಿ ನೀನು ನಿಜಪ್ರಕಾಶ ವೊಡಗೂಡಿ। ಎತ್ತ ನೋಡಿದರತ್ತ ಪೋಪಾದೇನು। ಹೊತ್ತು ಹೊತ್ತಿಗೆ ವಿಷಯ ಧ್ಯಾನವನ್ನು ಮಾಡಿ। ಸಂಪತ್ತೆ ಪೋಗಾಡದಿರು ಒಲಿದು ಕೇಳು। ಇತ್ತ ಲಾಲಿಸುವದು ಬಿನ್ನೈಸುವೆನು ಮಹಾ। ಕತ್ತಲಿಯೊಳು ಪುಟ್ಟಿ ಬಿದ್ದು ಕಣ್ಣುಮುಚ್ಚಿ। ಸುತ್ತ ತಿರುಗಿದಂತೆ ಎಲ್ಲದೆ ಎಂದಿಗೂ। ಉತ್ತಮತ್ವವೆಇಲ್ಲ ವಿಚಾರಿಸೂ। ಕೀರ್ತಿ ಮೊದಲಾದ ಗುಣವ ಗಳಿಸಿ। ಭರಿತವಾಗಿರು ಭಕುತಿ ಪೂರ್ಣದಿಂದ। ತತ್ವ ವಿಗ್ರಹ ನಮ್ಮವಿಜಂಯು ವಿಠ್ಠಲರೇಂಯುನ। ತುತಿಸಿಕೊಳುತ ಆನಂದ ವನಧಿಯೋಳಿರು॥೧॥

## ಮಟ್ಟತಾಳ

ಚಂಚಲನಾಗದಿರು ಚತುರತನದಲಿರು। ಪಂಚೇಂದ್ರಿಯಗಳಲಿ ಪರಮ ಪ್ರೀತಿಯಿಂದ। ಸಂಚರಿಸುತ್ತಿರು ಸಾಧ್ಯಸಿದ್ಧನಾಗಿ। ಕೊಂಚೆಯಿಲ್ಲವೊ ಕಾಣೊ ಕೋಟಿಗಾದರು ಒಂದೆ। ಕಾಂಚನಮಯವಾದ ಮಾಣಿಕ ಸಮ ಮಾತೂ। ವಂಚಕತನ ಬಿಡು ವೇದಸ್ಮೃತಿ ಗುಣಿಸು। ಅಂಚೆಗಂಚಿಕೆ ಗುರುಗಳ ಸ್ಮರಿಸು ಸತತ ತೃಣ। ಗುಂಚಿಕೆಯನು ಬಯಸು (ಸದೆ) ಗುಪ್ತದಿ ನಿನ್ನೊಳಗೆ। ಪಂಚ ಪರಣಕೊಡಿಯ ವಿಜಯ ವಿಠ್ಠಲರೇಯನ। ಲಾಂಛನವನು ಧರಿಸಿ ಲಲಿತ ದಾಸನಾಗು ॥೨॥

## ತ್ರಿವಿಡಿತಾಳ

ಸ್ವಸ್ಥದಲ್ಲಿರು ನೀನು ಸಕಲ ಕಾಲದಲಿ ಸ। ಮಸ್ತ ಗುಣ ಸಂಪೂರ್ಣ ಸುಖವೀರ್ಯಸಾರ। ವಿಸ್ತಾರ ಮಹಿಮ ವಿಶೇಷ ಪ್ರಬಲ ಚತುರ। ಮಸ್ತಕ ಜನಕ ಜಗಜೀವನ ಜಿತತಮ। ದುಸ್ತರವಾದ ಭವಾಂಬುಧಿ ತಾರ ಪರ। ವಸ್ತುವೆ ವಲ್ಲವ ವಲ್ಲಭ ನಾನಾ। ವಸ್ಥಾ ಪ್ರೇರಕ ಸರ್ವರೂಪ ಅಭೇದನೆ। ಪ್ರಸ್ತುತ ಭಕುತರ ಜೀವ ಜನಾರ್ದನ। ಹಸ್ತಿವರದ ಕಂಬು ಚಕ್ರಗದಾ

ಪದುಮ ಸು। ಹಸ್ತ ಚೇತನಾಚೇತನ ನಿತ್ಯಾನಿತ್ಯ ಸ್ವಾಮಿ। ಪ್ರಸ್ತಾರ ಉದ್ಧಾರ ಉದಧಿ ಶಯನ ಉದಯ। ಅಸ್ತಾದ್ರಿ ಪ್ರಕಾಶ ನಿಲಯ ನಿಶ್ಚಿಂತ ಕಾಯ। ದುಸ್ತರ್ಕವಾದ ಜೀವಿಗಳಿಗೆ ಅನುದಿನ। ಶಾಸ್ತನಾಗಿಪ್ಪ ಹರಿ ಪರನೆ ಎಂದು। ಈ ಸ್ತವನದಿಂದ ಕೀರ್ತನೆ ಮಾಡಿ ಭ। ಯಸ್ತನಾಗಿದ್ದ ಮಾರ್ಗವನೆ ಬಿಟ್ಟು। ಕಸ್ತೂರಿ ಮಟ್ಟಿಯ ಬೀದಿಗಿಕ್ಕದೆ ತಿಳಿದು। ಮಸ್ತಕದಂತೆ ಪೊಂದಿರು ಚಿತ್ತವೆ। ಹಸ್ತನಂತ ಉಳ್ಳ ವಿಜಯ ವಿಠ್ಠಲರೇಯನ। ಸ್ವಸ್ಥಾನದಲಿ ಇದ್ದು ಶುಭಯೋಗ ಯೋಚಿಸು ॥೩॥

### ಅಟ್ಟತಾಳ

ಸುಖ ಬಯಸು ನೀನು ಸುಖಕಾರಣ ಮಾಡು। ಅಖಿಳ ಬಗೆಯಲ್ಲಿ ಸುಸಖನಾಗಿಪ್ಪ ಹರಿಯ। ನಖಶಿಖ ಪರಿಯಂತ ಮುಖದಿಂದ ಕೊಂಡಾಡಿ। ದುಃಖದಿಂದ ಕಡೆ ಬೀಳು ಮಖಜಜನು ಉದ್ಧರಿಸಿ। ಮಖ ಮಿಕ್ಕಾದರಿಂದ ಸುಖ ಇಂಥದೇ ಇಲ್ಲ। ನಿಖಿಳ ಭುವನೇಶ ವಿಜಯ ವಿಠ್ಠಲನ್ನ। ಅಖಂಡ ಸ್ಮರಣಿಯ ಪಖ (ಕ್ಕ) ದಲ್ಲಿ ಧರಿಸೋ ॥೪॥

### ಆದಿತಾಳ

ವ್ಯಾಪಾರ ನಿನಗಿದೆ ಎಲೊ ಚಿತ್ತವೆ ಕೇಳು। ಭೂಪಾರದೊಳಗೆ ಎಲ್ಲಿದ್ದರು ತೊಲಗದೆ। ಆ ಪಾರಮಾರ್ಥಿಕನಾಗಿ ವಖ್ಖಾಣಿಸಿ। ದೀಪಕಂಜಿಸುವಂತೆ ತತ್ವ ವಿಚಾರದಿ। ಪಾಪರಹಿತನಾಗಿ ಭವವೆಂದೆಂಬೊ ಮಹಾ। ಕೂಪಾರದಿಂದಲಿ ಅತಿ ವೇಗ ಯೋಗದಿಂದ। ನೀ ಪಾರಂಗತನಾಗು ಮುಕ್ತರಿಗೆ ಬಾಗು। ಕೋಪ ರಾಗಿಷ್ಟನಾಗಿ ಹರಿಪೂಜೆ ಮಾಡದಿರೆ। ತಾ ಪರ ಮನದಲ್ಲಿ ಪೊಕ್ಕಂತೆ ಎಂದಿಗು। ಕೋಪ ರಹಸ್ಯ ಪಥಕೆ ಪ್ರತಿಬಂಧಕ ವಹುದು। ರೂಪ ರತದಿಂದ ಬಳಲುವದು ಬಿಡದು ಬಿಡದು। ಸೂಪಾರವಾದ ಶಯನ ವಿಜಯ ವಿಠ್ಠಲರೇಯನ। ನೀ ಪಾರಂಪಾರವಾಗಿ ನಿಶ್ಚಯ ತತ್ವವೆನ್ನು ॥೫॥

**ಜತೆ**

ಚಿತ್ತವೆ ಚಿತ್ತೈಸು ವಿಜಯ ವಿಠ್ಠಲರೇಯನ ।
ಚಿತ್ತ ವಿಡಿದು ಬದಕು ವಿಜಯ ವಿಠಲ ನಿನಗೆ ಪರಮ ಲಾಭ ॥೬॥

❖ ❖ ❖

## ಸುಳಾದಿ-೩೪

ವಂಚಕತನವ ಬಿಡು, ಕರುಣಾಳುವಾದ ಶ್ರೀಹರಿಯನ್ನು ನಂಬು

### ರಾಗ-ಭೈರವಿ ಧ್ರುವತಾಳ

ಜಗದ ವಂಚಕ ನಾನು ಬಲು ಜಾಣ ತನದಲ್ಲಿ। ಬಗೆ ಬಗೆ ಲೌಕಿಕ ಭೋಗವ। ಅಗಣಿತ ಜನರ ಮುಂದೆ ಹಣವ ಎಬ್ಬಿಸುವ ಗೋ। ಸುಗ ನಾನಾ ಸೊಗಸುಗಳ ಬೀರೂತಲಿ। ಲಗ ಬಗೀ ಮಾಗಿ (ಹಗೆ)ಯಲ್ಲೇ ಖುಲ್ಲೆ ಕಥೆ ಮಂಡಿಸಿ। ಹಗಲಿರುಳು ಸ್ವಾರ್ಥವಾಗಿ ಪೋಗಿ ಪರರ। ಮೊಗವ ಕಣ್ಣು ಮುಚ್ಚದೆ ನೀಕ್ಷಿಸಿ ನಿಂದು ಹಸ್ತ। ಯುಗಳ ತಿರುಹಿ ಕಲ್ಪನೆ ರಚಿಸೀ। ರಗಳಿಯ ತಂದು ವಡ್ಡಿ ರಾಜ್ಯದವರ ಪಾಡಿ। ವಿಗಡ ಮತಿಯಿಂದ ವಿನಯನಾಗೀ। ತೆಗೆದುಕೊಳ್ಳೆನೆಂಬೊ ಬಾಹಿರದಲ್ಲಿ ಮಹಾ ಬಿಗುವು ಮಾಡುವೆನಯ್ಯಾ ಒಳಗೆ ಖೇದ ನಾಹೆ। ಮುಗಧನಾಗಿಯಿಪ್ಪೆ ಮೌನ ವೃತ್ತಿಯ ತಾಳಿ। ಮಿಗೆ ಹಣ ಸಂಪಾದಿಸಿ ಮಾಯಾದಲ್ಲಿ। ನಗೆಯಿಂದ ಮಾತಿನಿಂದ ಬಂಧುತ್ವ ಸ್ನೇಹದಿಂದ। ಭೊಗಸಿಯ ಒಡ್ಡುವೆ ಭಾವ ತಿಳಿಯದೆ। ಜಿಗಿ ಜಿಗಿದಾಡುವೆ ಕೊಟ್ಟದರಿಂದ ಅವರ। ಮಗನಾಗಿ ದೇಶದೊಳು ಧರ್ಮವೆಂದೂ। ಪೊಗಳುವೆ ಹರಿನಿನ್ನ ಸರ್ವ ಸ್ವತಂತ್ರವು। ಮಗುಳೆ ಪೇಳದಲೆ ಮಂದನಾದೆನಯ್ಯಾ। ತ್ರಿಗುಣ ವಿಸ್ತಾರಗೈಸಿದ ವಿಜಯ ವಿಠ್ಠಲರೇಯ। ಮೃಗ ಬುದ್ಧಿಯವ ನಾನು ಇಲ್ಲವೆಂದೆನೆ ಬಿಡೇ ॥೧॥

## ಮಟ್ಟತಾಳ

ಇರಲಿ ಇಲ್ಲದೆ ಪೋಗಲಿ ಪರರ (ಸಂಕಟವನು) ಕಾಟವನು। ಅರಿಯದೆ ಅಕಟಕಟ ಸರಸರನೆ ಪೋಗಿ। ಹಿರಿಯತನಕೆ ನಾನೆ ಸರಿ ಎಂದು ಹೇಳಿ। ಕರಕರೆಯನು ಬಿಡಿಸಿ ಕರುಣವ ಇಲ್ಲದಲೆ। ಹರಿದು ತಿಂಬೆನೊ ಬಿಡದೆ ಗರುವಿಕೆ ಮನದಲ್ಲಿ। ಪುರದ ಹೊರಗೆ ಬಂದು ಧರಿಸುವೆನು ವೇಷ। ಚರಿಸುವೆ ಬಹುಜನಕೆ ಬೆ(ಡ)ರಗು ತೋರಿಕೊಳುತ। ಕೊರವಿತಿ ಮನಿ ಮನಿಗೆ ಎರಕ ಪೇಳಿದಂತೆ। ಬರಿದೆ ಮಾತಿನಲಿ ಉತ್ತರ ರಚನೆ ಮಾಳ್ಪೆ। ದುರಳರಿಗೆ ದುರುಳಾ ವಿಜಯವಿಠ್ಠಲ ಕೇಳು। ದುರಿತ ರಾಸಿಗಳು ಪರಿಹರಿಸುವ ಬಗೆ ಕಾಣೆ ॥೨॥

## ತ್ರಿವಿಡಿತಾಳ

ಪಟ್ಟೆಧೋತ್ರ ತಂದು ಶುಭ್ರವಾಗಿ ಒಗೆದು। ಉಟ್ಟುಕೊಂಡು ಕಾಲಿಗೆಳೆವಂತೆ ವೇ। ಪಟ್ಟೆ ನಾಮವ ಬಡಿದು ಮಿತಿ ಇಲ್ಲದೆ ಮುದ್ರೆ ಇಟ್ಟು ಸಣ್ಣುಗಾರ ತಿದ್ದಿ ಫಣೆಗೇ। ದಟ್ಟಡಿಯಾಗಿ ಕೊರಳ ಮಾಲೆ ಜಪಮಣಿ। ಬಟ್ಟೆನೊಳಗೆ ಸಿಗಸೀ ಕೊಂಡು ಕುಳಿತು। ದೃಷ್ಟಿ ಒಂದು ಕಡೆ ಚಂಚಲ (ಮನ)ದಲ್ಲಿ। ಇಟ್ಟಣಸೀ ಅನ್ಯ ಸತಿಯರನ। ಕೆಟ್ಟ ಬೆಂದೆನೆಂದು ತನ್ನ ಮೂಲ। ಗಂಟು ಇಟ್ಟಂತೆ ಅವಳನ್ನ ಕಣ್ಣಸನ್ನೆ। ಗುಟ್ಟು ತೋರದಂತೆ ಕೆಮ್ಮಿ ಖ್ಯಾಕರಿಸಿ ಬ। ಚಿಟ್ಟು ಹೊನ್ನುಗಳೆಲ್ಲ ತೆಗದು ತಂದು। ಕೊಟ್ಟದಲ್ಲದೆ ಬಿಡೆನೆಂದೆಂಬೊ ಮನ ಮಾಡಿ। ಅಟ್ಟುವೆ ಅವರ ಸಂಗಡ ಪುಣ್ಯವ। ನಿಷ್ಟೆ ಉಳ್ಳವನಂತೆ ಬಯಲಾಚಾರದಲ್ಲಿ। ಧಿಟ್ಟನೆನಿಸುವೆ ಎಡಬಲದವರಿಗೆ। ಇಷ್ಟರೊಳಗೆ ಏಕಾಂತದಲ್ಲಿ ಕಾಣೆ। ಸೃಷ್ಟಿಯೊಳಗೆ ನಾನೆ ಧನ್ಯನೆಂಬೆ। ದುಷ್ಟ ಬುದ್ಧಿ ಎಂದು ಮುಂಗಾಣದೆ ಮನ। ಮುಟ್ಟಿ ಮಾಡುವೆನಯ್ಯ ಅನ್ಯ ನಡತೀ। ತುಟ್ಟ ತುದಿಯಲ್ಲಿ ಬಳಲಿ ಬೆಂಡಾಗುವೆ। ಕಟ್ಟಿ ಮೇಲಿನ ಮಂತ್ರ ಈ ಪರಿಯನೆಯಲ್ಲಿ। ಅಷ್ಟ ದಿಕ್ಕಿಗೆ ಮನಸು ಓಡುತಿದಕೊ। ಇಷ್ಟಾರ್ಥ ಕಾಣೆನೊ ವಿಜಯವಿಠ್ಠಲ ಇಂಥ। ಭ್ರಷ್ಟ ಮಾನವಗೆ ಆವದೊ ಗತಿ ಮಾರ್ಗ ॥೩॥

**ಅಟ್ಟತಾಳ**

ದೇಶಾವರಕೆ ಪೋಗಿ ದೋಷವೆ ಎಣಿಸುತ್ತ। ಭೇಷಿಜ ವಲ್ಲದೆ ಭೂಷಣವಾವಾದು। ಮೋಸದಲ್ಲಿ ಪರರ ಘಾಸಿಯ ಗೊಳಿಸುವಿ। ಶೇಷವಾಗಿ ನಾನಾ ಭಾಷೆ ಮುಂದಾಡಿದೆ। ಕ್ಲೇಶವ ಬಟ್ಟು ಕಸ ವೀಸಿಗೆ ಒಳಗಾಗಿ। ಆಶೆ ತೊರೆದ ಮಾನಿಸನಂತೆ ಹೊರಗೆ। ಘೋಷವಲ್ಲದೆ ವ್ಯರ್ಥ ಲೇಸು ದೃಢವು ಕಾಣೆ। ದಾಸನೆಂಬೊ ನಾಮ ದೇಶದಲ್ಲಿ ಮಾತ್ರ। ಸೂಸುತಲಿದೆ ಕೇಳು ಗ್ರಾಸ ನಿಮಿತ್ಯವಾಗಿ। ಈಸು ಠಕ್ಕತನ ರಾಸಿಗಳೇ ಉಂಟು। ವೇಷಧಾರಿಯ ಹಿಂದುಗೈಸುವೆ ಹಿರಿದಾಗಿ। ವಾಸುದೇವ ನಮ್ಮ ವಿಜಯ ವಿಠಲ ನಿನ್ನ ದಾಸ ನಾದದಕೆ ಉಲ್ಲಾಸ ಮತಿಯೇ ಇಲ್ಲ ॥೪॥

**ಆದಿತಾಳ**

ಚಿತ್ತ ಸ್ವಸ್ಥವಿಲ್ಲಾ ಅನ್ನಕೆ ಕರಿಯದಿರೆ। ವಿತ್ತದಲಿ ಸ್ನೇಹ ಇದ್ದದಾವಲ್ಲಿ ಇಲ್ಲ। ಸುತ್ತುವೆ ಕಂಡಕಡೆ ಬಡವನೆಂದರೆ ಬಿಡದೆ। ಹತ್ತುವೆ ಭೂತದಂತೆ ಚಾಲವರಿದರೇನು। ಅತ್ತಲಿತ್ತ ನೋಡದೆ ನಿಸ್ಪ್ರಹನೆನಿಸಿಕೊಂಡು। ಹತ್ತಿದ ಒಂದು ಕಾಸು ಒಬ್ಬರಿಗೀಯೆ ನಾನು। ಉತ್ತರ ನೋಡಿದರು ಕೇವಲ ಸಜ್ಜನ। ವೃತ್ತಿಯಂತೆ ತೋರುವೆ ಗಾರುಡವಾಗಿಪ್ಪದು। ಉತ್ತಮನಾಗಿ ತೋರಿ ಎತಾರ್ಥವೆಂಬೊ ಹಾಗೆ। ಹತ್ತದು ವಲ್ಲೆನೆಂಬೊ ಮನಸಿನಲ್ಲಿ ಚಿಂತಿಸುವೆ। ತತ್ತಲಗೊಳುತಿಪ್ಪೆ ಆರಾದರು ಕರೆದು। ಇತ್ತಬಾ ಎನ್ನದಿರೇ ಅಂದಿನ ದಿನದಲ್ಲಿ। ತುತ್ತು ಒಳ್ಳೇದು ದೊರಕೆ ನಗುವೆ ಕೆಲದಾಡುವೆ। ಗುತ್ತಿಗೆ ಕಟ್ಟಿದಂತೆ ಆರನ ಸೇರಗೊಡದೆ। ನಿತ್ಯಕರ್ಮಗಳಿಲ್ಲವು ಪೊಟ್ಟೆಗಾಗಿ ಅ। ನೃತ್ಯ ನಾಡುವೆಬಲು ವಿಲಕ್ಷಣನಾಗಿ। ಸತ್ಯ ಸಂಕಲ್ಪ ಸಿರಿವಿಜಯ ವಿಠ್ಠಲರೇಯ। ಹೊತ್ತು ಪೋಗಾಡಿದೆನೊ ಉದರಂಭಾರನಾಗಿ ॥೫॥

**ಜತೆ**

ಎನ್ನಂಥ ವಂಚಕ ದಿಗ್ದೇಶದೊಳಗಿಲ್ಲ ।
ನಿನ್ನಂಥ ಕರುಣಿಯ ಕಾಣೆ ವಿಜಯ ವಿಠ್ಠಲಾ ॥೬॥



# ಸುಳಾದಿ-೭೫

ಚಿತ್ತ ಸ್ವಸ್ಥದಿಂದ ನಿತ್ಯ ಭಕುತಿಯಲ್ಲಿ ಶ್ರೀಪರಮಾತ್ಮನ ಪಾದನಂಬು, ಶ್ರೀಹರಿಯು ಒಲ್ಲೆನೆಂದರೂ ಅಭಯ ಕೊಡುವನು.

## ರಾಗ-ಸಾರಂಗ ಝುಂಪೆತಾಳ

ಚಿತ್ತವೆ ಚಲಿಸದಿರು ಚನ್ನಾಗಿ ಲಾಲಿಸು। ಹೊತ್ತು ಹೊತ್ತಿಗೆ ನೀನು ಕಂಡಕಡಿಗೇ ಸುತ್ತದಿರು ಸುತ್ತದಿರು ಬರಿದೆ ಹಂಬಲಿಸಿ ಪೂ। ರ್ವೋತ್ತರ ಜ್ಞಾನವನ್ನು ಮರೆದು ಮರೆದು। ಎತ್ತ ಪೋಗಲತ್ತ ಗ್ರಾಸ ವಾಸಕ್ಕೆ ನಿನಗೆ। ಹೊತ್ತುಕೊಂಡು ಬಂದು ಕೊಡುತಿಪ್ಪನೋ। ಹತ್ತದೆಂದರೆ ಬದಿಯಲ್ಲಿ ನಿಂದು ಒಂದೊಂದು। ತುತ್ತು ಮಾಡಿ ಬಾಯಿಯೊಳಗೆ ನೆತ್ತಿಯ ಮೇಲೆ ಟೊಣದು ವಾಂಛಲ್ಯದಿಂದ ಪುರು। ಷೋತ್ತಮನೆ ಉಣಿಸುವನು ಷಡುರಸನ್ನ। ಚಿತ್ತವೆ ಚಲಿಸದಿರು ಹತ್ತು ದಿಕ್ಕಿಗೆ ನೀನು ಪೋಗಲೇನು ಅಲ್ಲೆಲ್ಲಿ। ಉತ್ತಮೋತ್ತಮ ಹರಿ ಇರುತೇ ಇಪ್ಪ। ತೆತ್ತಿಗ ತಾನಾಗಿ ಆವಾವ ಕಾಲಕ್ಕೆ। ಪೆತ್ತ ಪಿತಾಮಾತೆಯಂದದಿ ಸಾಕುವ। ಇತ್ತ ಮುಂದಾಗಿ ಈ ಮಾತು ಮನ್ನಿಸು ನಿತ್ಯ। ತತ್ತಳಗೊಳದಿರು ಧೈರ್ಯವಿರಲಿ। ಸತ್ಯಸಂಕಲ್ಪ ಸಿರಿ ವಿಜಯವಿಠಲ ನಿನ್ನ। ಹತ್ತಿಲಿ ಇಪ್ಪನು ಗುಣಿಸು ಕಾಣೋ ॥೧॥

## ಮಟ್ಟತಾಳ

ಕಾಸಿಗೆ ಪೋದರೇನು ಕಲ್ಲೊಳಗಿದ್ದರೇನು। ದೇಶ ದೇಶ ತಿರುಗಲೇನು ದೀನನಾದರೇನು। ದೇಶಿಕನಾದರೇನು ವೇಷ ಧರಿಸಲೇನು ವೇದ ಓದಿದರೇನು। ವಾಸುದೇವನೆ ವಾಸಗ್ರಾಸವೇ ವಹಿಸಿ। ಲೇಶಕಾಲ ಬಿಡದೆ ಲೇಸು ಕೊಡುತಲಿಪ್ಪ। ಈಶನು ತ್ರಿಭುವನಕೆ ಈತನು ಕಾಣೆಲವೊ। ವಾಸರ ಕಳೆಯದಿರು ವಾಣಿ ಬರಿದೆ ಮಾಡಿ। ದೇಶ ಕಾಲ ಪೂರ್ಣ ವಿಜಯ ವಿಠಲರೇಯ। ದಾಸನೆಂದವರಿಗೆ ದತ್ತ ಪ್ರಾಣನು ಕಾಣೊ ॥೨॥

## ತ್ರಿವಿಡಿತಾಳ

ಎಲ್ಲಿಂಯು ವೈಕುಂಠ ಎಲ್ಲಿ ಅನಂತಾಸನ। ಎಲ್ಲಿ ನಾರಾಯಣಪುರವೊ ಎನಗೆ। ಎಲ್ಲೆ ಬ್ರಹ್ಮಾಂಡ ಮತ್ತೆಲ್ಲಿ ಲೋಕಗಳು ಅವು। ಯಲ್ಲೋ ಅಲ್ಲೊ ಇಲ್ಲೋ ಲಕುಮಿ। ವಲ್ಲಭ ಇರುತಿಪ್ಪ ಕುರುಹ ತಿಳಿಯದೆಂದು। ತಲ್ಲಣಿಸಿ ತಾಪದಲಿ ಬಳಲದಿರು। ಸೊಲ್ಲು ಕೇಳೆಲೊ ಚಿತ್ತ ಏಕಾಗ್ರದಲ್ಲಿ ನಿಂದು। ಬಲ್ಲಿದ ನಾಗೊ ನಿಜ ಭಕುತಿಯಿಂದ। ಬಲ್ಲವರನು ಕೇಳು ಅನುಭವ ಉಂಟು ಪುಸಿ। ಯಲ್ಲವೊ ಎಂದಿಗೂ ಸಿದ್ಧಾಂತವೋ। ಎಲ್ಲ ವ್ಯಾಪುತವೊ ಹರಿಯೆ ನಿತ್ಯವೊ ಇದಕೆ। ಪ್ರಲ್ಹಾದ ದೇವನು ಸಾಕ್ಷಿಸಿದ್ಧ। ಸಲ್ಲದೊ ನಿನಗೆ ಈ ಸಂಶಯ ಸಾರಿದೆನೊ। ನಿಲ್ಲೊ ಚಂಚಲ ಬಿಟ್ಟು ಮಾರ್ಗ ಮೆಟ್ಟು। ಮೆಲ್ಲ ಮೆಲ್ಲನೆ ತತ್ವ ಜ್ಞಾನ ಸಂಪಾದಿಸಿ। ಗೆಲ್ಲೊ ಕಾಮ ಕ್ರೋಧ ವಿಷಯಂಗಳ। ಸಲ್ಲುವದೊ ನಿನಗೆ ವೈಕುಂಠ ಪಟ್ಟಣ। ಅಲ್ಲಿ ನೋಡು ನಾನಾ ಪರಿಸೌಖ್ಯವ। ಮಲ್ಲ ಮರ್ದನ ನಮ್ಮ ವಿಜಯ ವಿಠಲನಂಘ್ರಿ ಪಲ್ಲವ ನಿನ್ನೊಳಗೆ ಇಡೊ ದುಷ್ಕೃತವ ಸುಡೊ ॥೩॥

## ಅಟ್ಟತಾಳ

ಸುರರಿಂದ ಕೊಡುವನು ನರರಿಂದ ಕೊಡುವನು। ಗಿರಿ ತರು ಕರಿ ವಾಜಿ ರಥದಿಂದ ಕೊಡುವನು। ಉರಗ ವೃಷಭ ಗೋವು ಜಲದಿಂದ ಕೊಡುವನು। ಧರೆ ಗಗನ ವಾಯು ಪಾವಕ ಕೋಡಗ। ಕರಡಿ ಕೌತುಕ ನಾಟಕದಿಂದ ಕೊಡುವನು। ಶರಚಾಪ ನಾನಾ ಶಸ್ತ್ರದಿಂದ ಕೊಡುವನು। ವರ ಮಂತ್ರ ಸತ್ಕಥಾ ತಂತ್ರ ತಂತು। ತೃಣ ತರುಣಿ ನೆಳಲು ನಾದದಿಂದಲಿ ಕೊಡುವನು। ಪರಿಯಿಂದ ಪೇಳುವದೇನು ಕಸಕುಪ್ಪೇರು ತಿಪ್ಪ ತಿಪ್ಪೆ। ಬೋರಿಗೆಯಿಂದ ಕೊಡುವನು। ಹರಿ ಕಲ್ಪಿಸಿದ ವೃತ್ತಿ ಆವಾವ ಬಲ್ಲನು। ಸಿರಿ ಅಜಭವರೆಲ್ಲ ಎಣಿಸಿ ಗುಣಿಸುವರು। ಹರಿ ಅನಂತ ಹಸ್ತದಲ್ಲಿ ಕೊಡುತಿಪ್ಪ। ಅರೆಮರೆಗೊಳದಿರು ಅನಾದಿ ಇಂದಲಿ। ವಿರಿಚಿಸಿದ ಕ್ಲಪ್ತಿ ಕಡಿಮೆಯಾಗದು ಕಾಣೊ।+ ಸರುವೋತ್ತಮ ನಮ್ಮ ವಿಜಯ ವಿಠ್ಠಲರೇಯ। ಕರದುಕೊಡುವ ಬಹು ಅಮೃತಕರನು ॥೪॥

### ಆದಿತಾಳ

ಊರಿಗೆ ಹೋದ ಮಗನ ನೋಡುವಾತುರದಿಂದ। ಸಾರಿಸಾರಿಗೆ ಜನಕ ಕಾಂಬೆನೆಂದು ಸಾರುತಲಿ ತನ್ನ ಹೆಂಡತಿಯ ಒಡಗೂಡಿ। ದಾರಿಯ ಅರಸುತ್ತ ಹಿರಿಯ ಮಗನ ಕೂಡ। ವಾರ ವಾರಕೆ ಯೋಚನೆ ಮಾಡುವಂತೆ ಸಾಕುವ। ಭಾರಕರ್ತನಾಗಿದ್ದು ಗುಣಪೂರ್ಣ। ಹರಿ ಲಕುಮಿ ಮಾರುತ ದೇವನೊಡನೆ। ಧಾರುಣಿಯೊಳಗೊಬ್ಬ ಚಾರುವಾಕನಾಗಿ ಒಮ್ಮೆ ನನ್ನ ನೆನೆದವನ। ವಾರುತಿ ಕೆಳೆನೆ ಕಂಡನೆ ಎಂದು ಇನಿತು। ಪಾರತಂತ್ರನಾಗಿ ತಿರುಗುವ ನಮ್ಮ ಸ್ವಾಮಿ। ಆರಾದರಿಂದ ಉಂಟಿ ಅನುಕಂಪನೊ ಹರಿ ಹಾರೈಸುವರು ತನಗೆ ಭಕ್ತರೆ ಗತಿ ಎಂದು। ಪೌರಾಣಗಳಲಿ ಕೇಳಿ ಕೇಳುತದಿರುವ। ಕಾರುಣ್ಯ ಮೂರ್ತಿಯೆ ಕರುಣಾಳೊ ದಯಾಂಬುಧಿಯೆ। ಸೂರೆ ಕಾಣೊ ಭಕ್ತರಗೋಸುಗ ಚಿತ್ತ। ಮೀರದಿರೆಲೊಯಿದೆ ಇಷ್ಟಾರ್ಥವೆನ್ನು ಉ। ದ್ಧಾರನಾಗು ಹಲವು ಹಂಬಲವನ್ನು ತೊರೆದು। ಘೋರ ಕ್ಲೇಶ ನಾಶ ವಿಜಯ ವಿಠ್ಠಲ ನಿನ್ನ। ತಾರಕ ಮಾಡುವ ಭವಸಾಗರದಿಂದ ॥೫॥

### ಜತೆ

ಎಲ್ಲಿಗೆ ಪೋದರೇನು ಎಲ್ಲಿ ಇದ್ದರೇನು ।
ಒಲ್ಲೆನೆಂದರೆ ಅಭಯ ಕೊಡುವ ವಿಜಯ ವಿಠ್ಠಲಾ ॥೬॥



## ಸುಳಾದಿ-೬೬

ಡಂಬಾಚಾರದಿಂದ ವೃಥಾ ಜನರನ್ನು ಮೋಸಗೊಳಿಸದೆ ದುರಾಚಾರ ದೂರಗೈದು ಡಾಂಬಿಕ ತೊರೆದು ಅತಿ ಭಕುತಿಯಿಂದ ಶ್ರೀಹರಿಯನ್ನು ಗುಪ್ತದಲ್ಲಿ ಭಜಿಸುವದು.

## ರಾಗ-ಭೈರವಿ ಧ್ರುವತಾಳ

ಜಾತಿಕಾರನು ಒಂದು ಜೋಳಿಗಿ ಮಾಡಿಕೊಂಡು। ಯಾತರ್‍ಯಾತರ ಮರದ ಬೇರರದು ಚೂರ್ಣ। ವ ತುಂಬಿಕೊಂಡು ನಡು ಬೀದಿಯೊಳಗೆ ಬಂದು। ತಾ ಥು ಎಂತೆಂಬ ಗಾರುಡ ಮಂತ್ರವ। ಮಾತುಗಾರಿಕೆಯಿಂದ ಕಣ್ಣು ಮಸಕನೆ ತೋರಿ। ಬಾತಿ ಬಸಿದು ಪೊಟ್ಟೆಯ ಪೊರೆವ। ಜಾತಿಕಾರನಂತೆ ನಾನೊಬ್ಬ ವೇಷ ಧರಿಸೀ। ನೂತನ ಮಾಯದ ಬೆಡಗಿನಿಂದ। ಭೂತ ಸೋಂಕಿದ ಮಾನವನಂತೆ ಹಲವು ನೀ। ಕೇತನಗಳನು ತಿರುಗಿ ತಿರುಗೀ। ಆತುಮಾರ್ಥವಾಗಿ ಅಂಗಡಿ ವಿರಚಿಸಿ। ನೋತ ಪುಣ್ಯಗಳೆಲ್ಲ ಬರಿದುಗೈದು। ಭೂತ ಮಹೇಶ್ವರ ವಿಜಯ ವಿಠಲ ನಿನ್ನ। ಪ್ರೀತಿಯ ಬಡಿಸದೆ ಪಾಪಾತುರ ನಾನಾದೆ ॥೧॥

## ಮಟ್ಟತಾಳ

ಸೂಳೆ ಶೃಂಗರವನ್ನು ಮೇಲೂ ಮಾಡಿಕೊಂಡು। ವೇಳ್ಯ ವೇಳಿಗೆ ತನ್ನ ಕಾಲವ ಕಳೆವಂತೆ। ಆಳುಡಂಬಕನಾಗಿ ತೋಳು ಹಸ್ತವ ತಿರುಹಿ। ಕೇಳಿಕೆಯನು ಹೇಳಿ ಸಾಲುದಿನವ ಕಳೆದೆ। ಲೋಲ ಮಹಕೃತುವೆ ವಿಜಯವಿಠ್ಠಲ ಕರು। ಣಾಳು ಹೀನನಾಗಿ ಬಾಳಿದೆನೊ ಬಂದೂ ॥೨॥

## ತ್ರಿವಿಡಿತಾಳ

ಅನ್ನದಾನೀ ಎಂಬೊ ಪೆಸರು ಒಂದಲ್ಲದವನ। ಮನೆಯಲ್ಲಿ ಗಂಗಾ ಮೃತವೇ ವರ್ಜ। ವನ್ನು ಮಾಡಿಕೊಂಡು ಕೀರ್ತಿಯ ಪಡೆದಂತೆ। ಎನ್ನ ಭಾಗವತತನ ಇಂತಿಪ್ಪದಯ್ಯಾ। ಅನ್ಯರ ಕಣ್ಣಿಗೆ ಬಲು ರಮ್ಯವಾಗಿ ಪಾ। ವನನೆನಿಸಿಕೊಂಡೆ ಬಹಿರದಲ್ಲಿ। ಬಣ್ಣವಲ್ಲದೆ ಲೇಶ ಅಂತರ ಶುಚಿ ಇಲ್ಲಾ। ಬಿನ್ನಣದಲಿ ಹಗಲಿರುಳು ಪರರ। ಬಣ್ಣಿಸಿ ಹರಿದಾಸನೆಂದೆನಿಸಿದೆನೊ। ಎನ್ನ ನೋಡು ಬ್ರಹತ್ತ ವಿಜಯ ವಿಠಲರೇಯ। ನಿನ್ನಂಘ್ರಿ ಭಕ್ತಿ ಮಾರ್ಗವನ್ನು ಕಾಣೆನೊ ಜೀಯಾ ॥೩॥

### ಅಟ್ಟತಾಳ

ಭಕುತಿಯ ತೋರುವೆ ಭಕುತಿಗೋಸುಗ ಪೋಗಿ। ಕಕುಲಾತಿ ತೊರಿಯದೆ ಸಕಲ ಸೊಗಸಿನಿಂದ। ಹಶಲ ಮನಸಿನಲ್ಲಿ ಬಕನು ಕುಳಿತು ತನ್ನ। ಭಕುತಿಗೆ ಒಂದು ಕುಯುಕುತಿಯ ನಡಿಸಿ ಉ। ದಕ ತೀರವಿದ್ದಂತೆ ಭಕುತಿಯು ತೋರುವೆನೊ। ಸಕಲ ಜನರ ಮುಂದೆ ಭಕುತಿಯು ತೋರುವೆನು। ಸಕಲೇಶ ಕ್ಷೇತ್ರಜ್ಞ ಶ್ರೀ ವಿಜಯು ವಿಠಲರೇಯು। ಅಕಳಂಕನಾಗದೆ ಅಕಟ ಕುಮತಿಯಾದೆ ॥೪॥

### ಆದಿತಾಳ

ಚೋರನು ಸುಗುಣನಾಗಿ ಊರವಳಗೆ ತಿರುಗಿ ಪರರ। ಪಾರವಸ್ತು ಅಪಹರಿಸಿ ತೋರುವ ಸಜ್ಜನನಾಗಿ। ಊರು ಕೇರಿಯೊಳಗೆ ನಾನು ಸಾರ ಹೃದಯನೆನಿಸಿ ವಿ। ಕಾರತನವನು ಎಲ್ಲ ಬೀರಿ ಭಾಗ್ಯವಂತರಲ್ಲಿ। ಸೂರಿ ಗೊಂಬೆ ಹೊನ್ನು ಹಣವ ಮಾರಿಗೆ ನಿನ್ನ ಮಹಿಮೆ। ಮಾರಿ ಧನ್ಯನಾಗಿ ಉದರಪೂರವಾಗಿ ಪೊರದೆ ರಂಗ। ಶ್ರೀರಮಣ ಮಹಕ್ಷಯ ವಿಜಯ ವಿಠ್ಠಲ ನಿನ್ನ। ಆರಾಧನೆ ಬಿಟ್ಟು ವೃಥಾ ಭಾರವಾದೆ ಧರಣಿಯಲ್ಲೀ ॥೫॥

### ಜತೆ

ಗುಪ್ತದರ್ಶನೆ ಕೊಡೊ ಗುಣಗಣನಿಲಯಾನ ।
ಸಪ್ತವಾಹನ ನಮ್ಮ ವಿಜಯ ವಿಠಲನಿರುತಾ ॥೬॥



## ಸುಳಾದಿ-೩೭

ಇಂದ್ರಿಯ ನಿಯಾಮಕ ತಾತ್ವಿಕರ ಪ್ರಾರ್ಥನೆಗೆ ಸಕಲರೂ ಅನುಕೂಲ, ಶ್ರೀಹರಿಯ ಒಲಿಮೆ.

## ರಾಗ-ತೋಡಿ ಧ್ರುವತಾಳ

ಇಂದ್ರಿಯಂಗಳಿರ್ಯಾ ನಿಮಗೆ ವಂದಿಸಿ ನಮೊಎಂಬೆ। ಎಂದೆಂದಿಗೆ ಎನ್ನ ಪೊಂದಿಕೊಂಡು। ಸಂದೇಹಗೊಳಿಸದೆ ಸಂದಿಗೊಂದಿಗೆ ಎಳೆದು। ಮುಂದುಗೆಡಿಸಿ ಭೀತಿ ವಂದು ತೋರದಿರಿ। ಚಂದದಿಂದಲ್ಲಿ ನಿಮ್ಮಾನಂದ ಸ್ಥಾನದಲ್ಲಿ। ಬಂಧುಗಳಾಗಿ ಅಲ್ಲಿಂದ ತೊಲಗದಿರೀ। ಒಂದೇ ರೀತಿಯಲ್ಲಿ ಮುಕುಂದನ್ನ ಪಾದಾರ। ವಿಂದದಲ್ಲಿ ಭಕುತಿ ಕುಂದದಲೆ ನಡೆಸೋದು। ಹಿಂದಾಗದಲೆ ಬೇಕೆಂದು ದೃಢವಾಗಿ। ತಂದೆ ಹೃಷಿಕೇಶ ವಿಜಯ ವಿಠಲ ಹರಿಯ। ಸಂದರುಶನಕೆಲ್ಲ ಒಂದಾಗಿ ಬಲವಾಗೀ ॥೧॥

## ಮಟ್ಟತಾಳ

ಯಾತ್ರಿಗೆ ನಡಿ ನಡಿ। ಪಾತ್ರರ ಒಡಗೂಡಿ। ಸ್ತೋತ್ರವ ಪಠಿಸುತ್ತ। ಗಾತ್ರದೊಳಗೆ ಇದ್ದು ನೇತ್ರಾದಿಗಳೆ ಕಾಲ। ತ್ರಯವನೆ ತಿಳಿದು। ಧಾತ್ರಿಯೊಳಗೆ ನೀವ। ನ್ಯತ್ತರ ವಿಷಯಕ್ಕೆ। ಮಿತ್ರರಾಗದೆ ದಿವಸ। ರಾತ್ರಿಯಲ್ಲಿ ಬಿಡದೆ। ಧಾತ್ರಿನಾಮಕ ವಿಜಯ ವಿಠಲನ ಪದವಣು। ಮಾತ್ರ ಮರಿಯದಿರೀ। ಸೂತ್ರ ತಿಳಿದು ನೋಡಿ ॥೨॥

## ತ್ರಿವಿಡಿತಾಳ

ಏಕಾದಶಗಳು ಕೂಡಿ ಸಂತತದಲಿ ವಿ। ವೇಕರಾಗಿ ಶುದ್ಧ ಪ್ರವರ್ತಕ। ಜೋಕೆಯಿಂದಲಿ ಚರಿಸಿ ದುರುಳ ಚೇಷ್ಟೆಗಳು ನಿ। ರಾಕರಿಸಿ ಹತ್ತಿ ಬಂದು ಸೇರದಂತೆ। ಮಾಕಾಂತ ಮಹಾಸನ ವಿಜಯ ವಿಠ್ಠಲನ ಅ। ನೇಕ ಬಗೆಯಿಂದ ನಾಮಕಥೆಯ ಕೇಳಿ ॥೩॥

## ಅಟ್ಟತಾಳ

ಗ್ರಾಮೇಕ ರಾತ್ರಿಯ ವ್ರತವನ್ನು ಧರಿಸುತ್ತ। ನೇಮನಿತ್ಯ ನೈಮಿತ್ಯ ಕರ್ಮಂಗಳು ನೀ। ವು ಮರಿಯದಲೆ ಉಜಿಚಿತಾರ್ಥದಲ್ಲೀಗ।

ಕಾಮರಾಗಗಳೆಲ್ಲ ದೂರಾಗಿ ಓಡಿಸಿ। ಧೂಮರಜ್ಞಾನವ ಗಮಕದಲ್ಲಿ ಕಳೆದು। ಕಾಮಜನಕ ಕೃತು ವಿಜಯ ವಿಠ್ಠಲನ್ನ। ಕಾಮಿಸಿ ಹಗಲಿರಳರ್ಚಿಸಿ ನೋಡಿ ॥೪॥

**ಆದಿತಾಳ**

ಎತ್ತ ನೀವು ಪೋಗದಲೆ। ಉತ್ತಮ ನಡವಳಿಯಲ್ಲಿ। ಹೊತ್ತು ಹೊತ್ತಿಗೆ ಹರಿಗೆ ಕೈ। ಎತ್ತಿ ಕರಗಳ ಮುಗಿದು। ಅತ್ತಲಿತ್ತ ಚರಿಸದೆ। ಹತ್ತೆ ನಿತ್ಯ ನಿತ್ಯ ನೆನೆನೆನೆದು। ಉತ್ತಮ ಗತಿಗೆ ಸೇರುವದು।

**ಜತೆ**

ಸಕಲೇದ್ರಿಗಳಿರಾ ಎನ್ನಲ್ಲಿ ಪೊಂದಿಕೊಂಡು।
ಶಕುತನಾಮ ವಿಜಯ ವಿಠಲನ್ನ ಒಲಿಸೋದು ॥೬॥



**(೧೧) ಹರಿಭಕ್ತರ ಲಕ್ಷಣ; ಹರಿಭಕ್ತರಲ್ಲಿ ಭಕ್ತಿ ಮಾಡುವಿಕೆ**

## ಸುಳಾದಿ-೩೮

ಜ್ಞಾನಿಗಳಾದ ಹರಿಭಕ್ತರ ಲಕ್ಷಣ ಅವರು ನಿರ್ದೋಷಿಗಳೆಂದು ತಿಳಿಯುವದು.

**ರಾಗ-ರೇಗುಪ್ತಿ ಧ್ರುವತಾಳ**

ಬಲ್ಲವಗೆ ಭವಾಬ್ಧಿ ನೆಲ್ಲಿಕಾಯಿಯಂತೆ। ಮೆಲ್ಲನೆ ಇಡುವ ಹೆಜ್ಜೆಗೆ ಸಾಲದೋ। ಬಲ್ಲವನ ಉದರದೊಳಗೆ ಸರ್ವ ತೀರ್ಥಯಾತ್ರಿ ಬಲ್ಲವನ ಉದರದೊಳಗೆ ಸಕಲ ಕ್ಷೇತ್ರಾ। ಬಲ್ಲವ ಎಲ್ಲಿರೆ ಅಲ್ಲೆ ನಾರಾಯಣ। ವಲ್ಲಭೆ ಸಹಿತನಾಗಿ ನಲಿದಾಡುತಿಪ್ಪ। ಬಲ್ಲವನ ಬಳಿಯಲ್ಲಿ ಸರ್ವ ದೇವತೆಗಳು।

ಸಲ್ಲಲಿತವಾಗಿ ನಿಂದಿಪ್ಪರಯ್ಯಾ। ಬಲ್ಲವಗೆ ಸ್ವರ್ಗಾಪವರ್ಗದ ಪರವೇನೊ। ಬಲ್ಲವಗೆ ಇಲ್ಲೇ ಶ್ರೀವೈಕುಂಠವೊ। ಬಲ್ಲವನಾವನೊ ವಿಜಯವಿಠ್ಠಲರೇಯನ। ಬಲ್ಲವನೆ ಬಲ್ಲನು ಸರ್ವ ಕಾಲದಲ್ಲೀ ॥೧॥

## ಮಟ್ಟತಾಳ

ಸಿರಿ ಆತಗೆ ರಾಣಿ ಸರಸಿಜೋದ್ಭವ ಕುವರ। ಗರುಡ ಭುಜಂಗಮರು ವರರಥ ಪರಿಯಂಕ। ಗಿರಿಜೇಶನು ಮೊಮ್ಮಗನು ಸುರರು ಪರಿವಾರ। ಹರಿಗಿದು ನಿಜವೆಂದು ತರತಮ ಭಾವದಿಂದ। ಅರಿದು ನಡೆದವನು ಧರೆಯೊಳು ಬಲ್ಲವನು। ಸರಿಯಿಲ್ಲ ಅವನಿಗೇ ದುರಿತ ಕುಠಾರನು ವಿಜಯವಿಠ್ಠಲರೇಯ ಕರೆದು ಮನ್ನಿಪನವನ ಕರದಲ್ಲಿಗೆ ಬಂದು ॥೨॥

## ತ್ರಿವಿಡಿತಾಳ

ಹೊಯ್ಯಲ ಡಂಗುರ ಡಿಂಗರಿಗನಾಗಿ। ಕೈಯ ಬಾಯಿ ಮರಿಯದೆ ಕೂಗಿ ಚಪ್ಪಳೆ ಇಕ್ಕಿ। ಕೈಟಭರಾತಿಯೇ ಜಗಕೆ ಒಡೆಯನೆಂದು। ಥೈಯಂದು ಕುಣಿವುತ್ತ ತವಕದಿಂದಲಿ ಬೀರಿ। ಬಯಗೂ ಬೆಳಗು ಹೀಗೆ ಬಲ್ಲವನಾಗಿದ್ದು ಗೈಯಾಳ ಮತದವರ ಹಾರ ವಾದೀ। ದೈವ ಪುಂಗವ ಹರಿ ವಿಜಯ ವಿಠ್ಠಲನ್ನ। ಜಯಸುವನಿಲ್ಲೆಂದು ಐದು ಬಲುಜ್ಞಾನದಲ್ಲಿ ॥೩॥

## ಅಟ್ಟತಾಳ

ಹರಿಗುರು ವಿಶ್ವಾಸವುಳ್ಳ ವೈಷ್ಣವನೀಗ। ಹರಿದು ತೀರ್ಥಯಾತ್ರೆ ತಿರುಗಿ ತಿರುಗಲೇನು। ನಿರುತ ಜಲದಲಿ ಮುಣುಗಿ ಮುಣಗಲೇನು। ಪರಿ ಪರಿ ದಾನವ ಈಯ್ಯ ಇತ್ತರೆ ಏನು। ಧರಿಯೊಳಗಾ ನರ ಎಲ್ಲಿ ಇದ್ದರೆ ಏನು। ಅರಿಯದೆ ನರರವಂಗೆ ಎನಂದರೆ ಏನು। ಗರುಡನ ಪಕ್ಕದೊಳಿರಬಲ್ಲ ಜಾಣಂಗೆ। ಉರುಗನ ಬಳಗದ ಭಯವೆತ್ತಣದೊ ದೇವ।

ಅರಗಿನ ಪರ್ವತಕ್ಕೆ ಉರಿನಿಕ್ಕೆ ನಿಲ್ವದೆ। ಹರಿ ಶರಣರಿಗೆ ದುರಿತವೆತ್ತಲಿಹದೊ (ಮಹದುರಿತದೂರೆ)। ಪರತತ್ವ ವಿಜಯ ವಿಠ್ಠಲನ್ನ ಪೊಂದಿದವರ। ನರನೆಂದವರೆ ನಿತ್ಯನರಕವಾಸಿಗಳು ॥೪॥ (ನರನರಾವೆಂದವರು ವಾನರರು ("ಪಾಠಾಂತರ"))

**ಆದಿತಾಳ**

ಇಂತು ನಡದವನು ಸಂತತ ಶುಚಿಯನ್ನು। ಅಂತಕನಿಗೆ ಇವ ಸ್ನೇಹಿತನೆನ್ನಿಯೋಗಾ। ಪಂಥ ಬಲ್ಲವನೆನ್ನಿ ವೈಕುಂತ ನಗರಿಗೆ। ಚಿಂತಿಯ ಬಿಟ್ಟ ನಿಶ್ಚಿಂತನಿವನೆನ್ನಿ। ಮುಂತೆ ಪುಟ್ಟುವ ಜನನ ನೀಗಿಕೊಂಡವನೆನ್ನಿ। ಎಂಥ ದುರಿತವೆಲ್ಲ ಗೆದ್ದವನೆನ್ನಿ। ಚಿಂತೀತದಾಯುಕ ನಮ್ಮ ವಿಜಯವಿಠ್ಠಲಹರಿಯ। ಪಂಥ ಬಯಸುವಂಥ ಧೀರನು ಇವನೆನ್ನಿ ॥೬॥

**ಜತೆ**

ಬಲ್ಲವಗೆ ವಿದ್ಯಾ ಬಯಲಾಗಿ ತೋರೋದು ।
ಅಲ್ಲವೆಂಬುದು ಸಲ್ಲಾ ವಿಜಯವಿಠಲ ಬಲ್ಲ ॥೬॥



## ಸುಳಾದಿ-೭೯

ಭಗವದ್ಭಕ್ತರ ಲಕ್ಷಣ, ಭಾಗವತರ ಮಹಿಮಾಯುಕ್ತ ಮುಕ್ತಿ ಯೋಗ್ಯರ ಸಾಧನ ವಿಚಾರ.

**ರಾಗ-ಮುಖಾರಿ ಧ್ರುವತಾಳ**

ಎಲ್ಲಿದ್ದರೇನು ಸಿರಿ ವಲ್ಲಭನ ತೊಂಡರಿಗೆ। ಇಲ್ಲವಿಲ್ಲವೊ ದೋಷಯಳ್ಳನಿತಾದರು। ಕೊಳ್ಳಿಗೆ ಕ್ರಿಮಿಗಳು ಚಲ್ಲವರಿದು ಮುತ್ತಿ ನಿಲ್ಲದೆ ಬದುಕಿ ತಾವೆಲ್ಲ ಪೋದುದುಂಟೆ। ಸೊಲ್ಲು ಸೊಲ್ಲಿಗೆ

ರಂಗನಲ್ಲದಿನ್ನಿಲ್ಲವೆಂಬ। ಬಲ್ಲಿದ ಭಕುತಿ ಉಳ್ಳ ವೈಷ್ಣವರಿಗೆ। ಎಲ್ಲಿಯ ದೋಷ ಮತ್ತೆಲ್ಲಿಯ ಜನನ। ಬಲ್ಲವರಿಗೆ ಧ್ಯಾನದಲ್ಲಿ ಆನಂದವು। ಚಿಲ್ಲರ ಮಾರ್ಗ ಬಿಡು ವಿಜಯ ವಿಠಲ ತಿಮ್ಮ। ಸಲ್ಲಿಸುವನು ಮನ ನಿಲ್ಲಿಸಲು ॥೧॥

## ಮಟ್ಟತಾಳ

ತಪ್ಪದೆ ಎಣ್ಣಿಯ ಕೊಪ್ಪರಿಯೊಳಗವನ। ಅಪ್ಪನು ಬಿಸುಟಲು ಪುಷ್ಪಗಳಾದವು। ಸರ್ಪ ತಲ್ಪನ ಭಜಿಸುತಿಪ್ಪ ಮಹಾತ್ಮರಿಗೆ। ಕಪ್ಪು ಕಲುಷವ ಹಾರುತಿಪ್ಪವು ಪುಡಿಯಾಗಿ। ಮುಪ್ಪಿಲ್ಲದ ದೇವ ವಿಜಯ ವಿಠಲ ತಿಮ್ಮಪ್ಪನ ನಂಬಲು ವಪ್ಪುವ ಕೈವಲ್ಯಾ ॥೨॥

## ತ್ರಿವಿಡಿತಾಳ

ದಾರಿ ನಡದರೇನು ಧರ್ಮ ಮಾಡಿದರೇನು। ಊರು ಊರಿಗೆ ನಿತ್ಯ ತಿರುಗಾಲೇನು। ವಾರಿಗೆಯವರ ಕೂಡ ಹರಿದಾಡಿದರೇನು। ನೀರು ಕಾವಡಿ ನಿತ್ಯ ಹೊತ್ತರೇನು। ಮೂರಾರುಸಾರಿಗೆ ಉಂಡು ತಿಂದರೇನು। ವಾರ ಕಾಂತಿಯರೊಡನೆ ಇದ್ದರೇನು। ಪೋರರರೊಳಗೆ ಕೂಡಿ ಕುಣಿದರೇನು। ಆರ ಸೇರಿದರೇನು ಆರ ಸೇವಿಸಲೇನು। ನಾರಾಯಣನ ಪಾದದಲ್ಲಿ ಹಗಲಿರುಳು। ಸಾರುತ್ತಮನಬಿಟ್ಟ ಹರಿದಾಸರಿಗೆ। ಸೂರೆ ವೈಕುಂಠವೋ ಅವರಿಂದ ಸುತ್ತಲು। ಧಾರೆಯೊ ಕನಕ ಮಳೆ ಕಾಮಧೇನುವೊ ಆವಾಗ। ಸಾರ ಹೃದಯರೊಳಿಪ್ಪ ವಿಜಯ ವಿಠಲನ। ಕಾರುಣ್ಯವಾದರೆ ಘೋರ ಕರ್ಮಗಳುಂಟೆ ॥೨॥

## ಅಟ್ಟತಾಳ

ಜಾತ ರಹಿತ ಶ್ರೀನಾಥನ್ನ ಪಾದವ। ಆತುಮದೊಳಗಿಟ್ಟು ಮಾತು ಮಾತಿಗೆ ಬಲು। ಪ್ರೀತಿಲಿ ಲಕುಮೇಶ ಮಾತಾನೀತನು ಸರ್ವ। ಈತನು ನಮಗೆಂದು ತಾ ತಿಳಿದವರಿಗೆ। ಯಾತಕೆ ಸ್ನಾನ ಸಂಧ್ಯಾನ ಕರ್ಮಂಗಳು।

ಪ್ರಾತರಾಂಭದಿ ರಾತ್ರಿವಿಡಿವ ಮಂತ್ಯ। ಘಾತೀಸಿಕೊಂಡೀಗ ಬಾತಿಬಸಿವದ್ಯಾಕೆ। ತಾತನಂತಿಪ್ಪನು ವಿಜಯ ವಿಠಲ ಸುರ। ವ್ರಾತಕ್ಕೆ ಮೀರಿದ ನಾಥನೊ ಸರ್ವದಾ ॥೪॥

### ಆದಿತಾಳ

ನಿಂತಲ್ಲಿ ಕುಳಿತಲ್ಲಿ ಪಂಕ್ತಿ ಸಾಗಿದಲ್ಲಿ। ಪಂಥದಲ್ಲಿ ಏಕಾಂತದಲ್ಲಿ ಕ್ರಾಂತೆಯ ಸಂಗಡದಲ್ಲಿ। ಸಂತರ ಬಳಿಯಲ್ಲಿ ತಂತಿನಲ್ಲಿ ವನಾಂತರದಲ್ಲಿ। ವಂತು ವಂತು ವಂಶಂಗಳಲ್ಲಿ। ಪಂಥ ಮಾಡುವಲ್ಲಿ ಭ್ರಾಂತಿಯಲ್ಲಿರಲಿ ನಿಶ್ವಾಂತದಲ್ಲಿ। ಚಿಂತಿಯೊಳಿರಲಿ ನಿಶ್ಚಿಂತಿಯಲ್ಲಿರಲಿ। ಎಂತಾದರೂ ಮನದಂತೀರಲಿ। ಸಂತತ ಹರಿಪಾದ ಕ್ರಾಂತನಾಗಿ ತನ್ನ। ಸಂತರಿಸುವನ ನಿರಂತರದಲ್ಲಿ। ಅಂತರಂಗದೊಳಿಟ್ಟು ಅಂತರ ಮುಖನಾಗಿ। ಸಂತತ ಪಾಡುವ ಅಂತಿಜಗೆ ಭಯ। ಎಂತುಂಟೊ ಪೇಳಿರೊ ಅಂತು ಬಲ್ಲವರು। ಕೌಂತೇಯ ಸಹಾಯ ವಿಜಯ ವಿಠಲನಂಘ್ರಿ। ಚಿಂತೆ ಮಾಡುವ ಕುಲವಂತಗೆ ಭಯವೆ ॥೫॥

### ಜತೆ

ಹ್ಯಾಗಾದರಿರಲಿ ಶ್ರೀವಿಜಯ ವಿಠಲನಂಘ್ರಿ ।
ಭೋಗದೊಳಿಟ್ಟವನೆ ಮುಕ್ತಿ ಪಥಕೆ ಯೋಗ್ಯಾ ॥೬॥



## ಸುಳಾದಿ-೨೦

ಹರಿಭಕ್ತನಾದ ಹರಿದಾಸನು ಆಚರಿಸುವ, ಬಗೆ ಲಕ್ಷಣ

### ರಾಗ-ಭೈರವಿ ಧ್ರುವತಾಳ

ಹರಿದಾಸರ ಲಕ್ಷಣ ಇರಬೇಕು ಈ ಪರಿ। ಗರುವ ಕೋಪ ಮದ ಮತ್ಸರಾದಿ ಬಿಡಬೇಕು। ಮರುತ ಮತಕೆ ಎಲ್ಲಿ ಸರಿಗಾಣೆನೆನುತಲಿ।

ಧರಿಯೊಳು ಕೂಗಿ ಡಂಗುರವ ಹೊಯಲಿಬೇಕು। ಎರಡಾರು ಪುಂಡ್ರವ ವಿರಿಚಿಸಿ ಪಂಚಮುದ್ರಾ ಧರರಾಗಿ ತಪ್ತಾಂಕಿತ ಧರಿಸಬೇಕು ಭುಜದಲ್ಲಿ। ಶಿರಿಬೊಮ್ಮ ಹರಾದ್ಯರಿಗೆ ತರಮ್ಯ ಭಾವದಿಂದ। ಎರಗಿ ಎನ್ನೊಳಗಿದ್ದು ಪೊರಿಯಂದಾಡಲಿಬೇಕು। ಕರಣ ನಯನ ಶ್ರವಣ ಚರಣದಾಸ ವದನ। ಪರಿ ಪರಿ ಅಂಗಗಳು ಹರಿವಿತ್ತವೆನ್ನಬೇಕು। ಗುರುಹಿರಿಯರಿಗೆ ಆದರ ಪೂರ್ವಕದಿಂದ। ಕರವ ಮುಗಿದು ನಮಸ್ಕರಿಸಿ ನುತಿಸಬೇಕು। ನೆರೆ ಹೊರೆಂಬುವರಿಗೆ ನಿರುತ ಇದ್ದರು ಬೇ। ಸರಗೊಳಿಸದೆ ಸಂಚರಿಸುತ್ತಲಿರಬೇಕು। ಹರಣ ಹರಿಯಾಧೀನ ನೆರದ ಸತಿಸುತರು। ನಿರುತ ಹರಿಗೆ ದಾಸರು ಎಂದು ಗುಣಿಸಬೇಕು। ಪರಮ ಭಕುತಿ ಜ್ಞಾನ ವಿರಕುತಿ ಮಾರ್ಗವು। ದೊರಕುವದಕ್ಕೆ ಸಜ್ಜನರ ಸಂಗವಾಗಬೇಕು। ಹರಿವಾಸರ ಹರಿಚರಿತೆ ಹರಿಶ್ರವಣ ಹರಿಪೂಜೆ। ಹರಿಸ್ಮರಣೆ ಅಂತರ ಶುಚಿ ಇರಲಿ ಬೇಕು। ಹರಿಪರದೇವತಿ ವಿಜಯ ವಿಠಲ ಗತಿ। ಸುರರಾದ್ಯರಿಗೆಂದು ಉರವಣಿಸಿ ನುಡಿಬೇಕು ॥೧॥

## ಮಟ್ಟತಾಳ

ಪರಧನ ಪರಸತಿ ಪರನಿಂದ್ಯದವರ। ಸರಸದಲ್ಲಿರದೆ ಚರಿಸಬೇಕು ದೂರ। ನರರು ಬೈದರೆ ಆದರವೆಂದು ತಿಳಿದು। ಹರುಷಬಡಲಿಬೇಕು ಸುರತರು ದೊರೆತಂತೆ। ಕರದು ಮನ್ನಿಸಿದರು ಇರಳು ಹಗಲು ಪಾಲುಗರೆವ ಸುರಧೇನು ಬರಡಾಗಿನಿಂದ ಪರಿಯಂದೆನಬೇಕು। ನೆರದು ಸಂದಣಿಯೊಳು ಚರಿಸಬಾರದು ಪೋಗಿ। ಬರಿದೆ ಕುಳಿತು ಹಾಳ ಹರಟಿಯ ಪೇಳದಲೆ। ಮರಿಯದೆ ಸೊಲ್ಲು ಇರಬೇಕು ತನ್ನೊಳಗೆ। ಪರಮ ತತ್ವವ ತಿಳಿದು ದುರುಳರಿ। ಗರುಹದಲೆ ಸುರಿಯಬೇಕು ಸುಖವ। ಮರಳೆ ಮರಳೆ ನೆನೆದು ಪರಮ ಗುಪ್ತನಾದ ವಿಜಯ ವಿಠ। ಲರೇಯನ ನೆರೆ ನಂಬಲಿಬೇಕು ಕುರುಹ ಕಾಣುವಂತೆ ॥೨॥

### ತ್ರಿವಿಡಿತಾಳ

ಲೇಸಾದರು ಹರಿಯ ಕಾರುಣ್ಯವೆನಬೇಕು। ಲೇಸಾಗದೆ ಬಲು ಮೋಸದಲ್ಲಿ। ಕ್ಲೇಶ ಬಂದಡರಲು ಏಸು ಜನ್ಮದ ಪಾಪ। ರಾಸಿಯ ಫಲಿಸಿತೊ ಎನ್ನಕರ್ಮ। ಈ ಶರೀರಕೆ ಬಂದು ಪ್ರಾಪ್ತವಾದದ್ದು ಅನುಭವಿಸದಲೇ ಬಿಡದು ಸಿದ್ಧವೆಂದು। ಲೇಶವಾದರು ದುಃಖಹಚ್ಚಿಕೊಳ್ಳದೆ ಮಹಾ ತೋಷದಲ್ಲಿರಬೇಕು ನೋಯದಲೆ। ಶ್ರೀಶನೆ ಗತಿ ಎಂದು ಬೇಸರದಲೆ ಬಂದ। ಕ್ಲೇಶಗಳುಣಬೇಕು ಬಂದಾಗಲು। ದೇಶ ಕಾಲಗುಣ ಪರಿಪೂರ್ಣಹರಿ ಇರೆ। ಘಾಸಿ ಎಲ್ಲಿದೊ ಎಂದು ನಲಿಯಬೇಕು। ಶ್ರೀಸತಿ ಕಾಲವೇದ ಜೀವ ಪ್ರಳಯದಲ್ಲಿ। ನಾಶವಾಗವು ಭೇದ ಅನಲಿಬೇಕು। ವ್ಯಾಸ ವಚನ ಮಧ್ವರಾಯರು ಮಾಡಿದ ಭಾಷ್ಯ ಸಮ್ಮತದಿಂದ ನೋಡಬೇಕು। ವಾಸುದೇವ ನಮ್ಮ ವಿಜಯ ವಿಠಲನ್ನ ದಾಸಾನುದಾಸರ ದಾಸನಾಗಲಿಬೇಕು ॥೩॥

### ಅಟ್ಟತಾಳ

ಬಡತನ ಬಂದರು ಹಿಗ್ಗುತಲಿರಬೇಕು। ಜಡನಾಗಿ ಬಾಹಿರದಲ್ಲಿ ತೋರಲಿಬೇಕು। ಅಡಿಗಡಿಗೆ ಲಜ್ಜೆಗೆಡಬೇಕು ಸರ್ವದ। ಒಡಲಿಗೆ ಚಿಂತಿ ಮಾಡದೆ ದೃಢ ಇರಬೇಕು। ಒಡವೆ ವಸ್ತ ತಂದೆ ತಾಯಿ ತ್ರಿಲೋಕದ। ಒಡಿಯ ಶ್ರೀಕೃಷ್ಣನೆಂದು ಬಿಡದೆ ನಂಬಲಿಬೇಕು। ಯಡಿಗೆ ಪರಿಮಿತ ಧಾನ್ಯ ತರಲಿ ಬೇಕು ಕೊಡಬೇಕು ಕೊಡಬೇಕು ಒಬ್ಬರಿಗದರೊಳು। ಕಡುಗಲಿ ವಿಜಯವಿಠಲ ರಂಗನ ಪಾದ। ಪಿಡಿದು ಭಜಿಸಬೇಕು ನಲಿನಲಿದಾಡುತ್ತ॥೪॥

### ಆದಿತಾಳ

ಉಟ್ಟದಕ್ಕಿಂತ ಮೇಲು ತೊಟ್ಟದಕ್ಕಿಂತಮೇಲು। ಇಟ್ಟದಕ್ಕಿಂತಮೇಲು ವಿಠ್ಠಲನ್ನ ಸ್ಮರಣೆ ಮನ। ಮುಟ್ಟಿ ನಮಿಸಲಿ ಬೇಕು ಬಲುವ ಹಿತದಲ್ಲಿ ಅಟ್ಟಹಾಸದಲಿ ಚೀರಿ। ಚಿಟ್ಟಕ್ಕಿ ಕೂಗಿ ತೂಗುತ ಇಷ್ಟ ಸುಖಕ್ಕಿಂತ ಮೇಲು।

ದಟ್ಟಡಿಯಿಂದ ತಿಳಿದು ನಿಷ್ಠೆಯಿಂದ ಇರಲು। ಇಷ್ಟ ಪ್ರಾಪುತ ಅವರಿಗರಿಷ್ಟವು ಪರಿಹಾರ। ಹುಟ್ಟು ಸಾವಿಲ್ಲದ ವಿಜಯ ವಿಠಲ ತಾನು। ಕೊಟ್ಟು ಸಾಕುವ ದಯವಿಟ್ಟು ದಾಸನ ಮಾಡಿ ॥೭॥

**ಜತೆ**

ಈ ಪರಿ ಇದ್ದವಂಗೆ ಅನಂತ ಜನುಮಕ್ಕೆ ।
ತಾಪತ್ರಯಗಳಿಲ್ಲ ವಿಜಯ ವಿಠ್ಠಲ ಬಲ್ಲ ॥೮॥

❖ ❖ ❖

## ಸುಳಾದಿ-೭೧

ಶ್ರೀ ಹರಿಭಕ್ತರ ಮಹಿಮಾ.

### ರಾಗ-ತೋಡಿ ಧ್ರುವತಾಳ

ಕಂತು ತಾತನ್ನ ಭಜಕರಾನಂದಾ ವನಧಿಯೊಳು। ಸಂತತ ಮಗ್ನರಾಗಿ ಇಪ್ಪರೈಯ್ಯಾ। ನಿಂತಲ್ಲಿ ಕುಳಿತಲ್ಲಿ ನಾನಾ ವ್ಯಾಪಾರದಲ್ಲಿ। ಚಿಂತಿಸುವರು ಹರಿಯ ವ್ಯಾಪ್ತಿಯನ್ನು। ಅಂತರಂಗದಲ್ಲಿ ಅಜ್ಞಾತ ಕಾಲದಲ್ಲಿ। ಅಂತುವಿಲ್ಲದಲೆ ನಿಸ್ಸಂಗದಿ। ಎಂತು ಪೇಳಲಿ ಅವರ ಉತ್ಕೃಷ್ಟ ಸೌಭಾಗ್ಯ। ನಂತಕಲ್ಪಕೆ ಲೇಶ ಕಡಿಮೆ ಇಲ್ಲ। ಸಂತಾಪವೆಂಬೋದೆ ಮುಟ್ಟಲಂಜುವದು ಏ। ಕಾಂತಿಗಳಾಗಿ ಸಂಚರಿಸುವರೂ। ಭ್ರಾಂತಿಗೊಳ್ಳರು ನಾನಾವಿಪತ್ತು ಬಂದರೂ। ಸಂತೋಷದಲ್ಲಿಪ್ಪರು ಭಯವಿಲ್ಲದೆ। ಗ್ರಂಥಿ ಬಿಡಿಸಿಕೊಂಬ ಉಪಾಯ ಆವಾಗ। ಚಿಂತಿಸುವರು ಗುಪ್ತದಲ್ಲಿ ಮನದಿ। ದಂತಿ ಪೋದಂತೆ ಪೋಗುವರೆಂದು ಪೇಳೆ ಸಣ್ಣ। ಪಂಥದಲಿ ಆನೆ ತಿರುಗವದೇ। ಇಂತು ಗ್ರಹಿಸಬೇಕು ಧಾರುಣಿಯೊಳಗಿದ್ದ। ಸಂತರು ಸ್ವಲ್ಪ ಬೀದಿ ಮುಟ್ಟುವರೇ। ಮುಂತೆಮುಂತಾಗಿ ಶೋಭನ ಮಾರ್ಗದಲ್ಲಿ ನಿ। ರಂತರ ಚರಿಸುವರು

ನಿರ್ವ್ಯಾಜ್ಯದಿ। ಮಂತ್ರ ಮಂಗಳ ಕರ್ಮ ಗುಣ ರೂಪ ಕ್ರಿಯೆ ಭೇದ। ತಂತುಗಳಿಗೆ ಹರಿನಿಯಾಮಕ। ಅಂಥದೆ ಹರಿ ಇಚ್ಛೆ ಸ್ವರೂಪಭೂತವೆನ್ನಿ। ಎಂಥವರೊಳಗಂಥ ಪ್ರೇರಣೆಯಿಂದ। ಅಂತರಾತ್ಮಕನಾಗಿ ನಡಿಸುವನೆಂದು ಸುಧಾ। ಗ್ರಂಥಾ ಅನುಸರಿಸಿ ತಿಳಿದಿಪ್ಪರೂ। ವಂತು ವಂಶಗಳಿಲ್ಲಾ ಅವರವರ ಯೋಗ್ಯತಾ। ದಂತೆ ನಡಿಸುವ ಸ್ವಾಮಿ ಎಂದೂ। ಶಾಂತ ಮೂರುತಿ ನಮ್ಮ ವಿಜಯವಿಠಲನ್ನ ನಿ। ಶ್ಚಿಂತರಾಗಿ ಧ್ಯಾನ ಮಾಳ್ಪರು ಹೃದಯದಲ್ಲಿ ॥೧॥

## ಮಟ್ಟತಾಳ

ಹರಿ ಇಚ್ಛೆಯಿಂದ ಬಂದದ್ದು ಅನುಭವಿಸಿ। ಚರಿಸುವರು ಕ್ಲೇಶತೋಷ ಹಚ್ಚಿಕೊಳ್ಳದೆ। ಗುರುಹಿರಿಯರು ತಿಳಿದು ಅರುಹಿದ ಉಪದೇಶ। ತರತಮ್ಯ ಭಾವದಿಂದ ಎಣಿಸಿ ಗುಣಿಸುವರು। ಕುರುಹು ಬಿಡರು ತಾವು ನಿರೀಕ್ಷಿಪ ಸ್ಥಾನದಲ್ಲಿ। ಇರುಳು ಹಗಲು ಅಲ್ಲೆ ಯೋಚಿಸುವರು ನಲಿದು। ಕರುಣಾಕರನಾದ ವಿಜಯ ವಿಠಲರೇಯನ। ಸ್ಮರಿಸುವರು ತಮ್ಮ ಮನಸು ಪೋದಕಡಿಗೆ ॥೨॥

## ತ್ರಿವಿಡಿತಾಳ

ಇಂದ್ರಿಯಗಳಿಗೆ ವಿಷಯಂಗಳೆರಡಕ್ಕೆ ಸಂ। ಬಂಧವಾಗುವಲ್ಲಿ ನಿತ್ಯಾನಿತ್ಯಾ। ಇಂದಿರೆ ಅರಸ ಬೊಮ್ಮಾದ್ಯರ ಸಹಿತ ಬಲು। ಮಂದಿ ತಾತ್ವಿಕರಲ್ಲಿ ತೊಲಗದಲೇ। ಪೊಂದಿಕೊಂಡಿಪ್ಪರು ಮೂರು ಬಗೆಯಲ್ಲಿ। ಸಂದೇಹವಿಲ್ಲವೋ ನುಡಿಸಿದ್ದವೊ। ಎಂದೆಂದಿಗೆ ತತ್ತಸ್ಥಾನದಲ್ಲಿದ್ದವರಾ। ದ್ವಂದ್ವಾರಹಿತರಾಗಿ ಏಕಾವೆಂದು। ಹಿಂದು ಪೋಗದಲೆ ಚಿಂತಿಸಿದವ ಬಲು ಜ್ಞಾನಿ। ನಂದವಾಗಿ ಇಪ್ಪ ಎಲ್ಲಿದ್ದರೂ। ಶಿಂಧುಶಯನ ನಮ್ಮ ವಿಜಯ ವಿಠ್ಠಲರೇಯನ। ವಂದಿಸುವ ಜನರಿಗೆ ಪ್ರತಿಬಂಧಕವಿಲ್ಲಾ ॥೩॥

### ಅಟ್ಟತಾಳ

ತುಂಬಿದಕೊಡ ತುಳುಕುವದೇನೊ ಮರುಳಾ। ಅಂಬುಜನಾಭನ ನಂಬಿದವರ ಜ್ಞಾನ। ಇಂಬು ಕೊಡದು ಕಾಣೊ ಪಾಪದ ಮಾರ್ಗಕೆ। ಕೊಂಬೆ ಇದ್ದುನ್ನತ ಕೊಂಬೆಗೇರಿದಂತೆ। ಹಂಬಲಿಸುವದು ಗತಿಸಾಧನವನ್ನು। ಪೊಂಬೊಟ್ಟಿ ಕೆಸರೊಳು ಬಿದ್ದರಾಗದರ। ಗಂಭೀರ ಬೆಲೆ ಕೊರತೆಯಾಗುವದೇ। ಕಂಬು ಚಕ್ರಾಂಕಿತ ವಿಜಯ ವಿಠಲರೇಯನ। ಅಂಬರಂಬರದಲಿ ಕಾಣು ಮಾನವ ಮಾಣಿ ॥೪॥

### ಆದಿತಾಳ

ಜ್ಞಾನಿಯಾದವನಿಗೆ ಕರ್ತೃತ್ವವೆಂಬೊದಿದೆ। ಶ್ರೀನಾಥ ಮಾಡಿಸಿದ ವ್ಯಾಪಾರ ತರುವಾಯ। ತಾನದು ತಿಳಿವದು ಇಷ್ಟೆ ಮಾತುರ ಉಂಟು। ಏನೆಂಬೆ ಇದಕ್ಕಿಂತ ಅಧಿಕ ಮತ್ತಾವದು ಕಾಣೆ। ಆನಂದ ಮತಿಕೊಡುವ ವಿಜಯ ವಿಠಲ ತಾನೆ ಪರಿಪಾಲಿಸುವ ಆ। ತನ ಪ್ರೇರಣೆಯಿಂದ ನಿತ್ಯ ತಿಳಿಯೋ ॥೫॥

### ಜತೆ

ಆವಾಗ ಹರಿಲೀಲೆ ಕೊಂಡಾಡಿದ ಜನರು।
ದೇವೇಶ ವಿಜಯ ವಿಠ್ಠಲನಂತೆ ನಡೆವರೂ ॥೬॥



## ಸುಳಾದಿ-೨೧

ಭಕ್ತರ ವಿಷಯಾದಿಗಳಿಂದ ನಿರ್ಲಿಪ್ತ ಮಾಡುವಿಕೆ ಭಕ್ತರಾಧೀನನಾಗಿರುವಿಕೆ ಭಕ್ತರ ದೃಷ್ಟಾಂತ, ಭಕ್ತರಿಗೊಶನಾಗುವಿಕೆ, ನವವಿಧ ಭಕ್ತಿ ಮುಖ್ಯ ಸಾಧನ,

## ರಾಗ-ರೇಗುಪ್ತಿ ಧ್ರುವತಾಳ

ಮನ ದುಸ್ಸಂಗತಿಗೆ ಯೋಚನೆ ಮಾಡಿದರೆ ಯೋ। ಚನೆ ಮಾಡಲೀಸಯ್ಯಾ ಯೋ। ಚನ ಮಾಡಿದರೆ ಅಲ್ಲಿ ಎರಗಲೀಸಯ್ಯಾ। ಮನವೆರಗಿದರೆ ಅತ್ತ ಪೋಗಲೀಸಯ್ಯಾ। ಅ ಅ ಅ ಅ। ಕ್ಷಣ ಪೋದರೆ ಅಲ್ಲಿ ನೋಡಲೀಸಯ್ಯಾ। ನೆನಿಸಿ ನೋಡದಿರು ನಿಲ್ಲರ ಕುಳ್ಳಲಾಲೀಸಯ್ಯಾ। ಮನದುಸ್ಸಂಗತಿಗೆ ಅನುವಾಗಿ ಅಲ್ಲೆಲ್ಲಿ ಮಾತಾಡಲೀಸಯ್ಯಾ। ಬಿನಗು ಮಾತಾಡಿದರು ಅಪವಾದ ಬರಲೀಸಯ್ಯಾ। ಜನರಪವಾದವು ಬಂದರು ಭಕ್ತನಿಗೆ ಇರಲಿಸಯ್ಯಾ। ಘನ ಪಾಪಂಗಳು ಪ್ರಧ್ವಂಸ ಮಾಡುವ ದೇವ। ನಿನಗಾವದೆದುರೆ ನಿನಗೆಣೆ ಗಾಣೆ ನಿನ್ನ। ಮಣಿ ಭೂಷಣಂಘ್ರಿ (ಮಾಣೆ) ಗೆಣೆಗಾಣೆ। ನಿನಗೆ ನಮೊ ನಿನ್ನ ಗುಣಕರ್ಮಂಗಳಿಗೆ ನಮೊ। ಎನಿತೊ ನಿನ್ನ ಮಹಿಮೆ ಮನ ಮೆಚ್ಚ ಭಕ್ತರಿಗೆ। ಉಣಿಸಿ ಉಡಿಸಿ ನೋಡಿ। ಮನ ಯರಗಿದ ವಂಚನೆ ಪ್ರಯೋಜನಂಗಳು। ಅಣಗೊತ್ತಿ ಕಾಪುತಿಪ್ಪ ಅಣೋರಣಿ ಅಹಾವಿಭುವೆ। ವಿಜಯ ವಿಠಲರೇಯ ಮನದುಸ್ಸಂಗತಿಗೆ। ಯೋಚನೆ ಮಾಡಲೀಸಯ್ಯಾ ॥೧॥

## ಮಟ್ಟತಾಳ

ಭಕುತಿ ಎಂಬೊ ಕರ್ದಮದೊಳಗೆ। ಅಖಿಲ ಬಲವಂತ ಹರಿತಾ ಸಿಗಬಿದ್ದು। ದಿಕ್ಕು ಗೆಡುವನಯ್ಯಾ। ಭಕುತಿ ಎಂಬೊ ಪಾಶಕ್ಕೆ ವಶವಾಗಿ। ಲಕುಮಿ ವಲ್ಲಭ ಒಂದಡಿ ಇಡಲಾರ। ಭಕುತಿ ಎಂಬೊ ತೊಡರಿಗೆ ತಗಲಾಗಿ ಮುಕುತೇಶ ಕೃಷ್ಣ ತೊಲಗದೆ ಇಪ್ಪನಯ್ಯಾ ಭಕುತಿ ಎಂಬೊದು ಮಾವುತನೋಪಾದಿ। ಅಕಟ ದಿಕ್ಕರಿಯಂತೆ ಹರಿಕೇಳುತಲಿಪ್ಪ। ಭಕುತಿ ಎಂದೆಂಬೊ ವಸ್ತ ಬಚ್ಚಿಟ್ಟುಕೊಳ್ಳಿ। ಕಕುಲಾತಿಯಿಂದ ಹರಿ ಬೆಂಬಲವಾಹ। ಭಕುತೀಗೆ ಈಡಿಲ್ಲ ಭಕುತಿ ಕೇಡಿಲ್ಲ। ಭಕುತಿಯ ಸಂಪಾದಿಸಿ (ಸಾಧಿಸಿ) ರೊ ಭಕುತಿ ಉಳ್ಳ ಮನುಜ। ಮುಕುತನೊ ಮುಕುತನೊ। ಭಕುತಿಗೆ ಒಲಿದಂತೆ ಮತ್ತಾವದು ಅಲ್ಲ। ಅಕಳಂಕ ಚರಿತ ವಿಜಯವಿಠಲರೇಯ। ಭಕುತಿಗೆ ಮನಸೋತು ಮೌನವಾಗಿ ನಿಲುವಾ ॥೨॥

### ತ್ರಿವಿಡಿತಾಳ

ಭಕುತಿಗೆ ಸಿಗಬಿದ್ದು ಭಂಡಿನಡಿಸಿದ ನೋಡು। ಭಕುತಿಗೆ ತೊಲಗದೆ ಮುನಿಯ ತೇರನೆ ಎಳೆದಾ। ಭಕುತಿಗೆ ವಶವಾಗಿ ಸೌಭಾಗ್ಯವನೆ ಇತ್ತಾ। ಭಕುತಿಗೆ ಮರುಳೆನಿಸಿ ಆಳಾಗಿ ಸೇವಿಸಿದಾ। ಭಕುತಿಗೆ ಮೀರದೆ ವಿದುರನಲ್ಲಿ ಉಂಡಾ। ಭಕುತಿಗೆ ಒಳಗಾಗಿ ತನಗೆ ತಾನೆ ಸೋತಾ। ಭಕುತಿ ಉಳ್ಳವರಿಂದ ಹರಿ ಮಾರಿಸಿಕೊಂಬಾ। ಭಕುತಿ ಎಂಬೊದೊಂದು ಬಲವುಳ್ಳರೆ ಹರಿ। ಶಕುತನಾದರು ಹೇಳಿದಂತೆ ತಾ ಮಾಡುವಾ। ಭಕುತಿಯೆ ಪಾಪ ಬೀಜಕೆ ಕಾರಣ ಸುಡುವಲ್ಲಿ। ಭಕುತಿಯೆ ಪುಣ್ಯ ಬೆಳಿಸಿಗೆ ಅಮೃತ ವೃಷ್ಟಿ। ಭಕುತ ವತ್ಸಲ ನಮ್ಮ ವಿಜಯ ವಿಠಲನಲ್ಲಿ। ಭಕುತಿಯ ಮಾಡಿರೊ ಭಕುತರೊಡಗೂಡಿ ॥೩॥

### ಅಟ್ಟತಾಳ

ದಾನ ಧರ್ಮಕ್ಕೆ ಶಿಲುಕ। ಸ್ನಾನ ಮೌನಕೆ ಶಿಲುಕಾ। ಗಾನ ಯಾಗಕೆ ಶಿಲುಕ। ಜ್ಞಾನಯೋಗಕೆ ಶಿಲುಕಾ। ಧ್ಯಾನಕ್ಕೆ ಕುಣಿತಕ್ಕೆ ಶಿಲುಕ। ಕಾಣಿಕೆ ಕೊಟ್ಟರೆ ಶಿಲುಕಾ। ಏಣಿಸಿ ಜಪಿಸಲು ಶಿಲುಕ। ಕ್ಷೋಣಿಚರಿಸಲು ಶಿಲುಕಾ। ನಾನಾ ವ್ರತ ಮಾಡಲು ಶಿಲುಕ। ಏನೇನು ಕರ್ಮಕ್ಕೆ ಶಿಲುಕಾ। ಮಾಣದೆ ಧೃಡಭಕ್ತಿ ಮಾತುರವಿದ್ದರೆ। ತಾನಾಗಿ ಕರೆಯದೆ ಬಳಿಯಲ್ಲಿ ಬಂದೀಗ। ಕಾಣಿಸಿಕೊಂಬನು ಭಕ್ತನಿಗೆ ಅನುದಿನ। ಏನೆಂಬೆನೊ ಶಿರಿಯರಸನ್ನ ಲೀಲೆಗೆ ಅನಿರ್ಜರರಂದು ಗುಣಿಸಿ ಎಣಿಸುವರು। ನಾನೆ ಎಂದವನಿಗೆ ಎಂದಿಗೂ ಒಲಿಯನು। ಮಿನಕೇತನಯ್ಯಾ ವಿಜಯ ವಿಠಲರೇಯಾ। ಮಾನಸ ಭಕುತಿಗೆ ಲೇಶ ಆಲಸ (ಆಯಾಸ) ವಿಲ್ಲಾ ॥೪॥

### ಆದಿತಾಳ

ಸಿರಿಗೆ ಹೇಳದೆ ಕರಿಯ ಕಾಯ್ದ ಸಿರಿಯ ಹಂಗೇನ್ಯೆ। ಪರಮೇಷ್ಟಿ ಅರಿಯದೆ ಪಾರ್ಥನ ಸಲುಹಿದಾ। ಪರಮೇಷ್ಟಿ ಹಂಗೇನ್ಯೆ ಹರನ ಓಡಿಸಿ

ಅಂ। ಬರೀಷನ ಕಾಯ್ದಾ ಹರನ ಹಂಗೇನ್ಯೆ। ಸುರಪನ ಭಂಗಿಸಿ ಗೋಕುಲ ಕಾಯದಾ। ಸುರಪನ ಹಂಗೇನ್ಯೆ। ಶರಣರಿಗಾಡಲು ತನ್ನವರಾದರು। ಜರಿದು ಬಿಡುವನಯ್ಯಾ ಶರಣರಿಗೆ ಪಂಚಪ್ರಾಣನಾಗಿ ಹರಿ। ಪೊರೆವನು ಪ್ರತಿದಿನ ವೈ। ದುರುಳತನದಲ್ಲಿ ಅಜಮಿಳ ಕೆಟ್ಟರೆ। ಸ್ಮರಿಣಿಗೆ ಕಾಯ್ದನೋಡ್ಯೆ ಹರಿ ಮತ್ತೊಂದನು ವಲ್ಲನುಭಕುತಿ ಪರಮ ಸುಸಾಧ್ಯನ್ಯೆ। ಪರಮ ಪುರುಷ ನಮ್ಮ ವಿಜಯ ವಿಠಲಾ। ಶರಣರಿಗೆ ಆಳಾಗಿ ತಿರುಗುವ ಬೆಂಬಲ ಬಿಡದೆ ಭಕುತಿಗೆ ಮರುಳಾಗಿ ಬಂದೂ ॥೫॥

**ಜತೆ**

ಭಕುತಿಗೆ ಮುಕುತಿಯೊ ಮತ್ತಾವದಕ್ಕಿಲ್ಲ ।
ಶಕುತ ವಿಜಯ ವಿಠಲ ಸಂಬಳ ಇಲ್ಲದ ಬಂಟ ॥೬॥

❖ ❖ ❖

## ಸುಳಾದಿ-೭೩

ಹರಿಭಕ್ತರ ಮಹಿಮಾ, ಭಕ್ತರ ಸತ್ಸಂಗ ವರ್ಣನ.

### ರಾಗ-ಸಾರಂಗ ಧ್ರುವತಾಳ

ಹರಿಶರಣರ ಬಾಲಾರುಣ ಚರಣ ಕಿರಣ ಸಂತತ। ಧರಣಿಯೊಳಗೆ ಮೆರವುತಿದೆ। ಹರಿಶರಣರ ಪಾದರಜವು। ತರತರ ಜನ್ಮದ ಪರಿಪರಿ ಭವದ ಶರನಿಧಿಯ ಉತ್ತರಿಸುವದು। ಹರಿಶರಣರ ಹರಿಶರಣರ ಸಂಚರಣೆ ಲೋಕಉದ್ಧರಣ। ಹರಿಶರಣರ ಸಲ್ಲಾಪ ಪಾಪನಿರ್ಲೇಪ ಹರಿಶರಣರ ಬಲು ಬರುವನು ಆವ। ನರನು ಹಾರೈಸುತಿರಲು ಅವನೆ ಸುರನು ಹರಿಶರಣರ ಬಾಲಾರುಣ। ಹರಿ ಮಹಿಮೆಯ ಹರಿಶರಣರ ಮಹಿಮೆಯ ಅರಿತವರಿಲ್ಲ ಧರೆಯೊಳಗೆ। ಹರಿಶರಣರಿಗೆ ಮನಿಯ ಮಗನೊ ಹರಿಶಿರಿ ವಿಜಯ ವಿಠಲ। ಶರಣರ ಬಳಿ ವಿಡಿಯಿರೊ ॥೧॥

### ಮಟ್ಟತಾಳ

ಹರಿಶರಣರ ಸಂಗ ದುರಿತ ಸಂಘ ಭಂಗ। ಹರಿಶರಣರ ಪತಿಕರಿಸಿಕೊಳಲು ಗತಿ। ಹರಿಶರಣರ ನೋಟ ಹರಹಲು ಸುದ್ಧ (ಶುದ್ಧ) ದೂಟ। ಹರಿಶರಣರ ಸೂದರುಶನವೇ ಲೇಸೂ। ಹರಿಶರಣರು ಇದ್ದಾಗರವೆ ಪ್ರಸಿದ್ಧ। ಹರಿಶರಣರ ಕೀರ್ತಿ ಅರಿದವ ಗುಣಪೂರ್ತಿ। ಹರಿಶರಣರ ಲೀಲೆ ವಿರಚಿಸಲೂ ಮೇಲೆ। ಹರಿಶರಣರ ಸೇವೆ ಪರಿವದು ಪಾಶವೆ। ಹರಿವರ್ನಾ ವಿಜಯವಿಠಲ ನಿತ್ಯ। ಧೊರೆ ಎಂದವನು ಶರಣನು ಕಾಣಿವೊ ॥೨॥

### ತ್ರಿವಿಡಿತಾಳ

ಹರಿಶರಣ ಇಲ್ಲದ ಭವನ ಮಹಾವನ। ಹರಿಶರಣರಿಲ್ಲದ ಕೇರಿ ಹೊಲಿಗೇರಿ। ಹರಿಶರಣರಿಲ್ಲದಲ್ಲಿ ಹರಿ ತಾನೆ ನಿಲ್ಲನು। ಹರಿಶರಣನೆ ವರಬೊಮ್ಮನೆನ್ನಿ। ಹರಿಶರಣ ಇದ್ದಲ್ಲೆ ದುರಿತ ಗಾಳಿರವ್ವೆಯ್ಯಾ। ಹರಿಶರಣನೆ ಜಗಕೆ ಧೊರೆ ಕಾಣಿರೊ। ಹರಿಶರಣಗೆ ಉಳ್ಳ ಪರಮ ಸೌಖ್ಯಂಗಳು। ಸುರನರೋರಗಾದ್ಯರಿಗೆ ಇಪ್ಪದೇನು। ಹರಿಶರಣರ ನಿಂದರದೆ ಪೊರೆವ ಸರ್ವ। ಪರಿಪೂರ್ಣ ವಿಜಯ ವಿಠಲ ಭಕ್ತವತ್ಸಲ। ಸರಿಯದೆ ಬಳಿಯಲ್ಲಿ ಇರುತಿಪ್ಪ ನಲಿವುತ ॥೩॥

### ಅಟ್ಟತಾಳ

ಹರಿಶರಣರ ಸಂಗ ಮಾಡದ ಮಾನವ। ನರಕಕ್ಕೆ ಮೊದಲವನಹುದೆಂದು ತಿಳಿವದು। ಮರಳೆ ಮರಳೆ ದುರಯೋನಿಯಲ್ಲಿ ಪೊಕ್ಕು। ಪರಮ ದುಃಖಂಗಳ ಬಡವನು ನೆಲೆಗಾಣಾ। ಚಿರಕಾಲದಲಿ ಆವ ಕರ್ಮಾಚರಣೆ ಮಾಡೆ। ಬರಿದಾಗಿ ಪೋಗೋವು ಲೇಸು ಸುಕೃತವಿಲ್ಲ। ಹರಿಶರಣರ ಪಾಲಾ ವಿಜಯ ವಿಠಲ ತನ್ನ। ಸ್ಮರಣೆ ಮಾಡುವಗೆ ಅಂದರೆ ತಾಳಲರಿಯನೂ ॥೪॥

### ಆದಿತಾಳ

ಹರಿಶರಣನಾಗುವದಕ್ಕೆ ಪರಮ ಸುಲಭ ಉಂಟು। ಸರುವದಲ್ಲಿ ಸ್ಪೃಹನಾಗಬೇಕು ಆಗಬೇಕು। ಹರಿಯ ಮಹಿಮೆ ತಿಳಿದು ಹಿಗ್ಗಿ ಹಾರೈಸಬೇಕು। ಮರಣ ಜನನಕೆ ಭಯಬಡದಲೆ ಇರಬೇಕು। ಇರಳು ಹಗಲು ಮಾಡಿ ಹಗಲು ಇರಳು ಎಂದು। ಅರಿದು ದಿನವ ಕಳೆದು ದೀನನಾಗಿ ಇರಬೇಕು। ಹರಿ ಭಕುತಿಯಲ್ಲಿ ಬಲು ಲೋಲ್ಯಾಡುತಿರಬೇಕು। ಪರಮೇಷ್ಟ್ಯಾದಿಗಳಲ್ಲಿ ವಿಶ್ವಾಸ ಇರಬೇಕು। ಹರಿನಾಮ ವಿಜಯ ವಿಠಲ ಪರದೈವ ನಿಜವೆಂದು। ಕರದು ಕೂಗಲಿಬೇಕು ವಿರಕ್ತನಾಗಬೇಕು ॥೫॥

### ಜತೆ

ಏಕಾಂತ ಉಳ್ಳವರ ಪದಪದ್ಮಗಳ ಪಿಡಿದು ।
ಶ್ರೀಕಾಂತ ವಿಜಯವಿಠ್ಠಲನ ಒಲಿಸುವದೂ ॥೬॥



## ಸುಳಾದಿ-೭೪

ಭಗವದ್ಭಕ್ತರಾದ ಭಾಗವತರ ಲಕ್ಷಣಯುಕ್ತ ಅನೇಕ ಭಾಗವತ ಧರ್ಮಗಳು.

### ರಾಗ-ಕಾಂಬೋದಿ ಧ್ರುವತಾಳ

ದುರ್ಲಭವಿದು ಕಾಣೊ ಎಲ್ಲರಿಗೆ ದೊರಕೊ। ದಲ್ಲವಲ್ಲವೊ ಶ್ರೀವಲ್ಲಭನ ಭಜನೆ। ಗೆಲ್ಲಬೇಕು ಕಾಮನ್ನ ನಿಲ್ಲಿಸಬೇಕು ಮನ। ಮೆಲ್ಲ ಮೆಲ್ಲನೆ ವಿನಯದಲ್ಲಿ ನಿರಂತರ। ಕೊಲ್ಲಬೇಕು ಕೋಪವ ಚಲ್ಲಬೇಕು ದುರಾಸೆ। ಒಲ್ಲೆನೆಂದೆನಬೇಕು ಹೊಲ್ಲೆ ಇಂದ್ರಿಯಂಗಳ। ಕಲ್ಲಾಗಬೇಕು ಹರಿಗೆ ಸಲ್ಲದ ಮಾನವರಿಗೆ ಬಿಲ್ಲಾಗಬೇಕು ಹರಿಗೆ ಸಲ್ಲಿದಸುಜನರಿಗೆ। ಬೆಲ್ಲದಂತಿರಬೇಕು ಸಲ್ಲುವ ಬಾಂಧವರಿಗೆ। ಸೊಲ್ಲು ಮರಿಯಾದೆ ಬೇಕು

ಬಲ್ಲವನಾಗಬೇಕು। ಹುಲ್ಲು ಮಾನವನಾಗಿ ಎಲ್ಲರಿಗೆ ತೋರಬೇಕು। ಎಲ್ಲಿ ಇದ್ದರೂ ಕೈವಲ್ಯದಾಸಿರಬೇಕು। ಮಲ್ಲರಾಳಿದ ಧೀರ ವಿಜಯ ವಿಠ್ಠಲನಂಘ್ರಿ ಪಲ್ಲವಯುಗಳಕ್ಕೆ ಸಲ್ಲುವನಾಗಬೇಕು ॥೧॥

**ಮಟ್ಟತಾಳ**

ಗುರು ಉಪದೇಶ ಇರಲಿಬೇಕು। ಹಿರಿಯರ ದಯ ಇರಲಿಬೇಕು। ಹರಿದಾಸರ ಸಂಗ ಇರಲಿಬೇಕು। ತರತಮ್ಯ ತತ್ವ ಇರಲಿಬೇಕು। ವರ ತಾತ್ಪರ್ಯ ಇರಲಿಬೇಕು। ಮರುತ ಮತದೊಳು ಇರಲಿಬೇಕು। ಇರುಳು ಹಗಲು ಬಿಡದೆ ವಿಜಯ ವಿಠಲರೇಯನ। ಸ್ಮರಣೆ ಮಾಡಲಿಬೇಕು ವರ ವೈಷ್ಣವನಾಗಿ ॥೨॥

**ತ್ರಿವಿಡಿತಾಳ**

ದೃಗಯುಗ ನಿರೇರಿ ತುಟಿಯ ನಡುಗುತ ಶಿರ। ಬಿಗಿದು ಕೊರಳ ಗದಗದ ತೊದಲು ನುಡಿಗಳ। ಮಗುಳೆ ಸುರಿವ ಅಶ್ರು ಜಲದಲ್ಲಿ ಮೈಯ್ಯ ಪಂ। ಡ್ರಗಳನ್ನು ತೊಳೆದು ಮಾತುಗಳೇಳದಿರಲೂ। ಜಗಳುವ ನಿಲ ರೋಮಗಳುಬ್ಬಿ ಪುಳಕೋತ್ಸ। ಅಗಣಿತ ಕಂಪನವಾಗೆ ಕಾಯಾ। ಗಗನವೆತ್ತಲೊ ಭೂಮಿ ದಿಕ್ಕುಗಳೆತ್ತಲೋ। ಜಿಗಿದು ಜಿಗಿದು ಹಾರಿ ಅಟ್ಟಹಾಸ। ನಗುವ ಕರುವ ಹುಚ್ಚು ಹಿಡಿದಂತೆ ತಿರುಗುತ್ತ। ಜಗದೊಳು ಯಾತಕ್ಕೆ ಬಾರದವನಾಗಿ। ಜಗಪತಿ ವಿಜಯ ವಿಠ್ಠಲನ್ನ ಪಾದಕ್ಕೆ। ಜಿಗುಳಿ ಹತ್ತಿದಂತೆ ಮನರು ಹತ್ತಿಸಬೇಕು ॥೩॥

**ಅಟ್ಟತಾಳ**

ಭಗವಂತನ ಲೀಲೆ ತಿಳಿದ ಚಾಂಡಾಲನು। ಭಗವದ್ಭಕ್ತನೆಂದು ಕರಸುವನೂ। ಭಗವಂತನ ಲೀಲೆ ತಿಳಿಯದ ವಿಪ್ರ ಮಾ। ದಿಗನೆಂದು ಸರ್ವದಾ ಎನಿಸಿಕೊಂಬಾ। ಹಗಲಿರುಳು ನಿನ್ನ ಹಗೆ ಮಾಡಿಕೊಂಡಾರು।

ನಗಧರ ಸರ್ವೋತ್ತಮ ಸಿರಿಯ ತರುವಾಯ। ಮಿಗಿಲಾದವರು ನಾಲ್ಕು ಮೊಗದ ಸಹಿತ ದೇವಾ। ದಿಗಳು ತರತಮ್ಯ ಭಾವದಿಂದ। ಮುಗುಳು ನಗೆಯಿಂದ ಸಿದ್ಧವಹದು ಮಾಧ। ವಗೆ ಪರಿಚರರೆಂದು ಪೇಳುತಿರೂ। ಸುಗುಣರ ಮನೋಹರ ವಿಜಯ ವಿಠ್ಠಲರೇಯ। ವಿಗಡದ ಸಂಸಾರ ನಿಗಳ ಹರಿಸುವ ॥೪॥

**ಆದಿತಾಳ**

ತಾಳದಂಡಿಗೆ ಕರದಲ್ಲಿ ಧರಿಸಿ। ಕಾಲಂದಿಗೆ ಕಿರಿಗೆಜ್ಜೆ। ಫಾಲದಲಿ ಊರ್ಧ್ವತಿಲುಕ। ಲೋಲನಾಗಿ ಕೊರಳೊಳು। ವಾಲೆ ತುಲಸಿ ಪದುಮಹಾರ। ವಾಲಯ ಸಂತರ ನೆರೆಯಲ್ಲಿ। ತಾಳಿಮಿಕೆ ಎಲ್ಲಿ ನಡೆದು ಸರ್ವದ। ಆಲೋಚನೆ ಹರಿಪಾದವ। ಕಾಲಕಾಲಕೆ ಬಿಡದೆ ವಿಜಯ ವಿ। ಠ್ಠಲನ್ನ ನಂಬಿ ವಿಶ್ವಾಸದಲ್ಲಿ ॥೫॥

**ಜತೆ**

ಈ ಪರಿ ಇರಲು ವೈರಾಗ್ಯಾದಿಯನಿತ್ತು ।
ಶ್ರೀಪತಿ ವಿಜಯ ವಿಠ್ಠಲನು ಒಡನಾಡುವ ॥೬॥



## ಸುಳಾದಿ-೭೫

### ೧೨. ಹರಿಭಕ್ತರ ನಿಂದಾವರ್ಜನ

ಮಧ್ವಮತಾನುಸಾರವಾಗಿ ಹರಿಭಕ್ತರನ್ನೂ, ಶ್ರೀ ಹರಿಯನ್ನೂ ಭಜಿಸುವದು.

**ರಾಗ- ಕೇದಾರಗೌಳ ಧ್ರುವತಾಳ**

ಆರಾದರು ಹಳಿಯಲಿ ಆರಾದರು ದೂರಲಿ। ಆರಾದರುಗುಳಲಿ ಆರಾದರು ಮುನಿಯಲಿ। ಆರಾದರು ಬಿಡಲಿ ಆರಾದರು ಜರಿಯಲಿ।

ಆರಾದರು ಅಸೂಯ ಇರಷಾ ಬಡಲಿ। ಆರಾದರು ತೊಲಗಲಿ ಆರಾದರು ತೊರಿಯಲಿ। ಆರಾದರಾಡಿ ಕೊಳಲಿ ಆರಾದರಾಡದಿರಲಿ। ಆರಾದರು ಸೇರಲಿ ಆರಾದರು ಕೊಡಲಿ। ಆರಾದರು ಬರಲಿ ಬಾರದಿರಲಿ। ಆರಾದರು ಕರೆಯಲಿ ಆರಾದರು ಕಂದಲಿ। ಆರಾದರು ಕೃಪೆ ಮಾಡಲಿ ಮಾಡದಿರಲಿ। ಆರಿಂದ ಲೇನಾಹದೋ ಆರಿಂದ ಲೇನಬಾಹದು। ಆರಿಂದ ದಾಗುವದೇನು ಆಗದದೇನು। ಆರ ಉಪಚಾರವೇನು ಆರ ಉಪಕಾರವೇನು। ಆರಿಂದ ನಮಗೇನು ನಮ್ಮಿಂದವರಿಗೇನು। ಆರಿಗಾದರು ಕಾಲ ಕರ್ಮಗಳೆ ಪರಿ। ಹರಿಸಿ ಪೊರೆವ ಶಕ್ತಿ ಆರಿಗಾದರು ಲೇಶವುಂಟೆ। ಸೇರದಾ ಜನರಿಂದ ಲಾಭ ಪೋಗುವದೇನು। ಪಾರಮಾರ್ಥಕರಂದರಂಜುವೆನೋ। ಆರುಕೋಟಿ ಶತಕೋಟಿ ಮತ್ತೆಕೋಟಿ। ನೂರಾರು ಜನ ಬಿಡದೆ ತಿರುಗುತಿರೆ। ತಾರಕ ಉಪದೇಶ ಸ್ವರೂಪ ಜ್ಞಾನ ತಿಳುಹಿ। ದಾರಿ ತೋರುವರಿಲ್ಲ ಮುಕ್ತಿ ಪಥಕೆ। ಊರಿಗೆ ಪೊಕ್ಕಳಿಸಿ ಕಣ್ಣು ಪೋಗಾಡಿ ಕೊಳಲು। ಊರೊಳಗಿದ್ದ ಜನಕೆ ಕ್ಲೇಶವೇನೋ। ನೀರು ಹೊರುವ ಧಡ್ಡ ಭೂರಿಬ್ರಾಹ್ಮಣ। ದಾರಿದ್ರ ದೋಷನಾಗಿ ಬಾಳುತಿದ್ದು। ಧಾರುಣಿಯೊಳಗೊಬ್ಬ ಸೌಭಾಗ್ಯವಂತನಿರೆ। ವಾರಣಾ ವಾಜಿ ತೇರು ಅಂದಣ ಪರಿ। ವಾರದೊಡನೆ ನಿತ್ಯ ಸುಖಿಸುತಿರಲು ತಾಳ। ಲಾರದೆ ಗರಳ ಉಂಡು ಮಲಗಿದಂತೆ। ಕಾರಣವೇನವಂಗೆ ತಿರುಗಿ ಉಳುವದಕ್ಕೆ। ಸಾರಿರ್‍ಯೆ ಹರಿಪಾದ ಸಾರಿದವರು ನಾರಾಯಣ ಮೂರ್ತಿ ವಿಜಯ ವಿಠಲರೇಯನ। ಕಾರುಣ್ಯ ಉಳ್ಳವಂಗೆ ಮನವೆ ಭಯವಾಗದೊ ॥೧॥

## ಮಟ್ಟತಾಳ

ಮಧ್ವಮತದಲ್ಲಿ ಪೊದ್ದಿದಾ ಸಜ್ಜನರು। ಉದ್ದಿನಕಾಳಷ್ಟು ಬಿದ್ದು ಪೋಗುವ ಮಾತು। ಇದ್ದ ದೋಷಗಳಾಗೆ ಸುದ್ದಿ ಎತ್ತರು ಕಾಣೊ। ಸಿದ್ಧ ಮಹಿಮನ ಪಾದದ್ವಯದ ಶ್ರವಣ। ಬದ್ಧವಾಗಿ ಅಪಾಶಬ್ದವಾಗಲಿ ಕೇಳಿ। ಬುದ್ಧಿಗೆ ತಂದುಕೊಂಡು ಶುದ್ಧರಾಘುವರು ಸು। ಖಾಬ್ಧಿಯೊಳಗೆ ಮುಳುಗಿ

ಎದ್ದೆದ್ದಾಡುವರು। ಪೊದ್ದಿದ ಪಾಪಗಳ ಒದ್ದು ಕಳೆವುತ್ತ। ವಿದ್ಯಾವಂತರವರು ಈ ಧರಿಯೊಳಗೆ ಗೆದ್ದವರು ಭವಭೀತೆ। ಹೆದ್ದೆಗದಾತ್ಮನೆ ಛುದ್ರನೆ ಸಜ್ಜನನೇ। ಪದ್ಧತಿ ಉಳ್ಳವನೊ ಮುದ್ದು ರಂಗನಲ್ಲಿ। ಶ್ರದ್ಧವುಳ್ಳ ಜನರ ಗದ್ದುಗೆ ಆವಕಡೆ ಇದ್ದಲಿ ತಿಳಿದು। ಎದ್ದು ದಂಡಾಕಾರ ಬಿದ್ದು ಭಕುತಿ ಮಾಡಿ। ಭದ್ರಲೋಕಕೆ ಸುಪಾದ್ಯ ಕಟ್ಟಿಲೊ ಮನವೆ। ರುದ್ರವಂದಿತ ನಮ್ಮ ವಿಜಯ ವಿಠಲಹರಿಯ। ಸದ್ದು ನೋಡಿದವಗೆ ಸಿದ್ಧಿ ದೊರಕುವದು ॥೨॥

## ತ್ರಿವಿಡಿತಾಳ

ವಾರಿ ಪೂರಿತವಾಗಿ ಸರಿತಪರಿವುತಿರೆ। ದಾರಿಕಾರನು ತವಕದಿಂದ ದಾಟೀ। ಊರಿಗೆ ತೀವ್ರವಾಗಿ ಪೋಗುವೆನೆಂದು। ಹಾರೈಸಿಬಂದು ತೀರದಲ್ಲಿ ನಿಂದು। ದಾರಿ ಕಾಣದೆ ಮರುಗಿ ನದಿಯ ಬೈದರೆ ಅಂಜೀ। ದಾರಿ ಕೊಡುವದೆನೊ ತಾತ್ಕಾಲಕ್ಕೆ। ಗಾರು ಗೆಡುವದೆಂದು ನದಿಗಂದ ಪಾಪವು। ಈರ ಪ್ರಾಪುತವಾಗಿ ಬಳಲುವನು। ಈ ರೀತಿ ಇದು ಕಾಣೊ ಮಂದಮತಿಯ ನಡತಿ। ಚಾರು ಬುಧರಿಗೆ ಜ್ಞಾನೇನು ಕಡಿಮಿ। ಸಾರ ಹೃದಯರ ಪಾಲ ವಿಜಯ ವಿಠ್ಠಲನಂಘ್ರಿ। ಸೇರಿ ತನ್ನೊಳು ತಾನೆ ನಲಿದಾಡಿದವ ಜ್ಞಾನಿ ॥೩॥

## ಅಟ್ಟತಾಳ

೧ ತೊಗಲ ತಿತ್ತಿಯಲ್ಲಿ ತರಲಾಗದು ಉದಕ। ೨ ಬೊಗಳಲಾಗದು ನಮ್ಮ ನಾಯಿಯ ಸಂಗಡ। ೩ ಹಗೆ ತಾಳಲಾಗದು ನಮ್ಮ ಹಂದಿಯ ಕೂಡ। ೪ ಜಗಳಾಡಲಾಗದು ಊರ ಕತ್ತಿಯ ಕೂಡ। ೫ ತಗಿಯಲಾಗದು ನಮ್ಮ ಹಿತ್ತಲೊಳಿದ್ದದು। ೬ ಅಗಳಲಾಗದುನಮ್ಮ ಹೆಗ್ಗಣನ ಕೂಡ। ೭ ನಗಲಾಗದು ನಮ್ಮ ಕಾಗಿಯ ಸಂಗಡ। ೮ ಪೊಗಳಲಾಗದು ನಮ್ಮ ತೊತ್ತಿನ ಮಕ್ಕಳ। ಜಗದೊಳು ನೆನ್ನನುಪಹಾದ ಮಾಡಿ ಅ। ನ್ನಿಗರು ದೂರಿದರೇನು ಕೊಂಡಾಡಿದರೇನು। ಗಗನಕ್ಕೆ ಮುನಿದಂತೆ ವ್ಯರ್ಥವಲ್ಲದೆ ಫಲಾ।

ಮಿಗಿಲಾಗುವದೇನು ಯುಳ್ಳಿನಿತು ಕಾಣೆ। ನಗಧರವಿಜಯವಿಠಲನ ಸಿರಿ ಪಾ। ದಾಗುಂಟ ಬಟ್ಟವನಿಗೆ ಆವಾವ ಭಯವೊ ॥೪॥

**ಆದಿತಾಳ**

ಶ್ರೀ ಹನುಮನ ಮತವನು ತೊಟ್ಟು ಉತ್ತಮರ ದ್ರೋಹವ ಮಾಡುವ ವೆಲ್ಲಕಾಲ ಬಿಡದಲೆ। ಮಹಾ ಉತ್ತಮರೆನಿಸಿ ತಿರುಗುವರೆಂಬಿಯಾ। ಆ ಹದನವ ತಿಳಿ ಪೇಳುವೆ ಎಲೋ ಮನವೇ। ಲೋಹಕ್ಕೆ ಹೇಮ ಕಾಸಿ ಪೂಸಿದರೆ ಅದರ। ಸಹವಾಸದಲಿ ನೋಡುವರ ಕಣ್ಣಿಗೆ। ಮೋಹ ಪುಟ್ಟಸುವದು ಬಂಗಾರದಂತೆ ಕಾಣೊ। ಆಹದೆ ಆಲೋಹ ಎಂದಿಗಾದರು ಹೇಮ। ಕುಹಕ ಜನರಿಗೆ ಪೂರ್ವ ಜನ್ಮ ಪುಣ್ಯ। ಯೂಹ ಇರಲಿ ಬಂದು ಉತ್ತಮರ ನಿಜ ಗೃಹದಲ್ಲಿ ಪುಟ್ಟ ವೈಷ್ಣವನೆಂದೆನಿಸಿ। ರೂಹ ತೋರಿಸಿಕೊಂಡು ಭೂಮಿಯೊಳವತರಿಸಿ। ದ್ರೋಹವ ಮಾಡುವರು ಸ್ವಭಾವ ತೊಲಗುವದೇ। ಬಾಹದೆ ಅವರಿಗೆ ಉತ್ತಮಗತಿ ಮಾರ್ಗ। ರಹಸ್ಯವಿದೆಕೇಳು ಮರಗುವದೇಕೆ (ದ್ಯಾಕೆ) ಮನವೆ। ಮಹಾಮಹಿಮ ನಮ್ಮ ವಿಜಯ ವಿಠಲನಂಘ್ರಿ ದೇಹ ಮಧ್ಯದಲ್ಲಿ ನೀ ಮರಿಯಲಾಗದು ನಿತ್ಯ॥೫॥

**ಜತೆ**

ಹರಿಭಕ್ತರ ಒಮ್ಮೆ ನಿಂದೆ ಮಾಡಿದವ ।
ನರಕವಾಸಿ ಎನ್ನಿ ವಿಜಯ ವಿಠಲವೊಲಿಯಾ ॥೬॥



## ಸುಳಾದಿ–೭೩

ಉತ್ತಮರಾದ ಜ್ಞಾನಿಗಳಲ್ಲಿ ಸರ್ವಥಾ ಮತ್ಸರ ಮಾಡಕೂಡದು ಇದರಿಂದ ಮಹಾ ಅನರ್ಥ ಪ್ರಾಪ್ತಿ.

## ರಾಗ- ರೇಗುಪ್ತಿ ಧ್ರುವತಾಳ

ಸತ್ಸಭಗೆ ನಮಿಸುವೆನು ಶುದ್ಧಮನಸಿನಲ್ಲಿ। ಉತ್ಸಹದಲ್ಲಿ ಕೇಳಿ ಲಾಲಿಪದು। ಮತ್ಸರ ತಾಳಿದರೆ ಇದರಿಂದ ನಿಮಗೇನು। ಉತ್ಸಾಹವಾಗದು ಊರ್ವಿಯೊಳಗೆ। ಸತ್ಸಂಗತಿ ಉಳ್ಳ ಕಾಲಕ್ಕೆ ಅಸೂಯವಾಗದು। ತತ್ಸಂಬಂಧಿಗಳಿಗೆ ಶಿರ ಕಂಪನ। ಕುತ್ಸಿತ ಮಾರ್ಗಕ್ಕೆ ಬೀಳದಲೆ ನಿತ್ಯ ಶ್ರೀವತ್ಸ ಲಾಂಛನ ಪಾದ ಪ್ರೀತಿಯಲ್ಲಿ। ಹತ್ಸರ ನಿಜದಲ್ಲಿ ಇಟ್ಟು ಪೂಜಿಸಿದವ। ವತ್ಸನಾಗಿರಬೇಕು ಉತ್ತಮರಲ್ಲಿ। ಸತ್ಸಿದ್ಧಾಂತ ಮನುಜಂಗೆ ಮತಿಭ್ರಮಣ ಪುಟ್ಟದು। ಮತ್‌ಸ್ವಭಾವವಿದೆ ಸಾರುವೆನು। ತತ್ಸಹವಾಸ ತೊರದು ಹರಿ ಪ್ರೇರಣೆಯನೆ ಮೋ। ಹತ್ಸವೆ ಕಲಕಾಲ ಹರುಷರಿಗೆ। ಮತ್ಸ್ಯಾವತಾರ ನಮ್ಮ ವಿಜಯ ವಿಠಲರೇಯ। ಮತ್ಸಾರಥಿಯಾಗಿ ನಿಂದಿಹ ಬಳಿಯಲ್ಲಿ ॥೧॥

## ಮಟ್ಟತಾಳ

ಧರಣಿಯೊಳಗೆ ಶಿರಿ ಹರಿ ಚರಣದಲ್ಲಿ। ಪರಮ ಭಕುತಿ ಉಳ್ಳನರರು ಮನ್ನಿಸಿ ಕೇಳಿ। ಹಿರಿಯತನವೆಂಬೊ ಗರುವಿಕೆಯನು ಬಿಟ್ಟು। ಪರೀಕ್ಷಿಸಿ ನೋಡುವದು ಅರಮರೆ ಇದಕ್ಕಿಲ್ಲ। ತರುವುಗಳಿಗೆ ಒಂದೇ ಕರವು ಬೆಂಬಿಡಲೆ। ತಿರುಗಿದರೆ ಬೇಸರಿಕೆ ಉಂಟಾಗುವದೆ। ಇರಳು ಹಗಲು ಈ ತೆರದಲ್ಲಿ ಇದ್ದರು। ಮರಳೆ ಕೋಳಿಗೆ ಹತ್ತು ಮರಿಗಳು ಇರಲಾಗಿ। ಪೊರೆಯಲಾರದೆ ಬಿಟ್ಟು ಬರುವದೆ ವನದಲ್ಲಿ। ತುರುಗಳು ತನ್ನಯ ಕರುಗಳಲ್ಲಿ ಮೋಹ। ಮರಿಯದೆ ಕೋಳಿಗೆ ಮರಿಗಳಲ್ಲಿ ಮೋಹ। ನರರು ನೋಡಿ ತಾಳಲರಿಯದೆ ತಮ್ಮೊಳು। ವಿರಸ ಹಚ್ಚಿಕೊಂಡರೆ ಲಾಭವೇನು। ಹರಿಯ ಸ್ವಾತಂತ್ರ ಬಲ್ಲರೆ ಇನಿತೆ ಬುದ್ಧಿ। ದುರುಳ ಮರ್ದನ ನಮ್ಮ ವಿಜಯ ವಿಠ್ಠಲನ್ನ। ಕುರುಹ ಕಾಣದ ತನಕ ಹರಿಯದು ಅಜ್ಞಾನ ॥೨॥

## ತ್ರಿವಿಡಿತಾಳ

ಧರಣಿ ಪಾಲನು ಒಂದು ಪರಮ ಪ್ರೀತಿಯಿಂದ। ವರಲೂವ ನಾಯಿಯ ಸಾಕುತಿರಲು। ನರನೊಬ್ಬ ನೋಡಿ ಸೈರಿಸದಲೆ ನಾಯಿಯ

ಹರಳಿಲೆ ಹಾಕಲು ನೋಡಿ ರಾಯಾ। ತರಹರಿಸನು ಕಾಣೊ ಅವನ ಶಿಕ್ಷಿಸಿ ವೇಗ। ಹೊರಗೆ ಹಾಕುವ ತನ್ನ ಸೇವೆ ಬಿಡಿಸಿ। ನರನು ಉತ್ತಮನಾಗಿ ನಾಯಿ ಮೇಲಿನ ಸ್ನೇಹ। ಬರಿದಾಗದು ಕಾಣೊ ಭೂಪತಿಗೆ। ಹರಿ ತನ್ನ ಭಕ್ತರ ಮೇಲೆ ಇದ್ದ ಕರುಣ। ಪರದಲ್ಲಿ ಮಾಡುವನು (ಪರಲ್ಲಿ ಮಾಡನು) ಸಿದ್ಧವಿದು। ಸ್ಥಿರ ಪುರ ಉಳ್ಳ ವಿಜಯವಿಠಲರೇಯ। ಹರರೂಪನ್ನ ಭಂಗಿಸಿ ಅಂಬರೀಷನಕಾಯ್ದ ॥೩॥

## ಅಟ್ಟತಾಳ

ಊಚ ಜ್ಞಾನಿಗಳು ತಾವಾದರು ಜಗದೊಳು। ಆಚಂದ್ರಾ ತಾರರ್ಕ ಉಳ್ಳ ಪರಿಯಂತ। ಯೋಚಿಸಿ ನೋಳ್ಪದು ಮನದಲ್ಲಿ ನಿಮಗೆ ಆ। ಲೋಚನೆಯ ದೊರಿಯದಿದ್ದರೆ ಹಿರಿಯರ ಕೇಳಿ। ಈ ಚತುರ್ದಶ ಭುವನೇಶನ್ನ ಮನಿಯಲ್ಲಿ। ನೀಚ ಭಾವವುಳ್ಳ ನಾಯಿ ಒಂದಿರಲಾಗಿ। ಛೀ ಛೀ ಎನ್ನದೆ ಸುಮ್ಮನಿದ್ದರೆ ದರಿದ್ರ। ಮೋಚನಾಗುವದಯ್ಯಾ ಕೃಪೆ ಮಾಳ್ಪನುರಾಯಾ। ಯಾಚಿಕದವರಿಗೆ ನಾಯಿಯಗೊಡವೇಕೆ। ಸೂಚನೆ ತ್ರಿಳಿವದು ಸರ್ವದ ಬಲ್ಲವರು। ನಾಚಿಕೆ ಪತಿ ನಮ್ಮ ವಿಜಯ ವಿಠಲರೇಯ। ಗೋಚರಿಸುವ ತನ್ನ ನೆನೆದವರ ಬಳಿಯಾ ॥೪॥

## ಆದಿತಾಳ

ಕ್ಷೋಣಿಯೊಳಗೆ ಸರ್ವಜ್ಞ ನಾನೆಂಬವನ್ನಕಾಣೆ। ಎಣಿಸಿ ನೋಡಿದರು ಬೊಮ್ಮಾದಿಗಳ ವಿಡಿದು। ಮಾನವರಿಗೆತ್ತಣದೊ ಏನೇನು ಬಲ್ಲರೆಂಬೊ! ಜ್ಞಾನ ಉಂಟೇನೋ ಬರಿದೆ ಗೋಣು ತಿರುಹುವನಲ್ಲದೆ। ತಾನೆ ಸರ್ವಜ್ಞನಾಗೆ ಗೇಣುದರಕೆ ಪೋಗಿ। ಕಾಣೆನೆಂದು ಬಳಲಿ ದೀನರ ಬೇಡುವನೆ। ಜ್ಞಾನಿಯಾದವರಿಗೆ ನಾನೆಂಬೊದೆಲ್ಲೆದು ನಾನಾ ಪ್ರಕಾರದಿಂದ। ಆನಂದವಾಗುವರು ಮಾನ ಕಡಿಮೆವೆಂಬೊ ಜ್ಞಾನವಲ್ಲದೆ ಪುಣ್ಯ। ಕ್ಷೀಣವಾಗುವದು ನಿದಾನ ತಿಳಿಯರಯ್ಯಾ। ನಾನೀಚ ಸರ್ವರಂಘ್ರಿ

ರೇಣಾಗಿ ಇಪ್ಪೆನು। ಜ್ಞಾನಿಗಳು ಪಾದತ್ರಾಣ ಪ್ರಯೋಗ ಮಾಡೆ। ಮಾಣದೆ ಅನುದಿನ ವೇಣು ಸೌಭಾಗ್ಯವೆಂಬೆ। ವಾಣಿ ಒಬ್ಬರ ಮನಿಯಾಧೀನವಾಗಿಪ್ಪಳೇ। ಪ್ರಾಣೇಶನ ಕರುಣ ವಾಗದತನಕ। ಧ್ಯಾನಕೆ ಸಿಲಕುವ ವಿಜಯ ವಿಠಲರೇಯ। ಗಾನವ ಮಾಡಿದವಗೆ ನಿತ್ಯ ಪದವಿಯ ಕೊಡುವ ॥೫॥

### ಜತೆ

ಲಾಭ ಪೋಗುವದೆಂದು ಪಂಡಿತರೆನಿಸುವರು ।
ಲೋಭವೆ ಗಳಿಸುವರು ವಿಜಯ ವಿಠಲ ವಲಿಯಾ ॥೬॥

❖ ❖ ❖

## ಸುಳಾದಿ-೭೭

ಸಜ್ಜನರ ನಿಂದಾ ಮಾಡದಿರು, ದುರ್ಜನರಿಗೆ ಅಳುಕದಿರು.
ದುರ್ಜನರ ನಿಂದ್ಯೆ ಸಹಿಸಿ ಹರಿಭಕ್ತನಾದೊಡೆ ಶ್ರೀಹರಿ ಒಲಿಮೆ

### ರಾಗ-ಭೈರವಿ ಧ್ರುವತಾಳ

ಆರಾದರು ಛೀ ಎನಲಿ ಆರಾದರು ಥೂ ಎನಲಿ। ಆರಾದರು ಹಳಿಯಲಿ ಆರಾದರು ಮುಳಿಯಲಿ। ಆರಾದರು ಬೈಯಲಿ ಆರಾದರು ನಿಂದಿಸಲಿ। ಆರಾದರುಪೇಕ್ಷಿಸಲಿ ಆರಾದರಾಡಿಕೊಳಲಿ। ಆರಾದರುಗಳಲಿ ಆರಾದರಂಜಿಸಲಿ। ಆರಾದರಾವಲ್ಲಿ ದೂರುತಿರಲೀ। ಧಾರುಣಿಯೊಳಗವ ನಿನ್ನ ಪಾಪ ಪುಣ್ಯಕ್ಕೆ। ಭಾರಕರ್ತನಾಗಿ ನಿಲುವಾ ನಿಲ್ಲಾ। ನಾರಾಯಣ ನಿನ್ನ ಪಾದವಿಡಿದು ಅನ್ಯ ಚಿಂತಿಸೊ। ಹಾರದಿರು ಮನವೆ ಬೇಡಿಕೊಂಬೇ। ತೂರಿದರೆ ಜೊಳ್ಳು ರಾಸಿಯಾಗುವದೇನೊ। ಚಾರವಾಕ ಮಾತು ನಿಶ್ಚಯವೇ। ಚೋರನು ಚಂದರನ್ನ ನಿಂದೆ ಮಾಡಿದರಿಂದ। ಧೀರರು

ಕೇಳಿದರೆ ಸ್ವೈರಿಪರೇ। ಆರಾಹು ಅಮೃತವ ಕುಡಿದರೇನಾಯಿತು। ಕೌರುಪತಿ ಮೇಲೆ ಪುಷ್ಪ ವರುಷ। ಧಾರಿಯ ಸುರನಿಕರ ಎರೆದರೇನಾಯಿತು। ಸೇರಿದರೇನು ಸತ್ಪಂಥ ಪಿಡಿದೂ। ಮೊರೆ ಸಲ್ಲಿಸಿಕೊಂಡು ಪೊಟ್ಟೆ ಪೊರೆವ ಜನ। ದೂರುವರು ತಮ್ಮ ಗುಣಗಳಂತೆ। ಕೇರು ಕರ್ಪುರದೊಳಗಿಟ್ಟರೆ ತನ್ನ ನಿಜಾ। ಕೌರವ ಹಿಂಗುವದೆ ವಿಹಿತ ತಿಳಿದು। ಊರ ಹಂದಿಗಳು ಸರಗವಾಡೊದಲ್ಲೆಂದೆಡೆ। ಶ್ರೀರಮಣನು ಮಾಡಿದ ಮರ್ಯಾದೀ। ಆರಿಂದ ತೊಲಗಿಸಲೊಶವೆ ಯೋಚಿಸಿದರೂ। ವಾರ ವಾರಕೆ ವಸ್ತದಲ್ಲಿ ಇಡಲು। ಬೇರರಿಸಿ ಪರಿಕ್ಷೆ ಮಾಡಲು ವಿಷ। ಹೀರೆ ಬಳ್ಳಿಗೆ ಸೀ ಲೇಶ ಉಂಟೆ। ದಾರಿದ್ರ ಮನುಜನು ಅರಸಿನ ಭಾಗ್ಯನೋಡ। ಲಾರದೆ ಹುಡಿಯೊಳು ಹೊರಳಿದಂತೆ। ಭೇರುಂಡ ಪೋಗುತಿರಲು ಆನೆ ಸಮ್ಮೊಗವಾಗಿ। ಮಾರು ಮಲತು ಕರವ ಬೀಸುವದೆ। ತೇರ ಗಾಲಿಯ ಕೆಳಗೆ ಹರಿದಯದಪ್ಪಿ ಬೀಳೆ। ಚೂರಾಗದೆ ಮನುಜ ಬದಕುವನೇ। ಸಾರಿದೆ ನಿನಗೆ ನಿನ್ನ ಹಿರಿಯರು ಪೇಳಿದ್ದ। ದಾರಿಯ ತಪ್ಪದಿರು ಎಲೊ ಮನವೇ। ಪಾರು ಮುಟ್ಟದು ಕಾಣೊ ಸುಜನರ ನಿಂದ್ಯಗಳಿಂದ। ಘೋರ ತಮಸಿನಲ್ಲಿ ವಾಸ ಅವಗೆ। ಭಾರಿಗೆ ನಾರಾಯಣ ತೈಲವ ತೀಡಿದರೆ। ನೂರಾರು ಹೊನ್ನಿಗೆ ಬೆಲೆಯಾಹದೆ। ನೀರಡಿಸಿ ಅರಿಯದವ ಬರುತ ದಾರಿಯಲ್ಲಿ। ನೀರು ಕಾಣಲಿಲ್ಲವೆಂಬೊ ತೆರದೀ। ಓರಂತೆ ತನಗೇನು ತೋರದಿದ್ದಡೆ ವಿ। ಕಾರತನದ ನುಡಿ ಆಡುವನು। ಕಾರುವ ಮಾನವಗೆ ಹೇಮ ಪಾತ್ರಿಯೊಳಗೆ। ಕ್ಷೀರವ ತಂದಿತ್ತರೆ ಸುಖವಾಗೋದೆ। ಕೂರಿಗೆ ಕಟ್ಟಿಕೊಂಡು ಉಸಕು ಬಿತ್ತದರಿಂದ। ಹೇರು ಹೇರು ಧಾನ್ಯ ಮನಿಗೆ ಬರಲುಂಟೆನೊ। ಗಾರು ಗೆಡದಿರು ಒಬ್ಬರಂತೆ ಪರರ। ದೂರದಿರು ಪುಣ್ಯವ ಪೋಗಾಡಿಸೀ। ಮೇರೆದಪ್ಪದಿರು ಮನವೆ ಈ ಮಾತು ಕೇಳು। ಪಾರಮಾರ್ಥಿಕನಾಗೊ ಬೇಡಿಕೊಂಬೆ। ಪ್ರೇರಕ ಸರ್ವರಿಗೆ ವಿಜಯ ವಿಠಲನಂಘ್ರಿ ವಾರಿಜದಳನಂಬು ಉಂಟು ಮುಕ್ತಿಲಿ ಇಂಬು ॥೧॥

## ಮಟ್ಟತಾಳ

ಸಿಡಲಿಗೆ ನಡುಗದ ಶೈಲವನ್ನು। ಕಡುಮುಳಿದು ಮನುಜ ಕವಣಿಗಲ್ಲನು ಬಲು। ಹೊಡೆದು ಹೊಡೆದರಕೆ ಮಾನ ಪೋಗುವದೇನೊ। ಪೊಡವಿ ರಮಣ ಹರಿಯ ಕರುಣಾ ಇರುತಿರಲು। ಅಡಿಗಡಿಗೆ ಬಿಡದೆ ದುರಳಮತಿಯವರು। ನುಡಿದರೇನಾಗುವದು ನಿರ್ಮಳದಲಿ ಇರಲು। ಒಡಲಿಗಾರದೆ ಜೀವ ಒದರಿಕೊಂಡದರಿಂದ। ಒಡನೆ ಉತ್ತಮ ಜನರು ಮೆಚ್ಚುವರೆ ಮನವೆ। ಒಡನಾಡುವ ನಮ್ಮ ವಿಜಯ ವಿಠಲರೇಯನ। ಬಿಡದಿರೂ ಬಿಡದಿರೂ ನೆನೆಸುವ ಸೌಭಾಗ್ಯ ॥೨॥

## ತ್ರಿವಿಡಿತಾಳ

ಕತ್ತಿಯ ಕೊರಳಿಗೆ ನಾನಾ ವಿಚಿತ್ರದ। ರತ್ನ ಮುತ್ತಿನ ಮಾಲೆ ಹಾಕಿ ವೇಗ। ಸುತ್ತುಮುತ್ತಲು ಜನರು ನೆರೆದು ಕೆನೆಮೊಸರು। ಬುತ್ತಿಯ ಕಲೆಸಿ ಅದರ ಬಾಯಿಗೆ। ತುತ್ತು ಮಾಡಿ ಕೊಡುತ ತಾಳಮಾಳ್ಯದ ಕೂಡ। ಸತ್ತಿಗೆ ನೆರಳಲ್ಲಿ ಬೀದಿಯೊಳಗೆ। ಮೊತ್ತ ರಭಸದಿಂದ ಮೆರಿಸಿಕೊಳ್ಳುತ ಬರಲು ಅತ್ತಲಿ ಕತ್ತೆ ಮತ್ತೊಂದರನ। ಹತ್ತಿಲಿ ಕಾಣುತ ಅದರ ಸ್ವರದಲ್ಲಿ ಮೊಗ। ವೆತ್ತಿ ಕೂಗದೆ ಸುಮ್ಮನಿರಬಲ್ಲದೇ। ಉತ್ತಮ ಜನರಲ್ಲಿ ಇದ್ದರೇನು ತನ್ನ। ಚಿತ್ತ ಸ್ವಭಾವ ಬಿಡಬಲ್ಲದೆ। ಇತ್ತಲಿದೆ ಪರಿನಿಂದಕ ಮನುಜಂಗೆ। ಹೊತ್ತು ಹೋಳಾಗುವದು ಪರನಿಂದ್ಯದಿಂದ। ತತ್ವ ತಿಳಿದವನ್ನ ನೋಡೆ ದೇ। ವತೆಗಳೆಲ್ಲ ತೋಷವಾಗುವರೈ। ತೊತ್ತಿನ ಬುದ್ಧಿ ನೀಮರದು ನಿರುತ ಏಕ। ಚಿತ್ರದಲ್ಲಿ ಭಜಿಸು ಪರಮಾತ್ಮನ। ನಿತ್ಯ ಪರವಸ್ತು। ವಿಜಯ ವಿಠಲರೇಯನ। ತೆತ್ತಿಗನಾದವನ ಕೊಂಡಾಡು ಎಲೆ ಮನವೆ ॥೩॥

## ಅಟ್ಟತಾಳ

ಮನವೆ ಲಾಲಿಸಿ ಕೇಳು ಇನಿತು ವಿಚಾರ ಈ॥ ಜನುಮದಲ್ಲಿ ಶುದ್ಧ ತನುವೆ ಬಂದಿದೆ ನೋಡು। ಹೊಣೆಯಲ್ಲಿ ನೋಡಲು ಮುಂದಿನ

ಜನುಮಕೆ ಆವಾ। ತನುವೆ ಬಪ್ಪದು ಕಾಣೊ ಎನಗಿಂದು ತಿಳಿಯದು।
ತೃಣಪ್ರಾಣಿಗಳು ಸಜ್ಜನ ವೃತ್ತಿಯಲ್ಲಿ ಇದ್ದು। ಅನಿಲಾದೇವನ
ಮತವನುಸರಿಸಿಕೊಂಡು। ದಿನವ ಹಾಕುವರಿಗೆ ಪ್ರಣುತನು ನೀನಾಗು।
ವಿನಯದಿಂದಲಿ ಪೋಗಿ ಘನ ದುರಿತನಾಶನ। ಗಣನೆ ಇಲ್ಲದ ದುರ್ಜನ
ಸಂಗವಾಗದು। ಅನಿಮಿಷರೊಡಿಯ ಶ್ರೀ ವಿಜಯ ವಿಠಲರೇಯನ।
ತನುವಿನೊಳಗೆ ನೋಡು ತಾರತಮ್ಯದಿ ಬಿಡದೆ ॥೪॥

**ಆದಿತಾಳ**

ನಿಂದಾ ಮಾಡಿದರೆಂದು ನೊಂದುಕೊಳಲಿಬೇಡ। ವಂದಿಸಿದರೆಂದು
ನಂದವ ಬಡಬೇಡ। ನಿಂದೆ ವಂದನೆಗಳು ಆರಾರವೊ ಹೆಚ್ಚು। ಕುಂದು
ಚಂದಾಗಿ ಗುಣಿಸು ಅಧಿಕಾರಿಗಳು ಬೇರೆ। ಮುಂದೆ ನೋಡಿ ನಡೆದು
ಸಂದೇಹ ಬಿಟ್ಟು ನಿನಗೆ। ಬಂದಪಕೃತಿ ಕುಲ ವೃಂದವ ಪರಿಹರಿಸು।
ಮುಂದಿಯುಗೊಡಿವೆ ಯಾಕೆ। ಎಂದಿಗಾದರು ತಮಗೆ ಬಂದ
ಕರ್ಮಉಂಡು। ಹಿಂದು ಮಾಡದೆ ಬಿಡರು। ಪೊಂದಿದವರ ಕಾವ ವಿಜಯ
ವಿಠ್ಠಲಸ್ವಾಮಿ। ಬಂಧನ ಪರಿಹರಿಸಿ ಅಂದವಗೆ ಮುಕುತಿ ಕೊಡುವ ॥೫॥

**ಜತೆ**

ಸುಜನಕ್ಕೆ ಕೈಮುಗಿದು ನಮಿಸುತಿರಾವಾಗ ।
ಕುಜನಕ್ಕಳಕದಿರೂ ವಿಜಯ ವಿಠಲ ವೊಲಿವಾ ॥೬॥



## ಸುಳಾದಿ-೭೮

ಸೋತ್ತುಮರ ನಿಂದಾವರ್ಜನ, ಅನೇಕ ಭಾಗವತ ಧರ್ಮಾಚರಣೆ (ಸಾಧನ)

**ರಾಗ- ಕೇದಾರಗೌಳ ಧ್ರುವತಾಳ**

ಯಾಕೆ ಜೀವನವೆ ವಿವೇಕ ಮತಿಸಾಲದೆ। ಲೋಕದೊಳು ಎನ್ನ
ದೂರುವದೇನೊ। ಸಾಕುವ ನೃಪತಿ ಸೇವಕರಿಗೆ ಸಂಬಳ। ಬೇಕಾದ ನಿತ್ತು

ನೀಯೆ ತಡಮಾಡದೆ। ವಾಕು ಪೇಳಲು ನಿರಾಕರಿಸಿದರೆ ಪಾ। ತಕವಾವರಿಗೆ ಬಾರದೇನೊ। ತಾಕಲೂರದೆ ಬಿದ್ದು ಭೂಮಿಯ ಬೈದ ವಿ। ವೇಕನಂತೆ ನೀನು ಬಾಳೋರೇನೊ। ನೈಕ ಕರ್ಮಕೃತು ವಿಜಯ ವಿಠ್ಠಲಗೆ ನೀ। ಬೇಕಾದವನೆ ನಾ ಬೇಕಾಗದವನೆ ॥೧॥

## ಮಟ್ಟತಾಳ

ಬಲ್ಲಿ ರಾವುತನು ಇಲ್ಲದೆ ಇರಲು। ಹಲ್ಲಣಕ್ಕೆ ವಾಜಿ ನಿಲ್ಲುವದೇನೊ। ಎಲ್ಲ ಕಾಲದಲಿ (ಎಲ್ಲಾದಲ್ಲಿ) ನಿನ್ನಲ್ಲಿ ದೃಢವಿರೆ। ಸೊಲ್ಲು ಉಲ್ಲಂಘಿಸಲು ಸಲ್ಲುವದೆ ಎನಗೆ। ಪುಲ್ಲಶರನೈಯ್ಯ ವಿಜಯ ವಿಠಲ ಮಾರ್ಗ। ಎಲ್ಲರಿಗೆ ದಯದಲ್ಲಿ ತೋರಿ ಕೊಡವ ॥೨॥

## ತ್ರಿವಿಡಿತಾಳ

ಉತ್ತಮರನು ಕಂಡು ಎತ್ತಿ ಕರಗಳ ಮುಗಿಯೊ। ಚಿತ್ತದಲ್ಲಿ ಪಾಪದತ್ತ ಪೋಗದಿರು। ತೊತ್ತು ವಾರ್ತೆಗೆ ಕಿವಿಯಿತ್ತು ಕೇಳದಿರು। ಸೋತ್ತಮರ ಕೂಡ ಪುಶಿಯಾಡದಿರು। ಆತ್ಮಸ್ತುತಿಯ ಬಿಡು ಎತ್ತದಿರು ಪರರನಿಂದೆ। ತೊತ್ತು ಬಡಕರಿಗೆ ತತ್ವ ಉಸರದಿರು। ಜಿತಮನ್ಯು ವಿಜಯ ವಿಠಲನ್ನ ಚರಣ ಪಿಡಿ। ಸುತ್ತಲಿದ್ದರೆ ನಾನೆತ್ತ ಪೋಗೆನೊ ಜೀವಾ ॥೩॥

## ಅಟ್ಟತಾಳ

ಹಿಂದೆ ನೀನು ಸುಮ್ಮನೆ ನಿಂದು ಇರಲಾಗಿ ಇಂದಿರಾರಮಣನು ತಂದು ನಮ್ಮನ್ನೆಲ್ಲ ಪೊಂದಿಸಿ ಕೊಡಲಾಗಿ ಅಂದು ಮೊದಲು ನೀ ನೊಂದ ಸಾಧನದಿಂದ ಬೆಲೆಗಾಂಬೀ। ಇಂದ್ರ ಕರ್ಮನಾಮ ವಿಜಯ ವಿಠ್ಠಲ ಬೇ। ಡೆಂದರೆ ನಿಲ್ಲವು ಒಂದು ದಿನಾದರೂ ॥೪॥

**ಆದಿತಾಳ**

ಹಾದರ ಬೇಡೆಂಬೊ ಗರ್ತಿ। ಮಾದಿಗನ್ನ ಪೋದಂತೆ। ಓದು ಕಲಿತ ಪಂಡಿತ ಏ। ಕಾದಶಿಲಿ ಉಂಡಂತೆ। ನೀಥಾರಾಳವಾಗಿರದೆ। ಪೋದವು ಇಂದ್ರಿಯಗಳೆಂದು। ಬೀದಿ ಬೀದಿ ದೂರಿದೂರಿ। ತೋದ ವಸ್ತ್ರವಾಗದಿರು। ವೇದಾತ್ಮನಾಮ ವಿಜಯ ವಿಠ್ಠಲನ್ನ ಲೀಲಾಸ। ತ್ವದವನು ನಂಬೆ ಸರ್ವ। ಸಾಧನಕ್ಕೆ ಅನುಕೂಲ ॥೫॥

**ಜತೆ**

ಸಕಲರೊಂದಾಗಿ ಸಂಗ್ರಹ ವಿಜಯ ವಿಠ್ಠಲನ್ನ ।
ಭಕುತರೆಂದೆನಸಿ ವಿಮುಕುತಿಲಿ ಸುಖಬಡುವ ॥೬॥



## ಸುಳಾದಿ-೭೯

ಸೋತ್ತುಮರ ನಿಂದಾವರ್ಜನ

**ರಾಗ- ಭೈರವಿ ಧ್ರುವತಾಳ**

ನಿಂದಿಸದಿರು ಮನವೆ ಮದ್ವಮತವೆ ಗತಿ। ಎಂದು ನೆರೆ ನಂಬಿದರೆ ವೈಷ್ಣವರ। ಮುಂದೆ ನಿನಗೆ ಪುಣ್ಯಬಾರದು ದೊರಕದು। ಹಿಂದೆ ನೆಸಗಿದ ಸುಕೃತ ಬಯಲಾಹದೋ। ಇಂಧನ ಪೋಗಿ ಅಗ್ನಿ ಮೇಲೆ ಬಿದ್ದಂತೆವೋ। ಮಂದನಾಗಿ ಕೆಡದಿರು ಮೂರ್ಖ ಮನವೆ। ನಿಂದಿಸಿದ ಮೇಲೆ ಜನರ ಬಳಿಗೆ ಪೋಗಿ। ವಂದಿಸಿ ಮಾತನಾಡಿದರೆಂತಹದೋ। ಮುಂದಲೆ ಕೊಯ್ದು ಮುಡಿ ಹುವ್ವನಿಟ್ಟಂತೆ ಕಾಣೊ। ನಂದಾವಾಗುವದೇನೊ ತಿಳಿದು ನೋಡು। ಕೆಂದವು ಬಿಳಪು ಕಪ್ಪು ಕಪಿಲಾ ಮೊದಲಾಗಿ। ಒಂದೊಂದು ಬಣ್ಣದ ಗೋವುಗಳಿರಲು। ನಿಂದ್ಯಕ್ಕೆ ಯೋಗ್ಯವಾದ ಗೋವು ಮತ್ತಾವದೊ। ಇಂದು

ನಿನ್ನೊಳಗೆ ನೀನೆ ವಿಚಾರಿಸೂ। ಸಂದೇಹ ಗೊಳಸಲ್ಲ ಸತತ ನೀನೆಸಗುವ। ನಂದವ ಕೇಳೆಲೊ ಪಶುವಿಗೆ ಪೋಗಿ। ವಂದನೆ ಮಾಡಿ ಪುಣ್ಯ ಸಂಪಾದಿಸುವದೇನೊ। ಅಂದವಾಗಿದ್ದ ಭೂಮಿ ಸುರನ ನೋಡಿ। ನೊಂದು ಸೈರಿಸಲಾರದೆ ದೂಷಿಸುವದೇನೊ। ಎಂದಿಗೆಂದಿಗೆ ನಿನಗೆ ಪುಣ್ಯವಿಲ್ಲ। ಅಂದು ಬ್ರಾಹ್ಮಣನೊಬ್ಬ ಜಾತಿಹೀನನಾಗಿ। ಕುಂದದೆ ಕಿರಾತ ಸ್ತ್ರೀಯಗಳಲ್ಲೀ। ನಂದನರನ್ನು ಪಡೆದು ಇರುತಿರೆ ವೈನತೇಯ। ತಂದೆ ಆಜ್ಞದಿಂದ ವೇಗ ತೆರಳಿ। ಬಂದು ಅವನ ನುಂಗೆ ಗಂಟಲಸುಟ್ಟು ಆಹಾ। ಎಂದು ನುಗಳಿದ ನೋಡು ಸಮಸ್ತರ। ತಂದೆ ಪೇಳಿದ ಮಾತು ನೆನಿಸಿಕೊಂಡು ಮನಕೆ। ತಂದಾ ಬ್ರಹ್ಮಬೀಜದ ಪೌರುಷವ। ನಂದನ್ನ ಕಂದ ಶಿರಿವಿಜಯ ವಿಠ್ಠಲರೇಯನ। ಪೊಂದಿದ ದಾಸರ ನಿಂದ್ಯವೆ ಹರಿಯ ನಿಂದ್ಯಾ ॥೧॥

### ಮಟ್ಟತಾಳ

ಸಲ್ಲದು ಸಲ್ಲದು ಭಯಹಾರಿಯ ಭಕ್ತರ। ನಿಲ್ಲದೆ ದೋಷಿಸುವ ನಿಷ್ಠುರ ವಚನಗಳು। ಎಲ್ಲಿದ್ದರೆ ಏನು ಎಂತು ನಡೆದರೇನು। ಬಲ್ಲಿದರು ಕಾಣೊ ಅವರು ಜಗತ್ತಿನೊಳು। ಸಲ್ಲುವರು ಹರಿಯ ಪಾದ ಪಲ್ಲವ ಸೇವಿಗೆ। ಬಲ್ಲವರು ಎನ್ನು ಯೋಗ್ಯತಾನುಸಾರ। ಕಲ್ಲು ಮರನ ತೆರದಿ ಕಾಣಿಸಿಕೊಳುತಿಪ್ಪರು। ಎಲ್ಲ ಕರ್ಮಕೆ ಹರಿ ತಾನೆ ಪ್ರೇರಿಸುವನು। ಮಲ್ಲಮರ್ದನ ವಿಜಯ ವಿಠ್ಠಲ ನಿತ್ಯ। ವಲ್ಲಭ ನಮಗೆಂದು ನಲಿದಾಡುವರೂ ॥೨॥

### ತ್ರಿವಿಡಿತಾಳ

ಇಂತಿಪ್ಪ ಭಗವದ್ಭಕ್ತರನ ನಿಂದ್ಯ ಮಾಡುವವ। ಹಂತ ಮಾನವರ ಗತಿಯ ಕೇಳು ಎಲೆ ಮನವೆ। ಸಂತತಿ ಸಹವಾಗಿ ನರಕದಲ್ಲಿ ಬಿದ್ದು। ಸಂತತದಲಿ ಬಳಲಿ ಆತರುವಾಯದಲ್ಲಿ ಪುಟ್ಟಿ। ಕಾಂತಾರದಲಿ ಪಿಶಾಚಿ ದೇಹವ ತೆತ್ತು। ಸಂತಾಪದಲಿ ಬೆಂದು ಹೊರಳೂವರು। ಪಿಂತೆ ಪಾರ್ವತಿ

ಪತಿಯ ನಿಂದಿಸಿ ದಕ್ಷನು। ಎಂತಾದನು ನೋಡು ಸುರರ ಮಧ್ಯ। ಮುಂತೆ ಯದು ಕುಲದವರು ಮುನಿಯ ವಂಚಿಸಲಾಗಿ। ಅಂತಕನ ಸಾರಿದರು ತಮಗೆ ತಾವೇ। ನಿಂತ ಗೋಷ್ಪಾದೋದಕ ದಾಟಲಾರದಲ್ಲಿದ್ದ। ಮಂತ್ರೋಕ್ತ ಮುನಿವಾಲಿಖಿಲ್ಯಾ ಜನರ। ಭ್ರಾಂತಿಯಿಂದಲಿ ಇಂದ್ರ ಆಭಾಸ ಮಾಡಲು। ಚಿಂತೆಯಿಂದಲಿ ಬಲು ವ್ಯಾಕುಲ ಐದಿದನು। ಸಂತ ಜನರ ನಿಂದ್ಯ ಒಳಿತಲ್ಲ ಒಳಿತಲ್ಲ। ಜಂತುಗಳ ಅಂತಃಕರಣವ ಪರಿಯಲ್ಲಿ। ಸಂತಿಹ್ಯದೊ ಬಲ್ಲವರಾರೊ ವೃತ್ತಿ। ಎಂಥವನಾದರೂ ಉತ್ತಮರ ಹಳಿದರೆ। ಶಾಂತನಾಗದೆ ಪೋಗಾಜ್ಞಾನಿಯಾಗೇ। ಪಂಥವೆ ಬಿಡು ಬಿಡು ಹೃದಯದೊಳಗೆ ಇದ್ದ। ಗ್ರಂಥಿಯ ಕಳೆಕೊಂಬ ಯೋಗವಲ್ಲ। ಕಿಂತು ಬುದ್ಧಿಯಲಿಂದ ಕೆಟ್ಟು ಪೋದರೆ। ಸತ್ಪಂಥ ದೊರಕದು ಕಾಣೊ ನಾನಾಕರ್ಮ। ತಂತ್ರ-ಮಂತ್ರಗಳಿಂದ ಮಾಡಿದ ಕಾಲಕ್ಕೂ ಇಂತು ಮಹಾತ್ಮರ ನಿಂದ್ಯೆ ಒಂದೇ। ಅಂತರಂಗದಲ್ಲಿ ಯೋಚಿಸಲು ಸ್ವಹಾ ಕಾಂತಾ ಮೆಲುವನಯ್ಯ ಎಲ್ಲಾ ಪುಣ್ಯ। ಸಂತೋಷದಲಿ ಮನುಜ ರತ್ನ ಭಾಂಡವ ರಚಿಸಿ। ಶಾಂತವಾಗಿದ್ದ ಕಪಿಲಾವಿನ ಹಾಲು। ಕ್ಲಾಂತಾರಹಿತನಾಗಿ ತುಂಬಿದ ಮೇಲೊಂದು। ತಂತಿ ಮನೆಯಲ್ಲಿ ಅದ್ದಿ ಮದ್ಯದ ಬಿಂದು। ಪ್ರಾಂತಿಗೆ ಹಾಕಲು ಶುದ್ಧವಾಹದೆ ಆದ। ರಂತೆ ತಿಳಿಯಬೇಕು ಮಾಳ್ಪಪುಣ್ಯ। ಕಂತು ಜನಕ ನಮ್ಮ ವಿಜಯ ವಿಠ್ಠಲರೇಯ। ಎಂಥ ಮಾತಿಗೆ ಒಲಿಯ ಇದು ಇಲ್ಲದವಗೆ ಊಳಿಗ ॥೩॥

### ಅಟ್ಟತಾಳ

ಸ್ನಾನ ಸಂಧ್ಯಾನ ಜಪ ತಪ ವ್ಯಾಖ್ಯಾನ। ಮೌನ ಶ್ರವಣ ನೀತಿ ಸ್ಮರಣೆ ಕೀರ್ತನೆ ಸೇವೆ। ಜ್ಞಾನ ಭಕುತಿ ನಿರ್ವೇದ ಯಾಗಯೋಗ। ಗಾನ ಯಾತ್ರೀ ತೀರ್ಥ ನಾನಾ ಪರಿ ಪರಿ। ದಾನ ವಿದ್ಯಾಭ್ಯಾಸ ಶಿಷ್ಯ ಸಂತತಿ ಸಂ। ತಾನ ಶರೀರ ಕಾಂತಿ ಭೂಷಣ। ಮನ ಮಂದಿರ ವಸ್ತ್ರ ಮಿತ್ರ ಬಂಧು ಬಳಗ। ಯಾನ ಮೃಷ್ಟಾನ್ನ ಭೋಜನ ಗಜಾಶ್ವ ಗೋವು। ಧ್ಯಾನ ಧನ ವೃತ್ತಿ

ಕ್ಷೇತ್ರವನ ತಟಾಕ ವಾಪಿ। ಕ್ಷೋಣಿ ವಿಬುಧ ಸ್ತೋತ್ರ ಜನಕ ಜನನಿ ಭ್ರಾತೃ। ಆನಂದ ಅತಿಶಯ ಧನ ಧಾನ್ಯ ಆಶ್ರಮ। ತ್ರಾಣಾ ಪ್ರೀಣಾ ಸರ್ವ ಜಾತಿ ಭೂತದಯ। ಪಾಣಿ ಚರಣ ಮಿಕ್ಕ ಇಂದ್ರಿಯ ವ್ಯಾಪಾರ। ಏನೇನು ವೈದಿಕ ಲೌಕೀಕ ಧರ್ಮವು। ಶ್ರೀನಿವಾಸಗೆ ಪ್ರೀತಿಕರವಾಗಿ ನಿರುತಾರ। ಆನಂದ ತೀರ್ಥರ ಗ್ರಂಥ ಸಮ್ಮತದಿಂದ। ಅನಂತಾನಂತ ಈ ಬಗೆಯಲಿ ಇದ್ದರೂ। ನಾನಲ್ಲ ಇದಕೆಲ್ಲ ಹರಿಯೆ ಕರ್ತುನೆಂದು। ನಾನೆಂಬುದು ಉಂಟು ಹರಿ ಇತ್ತದು ಎಂದು। ನಾನೇ ಅಸ್ವಾತಂತ್ರ ಹರಿ ಏಕಾ ಸ್ವಾತಂತ್ರ। ಸಾನುರಾಗದಿಂದ ಆಧೀನ ಚಿಂತಿಸಿ। ಅನಾದಿ ಕಾಲಕ್ಕೆ ಇದು ಸತ್ಯ ಇದು ಸತ್ಯ। ಮಾಣಾದೆ ಬಹು ವಿಧ ಆಪತ್ತು ಬಂದರೂ। ಅನಾಥ ಬಂಧುವೆ ಅಚಿಂತ್ಯದ್ಭುತ ಶಕ್ತ। ನೀನೆ ಗತಿ ಎಂದು ಇರುಳು ಹಗಲು ಹೀಗೆ। ಜ್ಞಾನೋಪಾಸನೆ ಮಾಡಿದ ಮನುಜನ್ನ। ನೀ ನಿಂದಿಸಲಾಗದು ಬೇಡಿಕೊಂಬೆ। ಭೂನಿರ್ಜರ ಮಣಿಯ ಅವಜ್ಞಾದಿಂದ। ಅನರ್ಥವಾಗೋದು ಇಂಥ ಉತ್ತಮ ಗುಣ। ಜ್ಞಾನಿಯ ತಿರಸ್ಕಾರ ಮಾಡಲು ವಿಪತ್ತು। ಎಣಿಸಲಾಗದು ಎಲೊ ಮನವೆ ತಿಳಿ। ಮಾನವೆ ತಾಳಿ ದುಷ್ಟ ವಾಕ್ಯಗಳಿಂದ। ಏನೇನು ಅವರಲ್ಲಿ ಇದ್ದ ಸಂಪತ್ತುನೆ। ನೀ ನೋಡಿ ನಿಂದಿಸೆ ನಿನಗದೆ ಎಂದಿಗೂ। ತಾನಿಲ್ಲದೆ ಪೋಗೋದೊ ಮೂಢಾತ್ಮಾ ಈ ನುಡಿ ನಿಜವೆನ್ನು ಮುಕ್ತಿಯೋಗ್ಯರ ಮೆಚ್ಚು। ನಾನೆಂಬವಗೆ ವಿಶ್ವಾಸ ಪುಟ್ಟದು ಕಾಣೊ। ದಾನವಾಂತಕ ರಂಗ ವಿಜಯವಿಠಲರೇಯ। ಜ್ಞಾನಿಯಾದವನಿಗೆ ಸೋತಿಹನೊ ನಿತ್ಯ ॥೪॥

**ಆದಿತಾಳ**

ರಣದಲ್ಲಿ ಪಾರ್ಥನ್ನ ಸಂಹರಿಸುವೆನೆಂದು। ಹೊಣಕಿಯಿಂದಲಿ ಬಂದು (ಶ್ರು) ಶೃತಾಯುಧ ಕೋಪದಲಿ। ಘನಗದೆಯನು ತಿರುಹಿ ಇಡುವೆನೆಂದು ಸ। ರ್ರನೆ ಸಮೀಪಕ್ಕೆ ಸಾರೆ ಹರಿ ರಥ ಓಡ್ಯಾಡಿಸಿ। ದಣಿಸಲಾಕ್ಷಣ ಅವನು ಉಗ್ರ ಗದೆಯಿಂದ। ವನಜನಾಭನ ಹೊಯ್ಯೆ ತತ್ಕಾಲಕ್ಕೆ ಉರಳಿ। ತೃಣವ ಉರಹಿದಂತೆ ಅಶ್ವತಾಯುಧ ಮ। ರ್ದನ

ಮಾಡಿತು ನೋಡಾ ಏನೆಂಬೆ ಕೌತುಕವ। ಮುನಿದು ಪಾಂಡವರ ಮೇಲೆ ವೈಷ್ಣವಾಸ್ತ್ರವ ಭಗ ದ। ತ್ತನನು ಹಾಕಲು ಮಹಾ ಪ್ರಳಯಾಗ್ನಿಯಂತೆ ಬರಲು। ಅಣು ಮಹತ್ತು ರೂಪ ಕೃಷ್ಣ ಭಕ್ತರಿಗಾಗಿ। ಅನುಕಂಪನದಿಂದ ಉರದಲ್ಲಿ ತಾಳಿದನು। ಇನಿತು ಭಕ್ತ ವತ್ಸಲ ಶರಣರಿಗೆ ಬಂದ ಮಾತು। ತನಗೆ ಮೇಲೆ ಹಾಕಿಕೊಂಡ ಪಾಲಿಸುವವನು ಗಡ। ಮನುಜನ್ನ ಗುಣ ಕರ್ಮವಳಗೆ ನಿಂದಿಸಿದರೆ। ಅನಿಮಿಷ ವ್ರಾತಕ್ಕೆ ನಿಂದಿಸಿದಂತೆ ಕಾಣೊ। ಅನುದಿನದಲ್ಲಿ ಇವರು ಅಭಿಮಾನಿಗಳಾಗಿ। ದಿನದಿನಕೆ ಮಾಡಿಸುವರು ಸತ್ಪ್ರವರ್ತಿ ಮಾರ್ಗ। ಗುಣವಂತನೆ ಕೇಳು ಭೂಮಿಯೊಳಗೆ ಒಬ್ಬ। ಧನವಂತನಿರುತಿಪ್ಪ ನಾನಾ ಸೌಖ್ಯದಲ್ಲಿ। ಅನುಸೂಯ ತೊರೆದು ನಿತ್ಯದಲ್ಲಿ ಭಾಗ್ಯವಂತನ। ಮನೆ ಮಿಗಿಲಾದ ಜನಕೆ ನಿಂದಿಸಲು ಸುಮ್ಮನಿಹನೆ। ಮನವೆ ಲಾಲಿಸು ಮಾತು ದೇವತಿಗಳು ತಾವೆ। ಗಣಣೆ ಇಲ್ಲದೆ ಚರಿಯಾ ಇವನಿಂದ ಮಾಡಿಸುವರು। ಕನಸಿಲಿ ಮನಸಿಲೀ ಪರನಿಂದ್ಯ ಬಿಡು ಬಿಡು। ತ್ರಿಣಿ ನೇತ್ರಗಾದರು ಈ ಗುಣ ಸಲ್ಲದು। ಜನನ ಮರಣ ಬಹು ಸಾರಿಗೆ ತೆತ್ತದ ರಾಗೆ। ಎಣಿಸುವರು ನಿನ್ನ ನಿಂದಕದವನೆಂದು। ಇನ ಶಶಿವುಳ್ಳನಕ ಅಪಕೀರ್ತಿ ಭಾಜನನಾಗಿ। ಬಿನಗು ಮತಿಯಲ್ಲಿ ಬದಿಕಿದರೇನು ಗುಣವೋ। ವನಜ ಪೀಠನ ಕಲ್ಪಶತ ಸಾ। ಧನ ಮಾಡಿಕೊಂಡಿರಲು ಯಾವತ್ತು ಕೆಡಿಸುವದೊ। ಮಣಿಗಣದಿಂದ ಒಳ್ಳೆ ಪ್ರವಾಳ ಸರ ರಚಿಸಿ। ಕೊನಿಗೆ ಅಸ್ಥಿಯ ಮಣಿ ಇಟ್ಟು ಧರಿಸಿದಂತೆ। ತನುವು ಶುಚಿಯಲ್ಲಾ ಮೆಚ್ಚರು ನೋಡಿದವರು। ಘನ ತನ ಉಳಿಯದು ಮುಂದಕ್ಕೆ ಕತ್ತೆಯಾಹ। ಚಿನುಮಯ ಮೂರುತಿ ನಮ್ಮ ವಿಜಯ ವಿಠ್ಠಲನಂಘ್ರಿ। ನೆನೆದವರು ಬಲು ಭಾಗ್ಯ ಗುಣಾಢ್ಯರೆನ್ನು ಮನವೆ ॥೫॥

**ಜತೆ**

ಸಕಲ ದೂಷಕಗೆ ಪ್ರಾಯಶ್ಚಿತ್ತ ಉಂಟು ನಿಂ ।
ದಕಗೆ ಇಲ್ಲವೂ ಕಾಣೊ ವಿಜಯ ವಿಠ್ಠಲ ಬಲ್ಲ ॥೬॥



# ಸುಳಾದಿ-೮೦

ಅಸೂಯಾದಿಗಳಿಂದ ಜ್ಞಾನಿಗಳ ನಿಂದಿಸಬಾರದು

## ರಾಗ-ಭೈರವಿ ಧ್ರುವತಾಳ

ಅಸೂಯಪರರಾಗಿ ಪುಣ್ಯ ಪೊಗಾಡದಿರೀ। ಭಾಸುರ ಜ್ಞಾನಿಗಳು ವೊಲಿದು ಕೇಳಿ। ಈ ಶರೀರ ಶರೀರವ ಶರೀರ ನಿತ್ಯವೆ। ಕಾಸಿಗಾದರು ಬೆಲೆಯಾಗದಿದಕೊ। ಲೇಶವಾದರೂ ಲಾಭ ಇದರಿಂದ ಉಂಟಾದರೆ। ಗ್ರಾಸದಂತೆ ಉದರ ತುಂಬಿದರೆ। ತ್ರಾಸು ಕಟ್ಟಿಕೊಂಡು ತೂಗಿದ ತೆರದಂತೆ। ತಾಸಿತಾಸಿಗೆ ಬಿಡದಾಡಬೇಕು। ವಾಸುದೇವನೆ ಅನಾದಿ ಜೀವದಲ್ಲಿದ್ದ। ಲೇಸು ಹೊಲ್ಲೆಗಳು ತಾ ವ್ಯಕ್ತ ಮಾಡಿ। ದೇಶ ಕಾಲಗಳಲ್ಲಿ ಬಗೆ ಬಗೆ ವಿಧದಿಂದ। ದಾಸ ದಾಸಿಯರೊಡನೆ ನಡಿಸುತಿಪ್ಪ। ಭೂಸುರ ಜನ್ಮದಲ್ಲಿ ತತ್ಪರನಾಗಿ ಸಂ। ತೋಷವಾಗುವದಲ್ಲ ಮತ ಸಮ್ಮತ। ಭೂಷಣವಕ್ಕು ಯಾವತ್ತು ಕಾಲಕ್ಕೆ ಸ। ರ್ವೇಶನು ಮೆಚ್ಚುವನು ಒಳಗೆ ಪೊಳೆದು। ಮೇಷ ಪ್ರವರ್ತಿಸಿದ ಪರಿಯಂತ ಮದ್ದಾನೆ। ವೇಷ ಧರಿಸಿದರೆ ಬರುವದೇನೈ। ಆಶೆಯಲ್ಲದೆ ತನ್ನ ನಿಜ ಸ್ವಭಾವ ಹಿಂಗುವದೆ। ಏಸು ಕಾಲ ಚಿಂತಿಸೆ ಮನೋ ವ್ಯಾಕುಲ। ಈಶ ಸಂಕಲ್ಪಕ್ಕೆ ಆರಿಂದಲೇನಾಹದೊ। ಕಾಸವಿಸಿ ಬಡುವದು ಒಂದೆ ಪ್ರಾಪ್ತಿ। ಈಸು ಮನ್ನಣಿ ಇವಗೆ ಜನರಿಂದ ಸಲ್ಲದೆನಲು। ವಾಸುದೇವನ ಇಚ್ಛೆ ಇಂಥ ದಿದಕೊ। ಶಾಶ್ವಿತವಾಗಿರಲು ಅನುಭವಿಸಬೇಕು। ಬೀಸಿ ಬಿಸಾಟದಿರೆ ತೊಲಗುವದೆ। ಸಾಸಿರ ಮಾನವರು ಒಂದಾಗಿ ಜನರಿಂದಾ। ಭಾಸಾ ಮಾಡಿಸದರೊಲ್ಲೆನೆಂಬೇನೆ। ಸಾಸವಿ ಕಾಳನಿತು ಮಾನದಪೇಕ್ಷೆಯನ್ನು। ಆಶೆ ಮಾಡುವನಾರು ಇಳಿಯೊಳಗೆ। ದೋಷರಾಸಿ ವಿನಾಶ ವಿಜಯ ವಿಠಲ ಬಿಡದೆ। ಪೋಷಣೆ ಮಾಡುತ್ತ ಮನದೊಳಗಿಪ್ಪದೆ ಲಾಭ ॥೧॥

## ಮಟ್ಟತಾಳ

ಮದ್ದುಗುಣಿಕಿ ಬೀಜ ನೋಡಿರೊ ಧರಿಯೊಳಗೆ। ಇದ್ದ ಬೀಜಕೆ ಎಲ್ಲ ನೀಚವೆನಿಸುವದು। ಬುದ್ಧಿಯಿಂದಲಿ ಕೇಳಿ ಆರಾದರು ಒಂದು ಕ। ಪರ್ದಿಕರವಿತ್ತು ಬೆಲಿಗೆ ಕೊಂಬುವರೇನೊ। ಮೆದ್ದರೆ ಸಕಲ ಜನ ತಮ್ಮಿಂದಲಿ ತಾವೆ। ಎದ್ದೆದ್ದಾಡುವರು ಎಲ್ಲೆಲ್ಲಿ ನೋಡಿದರೂ। ಶುದ್ಧ ಜನರು ಕಂಡು ಇದು ಇದು ಏನೆನಲು। ಪದ್ಧತಿ ತಪ್ಪುವದೆ ಅದರ ಸ್ವಭಾವವನು। ಪದ್ಮ ಸಂಭವನಯ್ಯಾ ಅಂಥಂಥಾ ಶಕುತಿ। ಹೊದ್ದಿಕೊಂಡಿಪ್ಪಂತೆ ನೇಮಿಸಿಪ್ಪನು ಗಡ। ಶ್ರದ್ಧ ಲೋಕಕೆ ಎಲ್ಲ ಎನ್ನ ಕಾಣುತ ಇನಿತು। ಎದ್ದೆದ್ದಾಡುವರು ಸೋಜಿಗ ತೋರುತಿದೆ। ಮುದ್ದು ಸಿರಿ ರಂಗ ವಿಜಯ ವಿಠಲರೇಯನ। ಉದ್ದಂದಾಟಕೆ ನಮೊ ಎಂಬೆನು ನಿತ್ಯಾ ॥೨॥

## ತ್ರಿವಿಡಿತಾಳ

ಕಲ್ಲು ಪ್ರತಿಮೆ ಒಂದು ಇಪ್ಪದಲ್ಲದೆ ತಾನು। ಸೊಲ್ಲು ಪೇಳುವದಲ್ಲಾ ನಗುವದಲ್ಲಾ। ಮೆಲ್ಲಮೆಲ್ಲನೆ ಕಿವಿಕೊಟ್ಟು ಕೇಳುವದಲ್ಲಾ। ನಿಲ್ಲದೆ ಕೈತಿರುಹಿ ಕರೆವದಲ್ಲಾ। ಎಲ್ಲಿಂದಲ್ಲೆ ಜನರು ಪೋಗಿ ಬರುತ ನಿಂದು। ಪೊಳ್ಳಾಗದಂತೆ ವರವ ಬೇಡುತ್ತ। ಬಲ್ಲಿದ ತನದಲ್ಲಿ ಇರುತಿರೆ ಕೆಲವರಿಗೆ। ಸುಳ್ಳಾದರೆ ನೋಡದೆ ಹೋಹೋರು। ಒಳ್ಳಿತಾಗಿ ಕೆಲಕೆ ಮನೋಭೀಷ್ಟೆಯಾಗಲು। ಬಿಲ್ಲಿನಂದದಿ ಬಾಗಿ ನಿತ್ಯ ಪೂಜೆ। ಬೆಲ್ಲ ಕಾಣಿಕೆ ನಾನಾ ಭೂಷಣವನೆ ಇಟ್ಟು। ಎಲ್ಲ ಪರಿಯಿಂದ ಸುಖೀಸುವರೊ। ಕಲ್ಲು ಪ್ರತಿಮೆ ಇಂಥ ವರವ ಕೊಟ್ಟತೇನೊ। ಅಲ್ಲಿದ್ದ ಲಕುಮೇಶನು ಅವರವರ। ಸೊಲ್ಲಿನೊಳಗೆ ತಿಳಿದು ಭಕ್ತಿವಶನಾಗಿ। ಸಲ್ಲಿಸುವನು ವರವ ಮನಸಿನಂತೆ। ಎಲ್ಲರು ಒಂದಾಗಿ ಸ್ಯೆರಸರಲೆ ಆ। ಕಲ್ಲಿನ ಬೈದರೆ ಚಳಿಸುವದೇ। ಹಲ್ಲು ನಾಲಿಗೆ ಬಾಯಿ ಆಡಿತಲ್ಲದೆಜನಕೆ। ಯಳ್ಳಿನಿತು ಫಲವಿಲ್ಲ ವಿಚಾರಿಸೇ। ಕಲ್ಲಿನ ಪ್ರತಿಮೆ ಎಂದದಲಿ ಕಾಣೊನಾನು। ಬಲ್ಲವ ನೆನದಿರಿ ಅಜ್ಞಾನಿಯು। ಕಲ್ಲಿಗೆ ಎನಗೇನು ಹೆಚ್ಚು ಕೊರತೆ ಎಂಬೊ। ದಿಲ್ಲವೊ ಇಲ್ಲವೊ ಚೇಷ್ಟೆ ಮಾತ್ರವೆ

ಉಂಟು। ಮಲ್ಲಮರ್ದನ ನಮ್ಮ ವಿಜಯ ವಿಠಲಸ್ವಾಮಿ। ಇಲ್ಲಿ ವಾಣಿ ನುಡಿಸಿ ಆರಾಧನೆಗೊಂಬಾ ॥೩॥

**ಅಟ್ಟತಾಳ**

ಸೂಜಿಯ ಮೇಲೆ ಗಢಾರವು ಮುನಿದಂತೆ। ತೇಜಾತಿಯಾದರೆ ವ್ಯಾಪಾರವೆ ಭೇದ। ಮೂಜಗ ಮೆಚ್ಚದು ಮೆಚ್ಚದು ಮೆಚ್ಚದು। ಜೂಜಾಡಿದದರಿಂದ ತನತಕ್ಕ ಮಾನವ। ಮಾಜದೆ ನೋಳ್ಪದು ಅದಕದಕೆ ಬಂದ। ತ್ಯಾಜವಲ್ಲದೆ ಲೇಶವಾದರು ಅಧಿಕವೇ। ವಾಜಿಯ ಗಮನವು ಭೂಮಿ ಮೇಲಲ್ಲದೆ। ಗೀಜಗನಂತೆ ಪಾರುವದೇನೊ ಗಗನಕ್ಕೆ। ತೇಜಿ ಉತ್ತಮ ನೂರಾರು ಸಾವಿರ ಬೆಲೆ। ಗೀಜಗ ಕಾಸಿಗೆ ಬೆಲಿಗೆ ಪೋಗುವದೇನೊ। ಈ ಜಗಕೆ ಮಾಯಾ ಮೋಹಿಸಿಪ್ಪ ಸ। ರೋಜದಳನೇತ್ರ ಸಂತತ ಸುರಮಿತ್ರ। ಪೂಜೆ ಮಾಡುವೆ ಮಾಡಿಸಿಕೊಂಡೆನೆಂದರೆ। ರಾಜಶೇಖರ ಬೊಮ್ಮ ಸುರರಾಜಗಾಹೋದೆ। ಭೋಜನ ವಾಹನ ವಸನ ಭೂಷಣ ಕಲ್ಪ। ಭೂಜದ ಕೆಳಗಿದ್ದ ನರಗೆ ಕಡಿಮೆ ಉಂಟೆ। ಭೋಜ ಅಮಿತ ತೇಜ ವಿಜಯ ವಿಠಲ ವಿ। ರಾಜಿಸುತಿಪ್ಪನಯ್ಯಾ ನಂಬಿದ ಜನರಿಗೆ ॥೪॥

**ಆದಿತಾಳ**

ಪರರ ಶ್ರೇಯಸ್ಸು ನೋಡಿ ಸಂಕಟ ಬಟ್ಟರೆ। ಗಿರಿಗೆ ಮಸ್ತಕವಿಟ್ಟು ಬಳಲಿ ಬೆಂಡಾದಂತೆ। ಬರಿದೆ ಎಲ್ಲದೆ ಜನಕೆ ಲಾಭ ಮತ್ತೇನು ಕಾಣೆ। ಶರಧಿ ಮೇಲೆ ಮುನಿದು ಒಂದು ಕುಡತಿ ಧೂಳಿ। ಭರದಿಂದ ತೂರಿದರೆ ತಲ್ಲಣಿಸುವದೇನೊ। ನರಹರಿಯ ಪಾದವ ಧೇನಿಸುವ ಮನುಜಂಗೆ। ಇರಳು ಹಗಲು ಬಿಡಿದೆ ನೂರಾರು ದೂರಲೇನು। ಕರುಣಾಕರ ನಮ್ಮ ವಿಜಯ ವಿಠಲರೇಯ। ಶರಣರ ಭಾಗ್ಯವನ್ನು ಪರಿಹರಿಸುವನ್ಯಾರು ॥೫॥

**ಜತೆ**

ಗರ್ತಿಯಾದವಳಿಗೇ ದುರಳರ ಭಯವೇನೊ ।
ಆರ್ತಜನರಪಾಲ ವಿಜಯ ವಿಠಲ ಮೆಚ್ಚ ॥೬॥

❖ ❖ ❖

## ಸುಳಾದಿ-೮೧

ಶ್ರೀಹರಿ ತದ್ಭಕ್ತರಲ್ಲಿ ಸಖ್ಯ, ಭಕ್ತಿ ವಿವರ ಸಾಧುಸಜ್ಜನರ
ಸಂಗ ಪ್ರಶಂಸನ

### ರಾಗ-ಸಾರಂಗ ಧ್ರುವತಾಳ

ಪರಮ ಕರುಣಾಕರ ಪರದೈವ ಸ್ವಾತಂತ್ರ। ಪುರುಷ ಸದ್ಗುಣಪೂರ್ಣ ಸುಖವಾರಿಧೀ। ಹರಿಯೆ ವಿಶ್ವಂಭರ ಭೂಭಾರ ಹರಣ। ಹರಿಣಾಂಕ ವದನ ಸುಂದರ ಮೂರುತಿ। ಮುರವೈರಿ ಮುಚಕುಂದವರದ ವಾಸುದೇವ। ವರತೀರ್ಥ ಪೆತ್ತ ಪ್ರಣತಾರ್ಥಿ ದೂರ। ಕರಿ ಭಯ ವಿನಾಶ ಕರವುಗಳ ಕಾಯ್ದಚೀರ ವಸನಗೇಯ ಚಿತ್ತಜನಯ್ಯಪಾ। ಮರ ಜನ ಉದ್ಧಾರ ಮಾಣು ಧರಣಿಧರ। ಧರಧರ ವರ್ನ ಸುಪರ್ನವಾಹನ ಚ। ತುರ ದಶ ಭೂವನಾಧೀಶ ಶ್ರೀಶಾ। ತರಣಿಕೋಟಿ ಪ್ರಕಾಶ ಪ್ರಭುವೆ ನಮ್ಮ ವಿಭುವೆ। ನರಕಾಂತಕಾವ ನರಪತಿ ಮಹಾ। ನರಕ ಭಂಜನ ಜ್ಞಾನಮುಂಜ ನಿರಂಜನ। ನರಮಿತ್ರ ನರನ ಕೂಡ ಜನಿಸಿಪ್ಪನೇ। ಸ್ಮರಿಸಿಧೇನಿಸಿ ಸೇವಿಸಿ ಕೊಂಡಾಡಿ ಉ। ಚ್ಚರಿಸಿ ಲಾಲಿಸಿ ನಿನ್ನಿ ಮಹಿಮೆಂಯುನ್ನೂ। ಪರಿಪರಿಬಗೆಯಿಂದ ಪರರಿಗೆ ವರದೊರದು। ಅರಘಳಿಗೆ ನಿಲ್ಲದಲೆ ಸರ್ವಾತ್ಮದಿ। ಇರದೆ ಗ್ರಹಿಸಿದರು ದಣಿಯದು ಈ ದೇಹ। ಹರಿ ನಿನ್ನ ಚರಿತಕ್ಕೆ ನಮೊ ನಮೊ। ಸುರನರೋಗ ಸರ್ವ ಜನರೊಳಗೆ ನಿನ್ನ। ಕರುಣಾಪಾಂಗಕೆಣಿಸಿ ಗುಣಿಸದರೂ। ಸರಿಗಾಣೆ ಎಲ್ಲೆಲ್ಲಿ ಸಂತತ

ಅರಿಸಿದರೂ। ನಿರುಮಲ ನಿಸ್ಸಂಗ ಗುರುವ ದೇವರ ದೇವ। ಗುರು ಕುಲಾಂಬುಧಿ ಚಂದಿರಗೆ ಆಶ್ರಯವಾದ ಅನಂತಾತ್ಮಾ। ಸಿರಿವಂತ ಬಲವಂತ ಭವದೂರ ಭವನುತಾ। ದುರುಳ ಮರ್ದನ ದಿವ್ಯ ಗೋವರ್ಧನಾ। ಧರಣಾ ದಾಸರ ಪ್ರಾಣಾ ದಾರಿದ್ರ ಭೇವನಾ। ಅರಿಕಂಬು ಕೌಮೋದಕಿ ಸರಸೀಜ ಪಾಣೀ। ಮೆರೆವ ಮನುಜ ವೇಷ ಕೈವಲ್ಯವಾಸ। ಸಾಗರ ಶಾಯಿ ಸಂಗೀತಲೋಲ ಶೀಲಾ। ಕರಣಂಗಳಲಿ। ತಾತ್ವಿಕರ ಒಡಗೊಂಡು। ನಿರುತ ಜೀವಿಗಳಿಂದ ಪಾಪಪುಣ್ಯ। ತೆರವಿಲ್ಲದೆ ಮಾಡಿಸಿ ಅವರವರ ತಕ್ಕದು। ಪರಿಪರಿ ಗತಿಯನ್ನು ಪಾಲಿಪನೆ। ಶರಣವಾಗಿಪ್ಪ ನಮಗೆ ವಿಜಯ ವಿಠಲ ನಿನ್ನ। ತರುವಾಯ ಮಿಕ್ಕಾದ ಜನರ ಸ್ನೇಹವೊಲಿಸೊ (ಫಲಿಸೋದು) ॥೧॥

### ಮಟ್ಟತಾಳ

ಎನ್ನಿಂದಲಿ ನಿನಗೆ ಆಗುವ ಉಪಕಾರ। ಅನ್ಯಥ ಕಾಣೆನೊ ಎಲ್ಲೆಲ್ಲಿ ಜನಸಿದರು। ಅನಂತ ಕಾಲಕ್ಕೆ ಅನಿಮಿತ್ತ ಬಂಧು। ಮನ್ನಿಸಿ ಭಕುತರ ಭರಣ ಮಾಡುವಲ್ಲಿ। ಸನ್ಯಾಯವೆ ಸರಿ ಸರಸಿಜ ಭವಗರಿದೊ। ಬಣ್ಣಿಸಿ ಪೇಳಿದರು ಬಲು ವಿಚಿತ್ರವೊ। ಕಣ್ಣಿಗೆ ಕಾಣಿಸದು ಕರದೊಳಗೆ ಇದ್ದ। ಕನ್ನಡಿ ತೆರದಂತೆ ಭಜಿಸುವರ ಜನ। ರನ್ನ ರಕ್ಷಿಸುವದು ಕಾಲಕಾಲಕೆ ಬಂದು। ನಿನ್ನ ಮಾಯಾ ಶಕ್ತಿ ನಿಶ್ಚಯವಾಗಿ। ಪಾವನಮತಿ ಇತ್ತು ಸಾಧನ ಪ್ರೇರಿಸುತ। ಚನ್ನಲಕುಮಿ ರಮಣ ವಿಜಯ ವಿಠಲರೇಯ। ಚನ್ನಾಗಿ ನಿತ್ಯಬಿಡದೆಸಾಕುವ ಧೊರಿಯೊ ॥೨॥

### ತ್ರಿವಿಡಿತಾಳ

ನಿಸ್ಸಂಗ ನೀನಾಗಿ ಲಕುಮಿಗೆ ನೀನೆವೆ। ವಶವಾಗದಲೆ ಸುತ್ತಿ ಸುತ್ತಿಪನೆ। ಬೆಸನಾ ಕೇಳಯ್ಯಾ ಸಂಸಾರದೊಳಗೆ ಜ। ನಿಸಿ ಬಂದು ಬಲು ಸಂಗದಲ್ಲಿ ಇದ್ದು। ವಸುಧಿಯೊಳಗೆ ಚರಿಸಿ ದಿನಪ್ರತಿ ದಿನ ನಾನಾ।

ವಿಷಯಂಗಳನುಭವಿಸಿ ಕಡೆಗಾಣದೇ। ದೆಶೆಗೆಟ್ಟು ತಿರುಗುವ ಮನುಜ ನಾನಾದರು। ಬಿಸಿಜ ನಾಭನೆ ಕೇಳು ನಿನ್ನ ವೊಲಿಸೀ। ಮಿಸುಣಿಪ ಭಕ್ತಿ ಪಾಶದಿಂದ ನಿನ್ನ ಬಂ। ಧಿಸಿ ಎನ್ನ ಮನದೊಳು ನಿಲಿಸಿಕೊಂಡು। ಕೊಸರಿದರೆ ಬಿಡದೆ ಕೇವಲವಾಗಿ ರಂ। ಜಿಸುವ ದೇವ ನಿನ್ನ ನಿಸ್ಸಂಗವ। ಪುಶಿಯದೆ ಬಿಡಿಸಿ ನಮ್ಮನ ಸಾಕುವಲ್ಲಿ। ಕುಶಲವಂತರು ನಿನ್ನ ಭಕ್ತರಲ್ಲದೆ ಲಾ। ಲಿಸು ಜಗದೊಳಗೆ ಮತ್ತಾರು ಉಂಟೊ। ಪಶು ಪಾಲಕ ನಮ್ಮ ವಿಜಯ ವಿಠ್ಠಲರೇಯ। ಅಸಮಾ ನೀನಾದರು ಭಕ್ತರಿಗೆ ವೋವಿಗಾ ॥೩॥

**ಅಟ್ಟತಾಳ**

ಸಂಗರಹಿತನಾಗಿ ಎಲ್ಲೆಲ್ಲಿ ಇಪ್ಪನೆ। ಡಿಂಗರಿಗರ ಪ್ರತಾಪವನ್ನೆ ನೋಡು। ಹಿಂಗದೆ ನಿನ್ನ ಸಂಸಾರಿಕನ ಮಾಡಿ। ಕೆಂಗೆಡದಲೆ ತಾವು ಸುಖದಲ್ಲಿ ಇಪ್ಪರು। ಮಂಗಳ ಮಹಿಮನೆ ನಿನಗಂಜದೆ ಜ। ನ್ಮಂಗಳು ತೆತ್ತರು (ತೆರುವರು) ನಾವುದ ಬಲದಿಂದ। ಭಂಗವಾಗಲಿ ಸಂತೋಷವಾಗಲಿ ನಿನ್ನ। ಸಂಗಡ ನಲಿದಾಡುವರು ಬಲು ಹಿಗ್ಗಿ। ರಂಗಮೂರುತಿ ಸಿರಿ ವಿಜಯ ವಿಠಲರೇಯ। ಸಂಗೀತರರಸ। ನಾಸಾಗ್ರದಲ್ಲಿಪ್ಪನೆ ॥೪॥

**ಆದಿತಾಳ**

ಬೇಡಿದರ್ಥವ ಕೊಡುವ ಕಡೆಯವ ನೆನ್ನದಲೆ। ಈಡಾರು ಈತನ್ನ ಕರುಣಾ ಕಟಾಕ್ಷಕ್ಕೆ। ನಾಡೊಳು ಚರಿಸುವ ಜನರು ಒಂದೆ ಸಾರಿ। ಪಾಡಿದರೆ ತಿಳಿದು ಗತಿಗೆ ಮಾರ್ಗವ ನೀವಾ। ಭೇಡಾರಾಗದಿರಿ ಭಕ್ತಿಯ ಮಾಡಿದರೆ। ಕೂಡಿಕೊಂಡು ತಿರುಗುವ ಆವಲ್ಲಿಗೆ ಪೋದರು। ನೋಡಿ ಚನ್ನಾಗಿ ಇಂದು ನೆರೆ ಹೊರೆಯವರನ್ನ। ಆಡಲೇನಯ್ಯಾ ಹರಿಯ ಮಹಿಮೆ ಎನ್ನ। ಕಾಡಿ ಬೇಡುವರೊಡಿಯ ವಿಜಯ ವಿಠ್ಠಲರೇಯ। ಮಾಡಿಸುವನು ಮುಕ್ತಿ ಯೋಗ್ಯನಿಂದ ಸತ್ಕರ್ಮ ॥೫॥

**ಜತೆ**

ಮುಖ್ಯ ಧರ್ಮ ಕಾಣೊ ವಿಜಯ ವಿಠ್ಠಲನ್ನ ।
ಸಖ್ಯನಾ (ವಾ)ಗಿಪ್ಪದು ಇಹ ಪರಲೋಕದಲ್ಲಿ ॥೬॥

❖ ❖ ❖

## ಸುಳಾದಿ-೮೨

ಸಾಧು ಸಜ್ಜನ ಸಂಗ, ತತ್ಸಂಗದಿ ಶ್ರವಣ ಮನನಾದಿ ಮುಖ್ಯ ಸಾಧನ

**ರಾಗ-ಭೈರವಿ ಧ್ರುವತಾಳ**

ಸಾಧು ಜನರ ಸಂಗ ಮಾಡು ಮನವೆ ಸಕಲ। ವೇದದಲ್ಲಿ ಸಾರಿ ಸಾರುತಿದಕೋ। ಆದಿಯಿಂದಲಿ ವಿಡಿದು ಇದ್ದ ದೇಹದ ಮೂಲ। ಛೇದಿಪುದಕ್ಕೆ ಇದೆ ಬೀಜ ಕಾಣೋ। ಪಾದಾರ್ಧಕಾಲವಾಗೆ ಬಿಡತಕ್ಕದ್ದಲ್ಲ ಸಂ। ಪಾದಿಸು ಸಾಧಿಸು ಹೃದಯದಲ್ಲಿ। ಬೋಧ ಭರಿತನಾಗಿ ನಲಿದಾಡು ಕುಣಿದಾಡು। ಮೋದಾಂಬುನಿಧಿ ಮಧ್ಯ ತೂಗ್ಯಾಡೆಲೋ। ಸಾಧನ ಒಂದು ಕಾಣೆ ಇದರ ವಿರಹಿತವಾಗಿ। ವೈದೀಕ ಮಾರ್ಗಕ್ಕಿಂತ ಸುಖವೇ ಇಲ್ಲ। ಆದಿತ್ಯಗಣದವರು ಭವವಲ್ಲೆವೆಂದು ಬಲು। ರೋಧನದಿಂದ ಹರಿಯ ತುತಿಪಾರಿದಕೊ। ಸಾಧಿಸಿ ತಿಳಿದು ನೋಡು ನಿನ್ನ ಪಾಡೇನು ಮೃತ್ಯು। ಹಾದಿ ನೋಡುತಲಿದೆ ದಿವಸ ಎಣಿಸಿ। ಈ ದೇಹ ಧೃಡವಾಗಿ ಉಳ್ಳ ಪರಿಯಂತ ನಿನಗೆ। ಈ ದೇಹಿಗಳೆಲ್ಲ ಅನುಬಂಧಿಯೋ। ಮೇಧಾಡಿ ಕರ್ಮಗಳು ಮಾಡಿದರೇನು ಬ್ರಹ್ಮ ವಾದಿಗಳ ಸಂಗ ವಿಲ್ಲದನಕಾ। ಓದಿದಾ ಮಾನವನು ಮಾತಂಗಿಸಂಗ ಮಾಡಿ ಮೇದಿನಿಯೊಳಗೆ ಇದ್ದಂತೆ ಕಾಣೊ। ತೇದ ಕರ್ಪೂರ ಗಂಧ ಹಂದಿಗೆ ಪೂಸಿ ವಿ। ನೋದ ಮಾಡಿದಂತೆ ತಿಳಿಯದ ಕರ್ಮ। ಗೋದಿಯ ಬೀಸಿ ತಂದು ಅದಕೆ ಮದ್ಯವೆ ಹಾಕಿ। ನಾದಿದಂತೆ ಕಾಣೊ ನಾನಾಕುಶಲ। ಐದ ಕಾಲಕ್ಕೆ ಶ್ರೀಹರಿವಾಯುವಿರಹಿತ।

ವಾದಕರ್ಮಗಳೆಲ್ಲ ವ್ಯರ್ಥ ಕಾಣೊ। ಆದಿ ಮಾರುತಿ ನಮ್ಮ ವಿಜಯ ವಿಠಲರೇಯನ। ಪಾದ ಪೊಂದುವದಕ್ಕೆ ಸುಲಭ ಸಾಧನ ಕೇಳಿ ॥೧॥

### ಮಟ್ಟತಾಳ

ಶ್ರವಣವೆ ಮಹಾ ಮುಖ್ಯ ಕರ್ಮ ಜ್ಞಾನಿಗಳಿಗೆ। ಶ್ರವಣವಿಲ್ಲದತನಕ ಆವದು ದೊರಕದು। ಶ್ರವಣದಿಂದಲಿ ಸತತ ಜ್ಞಾನ ಭಕುತಿ ವಿರುಕತಿ। ಶ್ರವಣವೆ ಸಕಲಕ್ಕು ಕಾರಣ ಕಾರಣವೋ। ಶ್ರವಣವೆ ಶ್ರೀಹರಿಯ ತಾತ್ವಿಕ ಪ್ರಸಾ। ದವನು ಮಾಡಿಕೊಟ್ಟು ಮುಕ್ತಿಗೆ ಐದಿಪದೊ। ಶ್ರವಣವೆ ಮಂಗಳವೋ ಮೂರು ಲೋಕಕ್ಕೆ ನಿತ್ಯ। ಶ್ರವಣ ಮಾಡಿದ ಮನುಜ ಸರ್ವದ ಪವಿತ್ರ। ಶ್ರವಣಾಸಕ್ತನಿಗೆ ಭಯಶೋಕಗಳಿಲ್ಲ। ಶ್ರವಣಾನಂದಕ್ಕಾಗಾಧ ಕರ್ಮಂಗಳು। ಇವು ಸರಿಯಾಗವು ಮರಳೆ ಮರಳೆ ಮರಳೆ ಎಣಿಸೆ। ಶ್ರವಣಕ್ಕೆ ಒಲಿವ ವಿಜಯ ವಿಠ್ಠಲನಂಘ್ರಿ। ನವನವ ನಾಮಗಳ ಶ್ರವಣ ಮಾಡೊ ಮನುಜ ॥೨॥

### ತ್ರಿವಿಡಿತಾಳ

ಅನಿಷಿದ್ಧ ಕರ್ಮಗಳು ಕೈಕೊಂಡು ಚನ್ನಾಗಿ। ಅನುಭವದಿಂದಲಿ ಇರಳು ಹಗಲೂ। ಮನದಲ್ಲಿ ಶ್ರೀಹರಿಯ ಧ್ಯಾನವ ಮಾಡಿಯೋ। ಚನೆ ಮಾಡುವದು ಸರ್ವ ವ್ಯಾಪ್ತ ತಿಳಿದು। ಘನವಾಗಿ ನಾನಾಕರ್ಮಕೆ ಮುಖ್ಯ ಸಾಧನ। ಗುಣಿಸು ಈ ಯುಗದಲ್ಲಿ ಶ್ರೀಕೃಷ್ಣಸ್ಮರಣೀ। ಕ್ಷಣ ಒಂದು ಮಾಡಿದರೆ ಅನಂತಾನಂತ ಬಹು। ಜನುಮದಲಿ ಮಾಡಿದ ಸತ್ಕರ್ಮವೋ। ಎಣಿಕೆ ಮಾಡಿದರಾಗೆ ಇದಕೆ ಸರಿಬಪ್ಪದೇ। ಮನುಜ ಕೇಳೆಲೊ ಮಾತು ಅತಿರಹಸ್ಯ। ಪ್ರಣವ ವಿಡಿದು ವಾಯು ಜಠರವನೆ ತುಂಬಿ। ಗಣನೆ ಇಲ್ಲದ ತಪಸು ಮಾಡಲ್ಯಾಕೆ। ಕೊನಿಗೆ ಪೂರೈಸದು ಕರ್ಮಠನಾದರೆ। ದಣಿದು ಕರ್ದಮ ವಾರಿ ಕೂಡಿದಂತೆ ವೊ। ದಿನ ಪ್ರತಿದಿನದಲ್ಲಿ ಕರ್ಮ ಸಂಕೋಚದಲ್ಲಿ। ವನಧಿಶಯನನ ನಾಮ ಮಂಗಳ ಶ್ರವಣ। ಅನಿಲನ್ನ

ಪಾದವ ಸ್ಮರಿಸುತ ಮಾಡಿದ। ಮನುಜಂಗೆ ವಿಷಯ ಜನನವಾಗದೂ। ಮಿನಗುವ ಇಂದ್ರಿಯಂಗಳು ಮನ ಪ್ರಾಣಾತ್ಮ। ಘನಧೈರ್ಯ ಸ್ಥೈರ್ಯ ಹ್ರೀ ಶ್ರೀ ಸತ್ಯವೂ। ವಿನಯ ವಿದ್ಯದ ಧರ್ಮಜ್ಞಾನ ಆಚಾರದಿ। ಇನಿತು ಸಿದ್ಧಿಸಿ ಅವಗೆ ಕೆಡದಿಪ್ಪವೋ। ಜನನ ಹಾನಿ ನಾಶ ವಿಜಯ ವಿಠಲರೇಯನ। ಗುಣ ಕರ್ಮಾವಳಿ ಮಹಿಮೆ ಶ್ರವಣ ಮಾಳ್ಪನೇ ಧನ್ಯ॥೩॥

**ಅಟ್ಟತಾಳ**

ತನಗೆ ಮಂಗಳ ತನ್ನ ಕುಲಕೆ ಮಂಗಳಸುತ್ತ। ಜನಕೆ ಮಂಗಳ ನಿತ್ಯ। ಸರ್ವ ಜಗಕೆ ಮಂಗಳ ಮನಸ್ಸಿನಲ್ಲಿ ನೆನೆನೆನೆದು ಪುಳಕೋತ್ಸಾಹ। ವನಧಿಯೊಳಗಿದ್ದು ಹರಿಕಥಾಮೃತದಲ್ಲಿ। ನೆನೆನೆನೆದು ತೋದುತೋದು ತೋದಾ। ಮನುಜನೋರ್ವನು ಸ್ವಾಭಾವಿಕವಾಗಿ ಪೋಗುತ್ತ। ನಿಮಧ್ಯ ಮಾನವ ಚಾಂಡಾಲಕುಲದಲ್ಲಿ। ಜನನವಾಗಿದ್ದು ನಿಶ್ಶೇಷ ಪಾಪಗಳೆಲ್ಲ। ಮನಃಪೂರ್ವಕವಾಗಿ ಮಾಡಿದವನ ನೋಡೆ। ಅನಿತರೊಳಗೆ ಶುದ್ಧಾತ್ಮನಾಗುವ ಕೇಳಿ। ಕನಸು ಎನ್ನಸಲ್ಲ ಯಮಪುರವೆ ಸಾಕ್ಷಿ। ತೃಣ ಮಾಡಿ ನರಕವ ಒದ್ದು ಪೋದರು ನೋಡು। ಮುನಿಪುಂಗವನುತ ವಿಜಯ ವಿಠಲರೇ। ಯನ ಹೃತ್ಕಮಲದಲ್ಲಿ ಕಾಂಬ ಶ್ರವಣದಿಂದ ॥೪॥

**ಆದಿತಾಳ**

ಭವತಾರಕ ಹರಿಕಥಾಮೃತ ಶ್ರವಣ। ಶ್ರವಣಕ್ಕೆ ಬೀಳಲು ಮಾಡುವ ಮುಕುತಿಗೆ। ಹವಣ ಭವತಾರಕ ಜಿತು ಉದ್ಧರಣ ಶ್ರವಣ ಭಾವನಾ। ಭುವನದೊಳಗಿರೆ ಧವಳಂತಃಕರುಣ। ನವನವ ಪ್ರಮೇಯಭಾಗಸ್ಮರಣವು। ಕವನ ಪೇಳುವರಿಗಾಭರಣಾ। ಭವತಾನೆ ಬಲ್ಲ ಇದರೋಚ್ಚರಣ ಆಚರಣ। ಶ್ರವಣ ಬಲು ಮಾಡಿದ ನರಗೆ ಜವನಭೀತಿ ಹರಣ। ಭವತಾರಕ ಹರಿಕಥಾಮೃತ ಶ್ರವಣ। ಭವಮೂರುತಿ ನಮ್ಮ ವಿಜಯ ವಿಠಲ ತನ್ನ। ಭವನವೆ ಕೊಡುವನನು ಶ್ರವಣವೆಗತಿ ಎನ್ನೆ ॥೫॥

**ಜತೆ**

ಶ್ರವಣ ಕೇಳದವನು ಜೀವಚ್ಛವನೆನ್ನಿ ।
ಪವನಸ್ವಾಮಿ ನಮ್ಮ ವಿಜಯ ವಿಠಲಮೆಚ್ಚು ॥೬॥



## ಸುಳಾದಿ-೮೩

ಸದ್ಭಕ್ತರಾದ ಬ್ರಾಹ್ಮಣರಲ್ಲಿ ಭಕ್ತಿ ಮಾಡುವದು ಬ್ರಾಹ್ಮಣರ ಮಹಿಮಾ

**ರಾಗ-ತೋಡಿ ಧ್ರುವತಾಳ**

ಸಜ್ಜನರ ಪಾದ ಧೂಳಿ ನಾನಯ್ಯ ಎನಗೈಯ್ಯ। ವಜ್ರಕವಚವಾಗಿ ಇರುತಲಿದೆ। ಜಜ್ಜರಿಸುವೆನೆ ಯಮನ ಭಟರ ಕಠೀಣೋಕ್ತಿಗೆ। ಪ್ರಜ್ವಲಿಸುವವು ಉರಿಗಂಭ ತೀವ್ರ ಮಜ್ಜಾ ಮಿಕ್ಕಾದ ನರಕ ಭಾರ ಯಮದಂಡದ ಗರ್ಜನೆ ಅತಿ ಕಠೋರವಾಗಲು। ದುರ್ಜೀವಿಗಳಿಗೆ ಗಂಟಲಗಿಳಿಯ ಎಂದಿಗೆ ಮೂಜಗದೊಳಗೆ ಹರಿಭಕ್ತಗೆದುರೇ। ಕುಜನರು ತಿಳಿಯದೆ ಕುಟಿಲ ಮತಿಯಲಿ ಭೂ। ನಿರ್ಜರರ ರೂಪನೆ ಧರಿಸಿ ಬಂದು। ಅಬ್ಜನಾಭನ ಹಗೆಯ ತಾಳಿ ನಿತ್ಯದಲಿ ಅ। ಪಜಯ ಪೊಂದುವರು ದುಃಖದಲ್ಲಿ। ಪೂಜ್ಯನಾಗದೆ ಪೋಗುವ ತಮಯೋಗ್ಯನವನೆನ್ನು। ಮಜ್ಜನಾದಿಯ ಮಾಡಿ ಲಾಭವೇನು ವ್ಯಾಜ್ಯವಲ್ಲದೆ ವ್ಯರ್ಥಸಾಧನವಾಗದು ಒಂದು। ಹೆಜ್ಜೆ ಇಡುವ ವನಿತು ಹೊತ್ತು ಪುಣ್ಯವಿಲ್ಲ। ಲಜ್ಜೆಯನ್ನು ತೊರೆದು ವಿವಶದ ಯವ್ವನ ನಾರಿ ಸಜ್ಜೆ। ಯಲಿ ಕಲಿಯುಗದಿ ರಮಿಸಿದರು। ತ್ಯಜಿಸಿ ಸರ್ವ ಜನ ದೂರ ಮಾಡುವರು ಅವ। ಳಾರ್ಜನಿಯಲಿಪ್ಪರೆ ತಿಳಿದು ನೋಡಿ। ದುರ್ಜನರು ಪಂಥದಲಿ ಐಕ್ಯ ಶಾಸ್ತ್ರದ ಕರ್ಮ। ಸೋಜಿಗವ ತೋರಿ ಬಹು ಮಾಡಿ ಅವಳ। ಆರ್ಜಿತದಂತೆ ಫಲವಾಗದು ಇದು ಸಿದ್ಧ। ದೂರ್ಜಟಿ ಬಲ್ಲನಯ್ಯಾ ಸಂಶಯವಿಲ್ಲಾ। ಗುಜ್ಜಿಗೊಲಿದ ನಮ್ಮ ವಿಜಯ ವಿಠಲನಂಘ್ರಿ। ಅಬ್ಜವನು ಭಜಿಸುವರ ಕರುಣವೆ ಗತಿ ಪಥಾ ॥೧॥

## ಮಟ್ಟತಾಳ

ಮನೆ (ಫ) ಗಳಿಸಲಿಬಹುದು ಧನ ಗಳಿಸಲಿಬಹುದು। ವನತೇರ ತರಬಹುದು ತನುಜರಾಗಲಿಬಹುದು। ಮನೆ ಮನೆ ತಿರುಗಿ ಮಾತನೆ ಪೇಳಲಿಬಹುದು। ಜನರ ವಂಚಿಸಿ ಭೋಜನ ಮಾಡಲಿಬಹುದು। ಗಣನೆ ಇಲ್ಲದೆ ಹೊನ್ನು ಹಣ ಕೊಡಲಿಬಹುದು। ವನ ತೀರ್ಥ ಯಾತ್ರೆಯನು ಚರಿಸಲುಬಹುದು। ದಿನ ದಿನಕೆ ಹಿಂದಣ ಮುಂದಿನ ವಾರ್ತಿ। ಜನರಿಗೆ ಪೇಳಿಲೋಚನ ಮುಚ್ಚಲಿಬಹುದು। ಮುನಿಯಾಗಿ ಕುಳಿತು ಒಣಗಿದ ಎಲೆ ಬಹು। ತೃಣಮೆದ್ದು ತಪವನೆ ಮಾಡಲಿಬಹುದು। ಕುಣಿ ಕುಣಿದು ಗಾಯನವನ್ನೆ ಮಾಡಿ। ಮನಬಂದಂತೆ ಆನನ ತಿರುಗಲಿಬಹುದು। ಇನಿತು ದೊರಿಯಬಹುದು ಅನುಮಾನವಿದಕ್ಕಿಲ್ಲ। ಮನ ನಿರ್ಮಳರಾದ ಜನರ ಚರಣ ಪಾಂಸ। ಜನುಮ ಜನುಮ ಸಾಧನ ಕೈಕೊಡದಲೆ। ಮನುಜಗೆ ದೊರಿಯದು ಕ್ಷಣ ಒಂದಾದರು। ಹನುಮಂತನ ಒಡಿಯ ವಿಜಯ ವಿಠಲರೇಯನ। ನೆನೆಸುವವನ ಚರಿತೆ ಕೊನೆಗಂಡವನಾರು ॥೨॥

## ರೂಪಕತಾಳ

ಸುಜನರ ಪದದಿಂದ ರಜೆ ಏಳೆ ಮ। ನುಜ ಸಿರದಲಿ ಧರಿಸಿ ಭಜನೆಯ ಮಾಡೆ ವಿ। ರಜನಾಗಿ ಪೋಗಿ ದಿವಿಜ ಲೋಕದಲಿ ತನ್ನ। ಸ್ವಜನಸಹಿತ ವಿಬುಧ ಕುಜದ ತಂಪಿನಲಿ। ನಿಜ ಅನುಭವ ಸುಖ ವ್ರಜದಲ್ಲಿ ಇದ್ದು ಸ। ಹಜ ಮಾರ್ಗದಲಿ ಪೋಗಿ ಅಜನ ಪಟ್ಟಣ ಸೇರಿ। ಕುಜದಲ್ಲಿ ಹರಿಪಾದಾಂಬುಜವ ಪೂಜಿಸುತಲಿ। ಅಜನಂತೆ ಪೊಳೆದು ವಿರಜೆಯಲ್ಲಿ ಮುಣಗುವ। ರಜ ತಮೊಗುಣ ಗೆದ್ದು ರುಜುಗಣ ವಂದಿತ। ವಿಜಯ ವಿಠಲರೇಯ ತ್ರಿಜಗದೊಳಗೆ ಸು। ದ್ವಿಜರ ಪಾಲಿಸುತ ಇಪ್ಪಾ ॥೩॥

## ಧ್ರುವತಾಳ

ಚಕ್ರವರ್ತಿಯಾದವನ ಭಾಗ್ಯವೆ ಭಾಗ್ಯವಲ್ಲ। ಶಕ್ರ ಲೋಕದಲ್ಲಿದ್ದರೂ ಭಾಗ್ಯ ಭಾಗ್ಯವಲ್ಲ। ವಕ್ರವಲ್ಲದವಂಗೆ ಅಜ್ಞಾನ ನಾಶವಿಲ್ಲಾ। ಶುಕ್ರ ಶಿಷ್ಯರ

ಬುದ್ಧಿಯಿಂದಲಿ ನಡೆದು ಹೀ। ನ ಕ್ರಮದಲ್ಲಿ ಬಾಳಿ ಬದುಕುವನು।
ಅಕ್ರೂರರಾದ ಹರಿದಾಸರ ಪಾದ ಧೂಳಿ। ಸುಕೃತವಾದರು ಮಸ್ತಕದಲ್ಲಿ
ಧರಿಸಿ ಸುಕೃತ ಪಡೆಯದಿದ್ದವಗೆ ಇದೆ ನಿಜ। ಈ ಕೃತಿ ಪೊಸದಲ್ಲ ಮುನ್ನಿನ
ಪಿರಿಯರು। ಸುಕೃಪೆಯಿಂದಲಿ ಸರ್ವದಾ ಪೇಳಿಪ್ಪರು। ಚಕ್ರಧರನು ತಾನೆ
ವಿಪ್ರರ ಮನ್ನಿಸಿಪ್ಪಾ। ವಿಕ್ರಮದಿಂದಲಿ ನಡದವಗೆ ಸುಖವಿಲ್ಲಾ। ನಕ್ರಭಂಜನ
ಸಿರಿ ವಿಜಯ ವಿಠಲನ್ನಪಾದ ಕ್ರಾಂತನಾದವನ ಪೊಂದು ನಿರುತ
ಪೊಂದು ॥೪॥

## ತ್ರಿವಿಡಿತಾಳ

ವಾಸುದೇವನ ನಿಜ ದಾಸನ್ನ ಮನ್ನಿಸದೆ। ದ್ವೇಷ ಮಾಡಿದವನ
ಕ್ಲೇಶಕ್ಕೆ ಕಡೆ ಇಲ್ಲ। ದೇಶದೊಳಗೆ ಇದನೆ ಎಚ್ಚತ್ತು ನಡೆದರೆ। ಏಸೇಸು
ಜನ್ಮಕ್ಕೆಯಳ್ಳಿನಿತು ಕೇಡಿಲ್ಲ। ಲೇಸಾಗಿ ತಿಳಿವದು ಸಿದ್ಧಾಂತ ಬಲ್ಲವರು।
ಸೂಸುವ ಭವಾಂಬುಧಿ ನಿಮಿಷ ಮಾತ್ರದಲ್ಲಿ ಜ। ಯಸಬೇಕಾದರೆ ಬಹು
ಪ್ರಯಾಸವಿಲ್ಲಾ। ಸಾಸಿರ ಬಗೆಯಿಂದ ಸುಲಭ ಮಾರ್ಗವ ಕೇಳಿ। ಭೂಸುರ
ಪಾದದಲಿ ನಿಷ್ಠೆಯಲ್ಲಿ ಮಂದ। ಹಾಸನಾಗಿದ್ದು ಭಕುತಿಯನು ತೊರಿಯದೆ।
ತೋಷವ ತಾಳಿದವಗೆ ಘನಕಠಿಣತಾರಕ। ಭೂಷಣ ಅವಗದೆ
ಅನ್ಯೋಪಾಯವಿಲ್ಲ। ಪಾಶವೆ ಪರಿಹಾರ ನಾನಾ ಜನುಮದ ರೋಗ।
ರಾಸಿಗಳೊಡೊವು ನಿಶ್ಚಿತಾರ್ಥವ ತಿಳಿ। ವಾಸವನ್ನ ವಜ್ರದೇವ ಮೊಗನ
ಶಕ್ತಿ। ರೋಷ ಯಮದಂಡ ಮನುಜರೂಢನ ಕುಂತಾ। ಪಾಶಿಯ ಆಯುಧ
ಭೂತವಾತನ ಗದಾ। ಈಶ ಸಖನ ಖಡ್ಗ ಭೂತೇಶನ ಶೂಲಾ। ಆ ಸಮಸ್ತ
ದೇವತೆಗಳ ಆಯುಧ। ಏಸೇಸು ಬಗೆಯಿಂದ ನಿರೋಧವಾದಡೆ।
ಭೂಸುರನಂಘ್ರಿಯ ರೇಣು ಧರಿಸಿದ ಮಾ। ನೀಸನು ಶಂಕೀಸ ಶಂಕೀಸ
ಎಂದಿಗೂ। ದೋಷ ಅವಗಿಲ್ಲ ಅವರ ಪೊಂದಿ ಇದ್ದ। ದಾಸನಾಗಲಿಬೇಕು
ಪವನ ಮತದೊಳಿದ್ದು। ಈ ಸೌಭಾಗ್ಯವನ್ನು ದೊರಕಿದವನ ಪುಣ್ಯ। ಕಾಶಿ
ಮಿಕ್ಕಾದ ಯಾತ್ರೆ ತೀರ್ಥಗಿಂದಧಿಕ। ಶೇಷಶಯನ ನಮ್ಮ ವಿಜಯ
ವಿಠಲರೇಯನ। ದಾಸನಾದವನ ಸೇವಿಯ ಮಾಡಿದವ ಬಲು ಧನ್ಯಾ ॥೫॥

## ಅಟ್ಟತಾಳ

ಮಂತ್ರ ತಂತ್ರಗಳಿದ್ದಡಂ ಕಾಂತಾರದಲಿ ಪೋಗಿ ಸೇರಿದಡಂ। ಗ್ರಂಥಗಳೆಲ್ಲ ನೋಡಿದಡಂ ಚಿಂತನೆ ಮಾಡಿ ವಲಿಸಿದಡಂ। ಕಂತುವಿನ ಬಾಣ ಗೆಲಿ ದಡಂ ಸಂತತ ವೈರಾಗ್ಯನೆಗಹಿದಡಂ। ಭ್ರಾಂತಿ ಇಲ್ಲದ ವಾದ ಮಾಡಿದಡಂ ತಂತಿಯ ಮೀಟಿ ಪಾಡಿದಡಂ। ಮಂತ್ರಿಯಾಗಿ ಯುಕ್ತಿ ಕೇಳಿ ಪೇಳಿದಡಂ ಪಂಥವಿಡಿದು ಯಾತ್ರಿಯ ಪೋದಡಂ। ದಂತಪತನವಾಗಿ ಬಾಳಿದಡಂ ಶಾಂತನಾಗಿ ತಾನು ಚರಿಸಿದಡಂ। ಹೊಂತಕಾರಿಯಾಗಿ ಇದ್ದಡಂ ಎಂತೆಂತು ಕರ್ಮದನಾದಡಂ। ಇಂತು ಬಗೆ ನಡಕೊಂಡಡಂ ಸಂತೋಷವಾಗದು ಪ್ರಾಣ ಪುರುಷರಿಗೆ। ಸಂತರ ಪದ ನೋಡಿ ಕೊಂಡಾಡದನಕ ಮುಂತಿದ್ದ ಮುಕ್ತಿ ಕಾಣಿಸದು। ಕುಂತಿಸುತಗೆ ವನ ಪಟ್ಟಣವಾಯಿತು ಎಂದು ಪೇಳಲಿ ಬ್ರಾಹ್ಮರ ಪೌರುಷ। ದಂತಿ ವಾಹನ ವಿಪ್ರರ ಉಲ್ಲಂಘಿಸಿ ಸಂತಾಪವನುಬಟ್ಟು ಸ್ವರ್ಗ ಬಿಟ್ಟು। ಚಿಂತಾಮಣಿ ನಮ್ಮ ವಿಜಯ ವಿಠಲನ್ನ ಚಿಂತಿಸುವನ ಪಾದ ಚಿಂತಿಸೆ ಪರಮಾಯು ॥೬॥

## ಆದಿತಾಳ

ಬರುವನದಿ ತಡೆವರು ಸರನಿಧಿಯ ಬತ್ತರಿಸುವರು। ಪುರುಷನ ಗರ್ಭವ ತಗಿವರು ಉರುವ ಮಾರಿಯ ನಿಲಿಪರು। ಅರಸನಿಗೆ ವಿಪ್ರತ್ವ ಕೊಡುವರು ವಿರಚಿಸುವರು ಪ್ರತಿ ಸೃಷ್ಟಿಯ। ಪುರುಷನ ಮಾಳ್ಪರು ಪೆಣ್ಣಿನಾ ಸುರರ ಕೋತಿಯ ಮಾಳ್ಪರು। ನರಕ ಹಾಳುಮಾಡುವರು ದುರಿತ ರಾಸಿಯ ಸುಡುವರು। ಉರಗ ಸಿಂಹಾಸನ ಸಹಿತ ಸುರಪನ ಎಳೆತರಸಲಿಲ್ಲವೆ। ಸರಿ ಎನಬಹುದೆ ಸದ್ಬ್ರಹ್ಮರ (ಸದ್‌ಬ್ರಾಹ್ಮರ) ಪರಮ ವಿನೋದ ಲೀಲೆಗೆ। ಆರೆರೆ ಒಮ್ಮೆ ಒಮ್ಮಿಗಾದರು ಹರಿಯು ಲೆಕ್ಕಿಸಲಿಪ್ಪರು। ಮರಳೆ ನೋಡಿ ಹರಿಯಲೆಕ್ಕಿಸಲಿಪ್ಪರು। ಮರಳೆ ನೋಡಿ ಹರಿಪಾರ್ಶ್ವರ ಎರಡೊಂದು ಜನ್ಮಗಳ। ಅರಸುನಹುಷ ದಶರಥ ಪಾಂಡವ ಪರಿ ಪರಿರಾಯರ ನೋಡಿರೊ। ಧರಣಿಯೊಳಗೆ ಉಸರಲೇನು ಅರುವದು ಧಾರುಣಿ ಸುರರ।

ಕರುಣವ ಪಡೆದು ಕೃತಾರ್ಥರಾಗಿರೊ। ದುರುಳತನವನ್ನು ಮರೆದು ಹರಣವ ಪೇಕ್ಷೆ ಮಾಡರು। ಧರಿಯೊಳು ನಿಸ್ಪ್ರಹರೆನಿಸುವರು। ನರರು ಈ ಬಗೆ ತಿಳಿದು ಇವರ ಚರಣರೇಣು ಧರಿಸಿರೊ। ಭರದಿಂದಲಿ ಬಂದ ವಿಪತ್ತು ಪರಿಹರವಾಗಿ ಪೋಗುವದು। ಪರಮ ಸೌಖ್ಯವೆಂದೆಂದಿಗೆ ಪರಮ ವೈಷ್ಣವನಾಗಿ ಬಾಳುವ। ಸರುವೋತ್ತಮ ವಿಜಯ ವಿಠಲ ವಿರುಕತಿ ಜ್ಞಾನ ಭಕುತಿ ಕೊಡುವಾ ॥೭॥

**ಜತೆ**

ವಿಪ್ರರರ ಪದ ಧೂಳಿ ಧರಿಸಿದ ಸುಜನಕ್ಕೆ ।
ಕ್ಷಿಪ್ರಾರಾರೋಗ್ಯಮಸ್ತು ವಿಜಯ ವಿಠಲ ವೊಲಿವಾ ॥೮॥

❖ ❖ ❖

## ಸುಳಾದಿ-೮೪

ಹರಿಭಕ್ತರ ಕವನಗಳ ನಿಂದಾವರ್ಜನ, ಪೂರ್ವಕ ಹರಿಭಕ್ತರಲ್ಲಿ ಭಕ್ತಿ ಮಾಡುವಿಕೆ ಹರಿಭಕ್ತರಿಗೆಂದಿಗೂ ಕೇಡಿಲ್ಲ.

**ರಾಗ- ಭೈರವಿ ಧ್ರುವತಾಳ**

ಪುಣ್ಯ ಪುರುಷರೆಲ್ಲ ಪರಮ ಸಂತೋಷದಲ್ಲಿ। ಮನ್ನು ಮಿಕ್ಕಾದನಡತಿ ದೂರ ಮಾಡಿ। ಸನ್ಯಾಯದಲ್ಲಿ ಕೇಳಿ ಸತತ ಹಸ್ತವ ಮುಗಿವೆ। ಧನ್ಯನ ಮಾಡುವದು ನಿತ್ಯದಲ್ಲಿ ಕಾ। ರುಣ್ಯದಳತೆಯಲ್ಲಿ ಕಡಿಯುವ ನೆನ್ನದಿರೀ। ಶೂನ್ಯವಾದಿ ಮಾಯಾಮತದವನಲ್ಲ। ಅನ್ಯಥ ಪರರಿಗೆ ಚಾಲವರಿಯೇ। ದೈನ್ಯಪಾತ್ರಾ ಬಡುವೆ ಸುಜನರಿಗೇ। ಕಣ್ಣೆವೆ ಹಾಕುವಷ್ಟು ಕಠಿಣ ಉತ್ತರ ಸೌ। ಜನ್ಯರಿಗೆ ಸಲ್ಲ ತಿಳಿದು ನೋಡಿ। ಗಣ್ಯವೆ ಆದ್ಯರು ನಾರಾಯಣ ಯೋಗಿ ಸನ್ಯಾಸಿ ವ್ಯಾಸಮುನಿ ವಾದಿರಾಜಾ।

ಅನ್ಯೋನ್ಯವಾಗಿ ಕವನ ಪೇಳಿದರು ಅ। ನನ್ಯ ಭಕುತಿಯಿಂದ ಕ್ಷೀರವನಧಿ। ಕನ್ಯಾಪತಿಯ ಮನದಣಿಯ ಪಾಡಿ ಕೊಂಡಾಡಿ। ನ್ಯೂನವಾಗದಂತೆ ಅರ್ಚಿಸುತ್ತ ಘನ್ನವಾದ ಪದವಿಯಲ್ಲಿ ಸೇರಿದರು। ಮುನ್ನೆ ದಾಸರು ಅವರ ಮಕ್ಕಳ ಸಹವಾಗಿ। ಚಿನುಮಯನ ನಾನಾಬಗೆ ಬಗೆ ಸ್ತುತಿಸಿ ಇಂದ। ಚನ್ನ ಸದ್ಗತಿಗೆ ಐದಿದರು। ಅನಾಥ ಬಂಧು ಸಿರಿವಿಜಯ ವಿಠಲರೇಯನ್ನ। ಬಣ್ಣಿಸುವದಕ್ಕೆ ಆವ ವಿಧವಾದರೇನು ॥೧॥

**ಮಟ್ಟತಾಳ**

ಯತಿ ಪ್ರಾಸುವಡಿ ವಿಷಮ ಅಕ್ಷರಗಳು। ಅತಿಶಯ ಗಣ ಕೂಟ ಛಂದಸ್ಸು ಬಿಂದುನಾದ। ಮತಿ ಗುರು ಲಘುವು ಆದಿ ಅಂತ್ಯವರಣ। ತತು ತತು ಸ್ಥಾನಗಳು ಭೇದಪದಾರ್ಥವೆಲ್ಲ। ಕ್ಷಿತಿಯೊಳವರೆಲ್ಲ ಆವದು ನೋಡಿದರು। ರತಿ-ಪತಿ ಜನಕನ್ನ ಕರುಣ ಕವಚ ತೊಟ್ಟು। ಸತತ ಕಾಮಾದಿಗಳು ಜಯಸಿದರು ನೋಡಾ। ಮಿತಿ ಇಲ್ಲದ ವಿಜಯ ವಿಠ್ಠಲನ್ನ। ನುತಿಸುವ ಜನರಿಗೆ ಮತ್ತಾವದು ಭೀತಿ ॥೨॥

**ರೂಪಕತಾಳ**

ಇಂಥ ಮಹತ್ಮರ ದಿವ್ಯ ಕವನದೊಳಗೆಂತುಂಟೊ ಅಪಶಬ್ದ ಅಪ್ರಯೋಗಂಗಳು। ಕಂತು ಜನರನ್ಯ ಗ್ರಂಥದಲ್ಲಿಗೆ ಮನಸು ಮಾಡುವರೆ। ಎಂತಾಹದೊ ನಮ್ಮ ಮಧ್ವಮತ ಪೊಂದಿದ। ಸಂತರು ವಿಮತಸ್ಥ ಪೇಳಿದದ್ದು। ಚಿಂತಿಗೆ ತಾರರು ಮದಸೊಕ್ಕಿ ತಿರುಗುವ। ದಂತಿ ಎಂದದಿ ಲೋಕಸಂಚರಿಸದೊ। ಇಂತು ಗುಣ ಮಿಕ್ಕಾದ ಬಗೆ ಬಗೆ ಲಕ್ಷಣಾ। ನಂತವಿದ್ದರೆ ಏನು ಲೆಕ್ಕಿಸರೊ। ಚಿಂತಿತ ಫಲದಾಯ ವಿಜಯ ವಿಠ್ಠಲರೇಯನ। ಮಂತ್ರ ಪಠಿಸುವಂಗೆ ಮಾರಿಗಳ ಭಯವೇನೊ ॥೩॥

**ಝುಂಪಿತಾಳ**

ಪ್ರತ್ಯೇಕ ಶೂರರು ಒಬ್ಬರ ಮೊರೆ ಬಿದ್ದು। ವಿತ್ತ ಗಳಿಸಿ ಬಿರಿದು ಪಡಕೊಂಬರೆ। ಎತ್ತಣೆತ್ತಣದೊ ಈ ಮಾತು ಕೇಳಿದರೆ ಸಂ। ಮ್ಮತವಾಗದು

ಕಾಣೊ ಬಲ್ಲವರಿಗೆ। ಉತ್ತಮ ಶ್ಲೋಕನ್ನ ಕಂಡ ನಿಜದಾಸರಿಗೆ। ಹತ್ತು ದಿಕ್ಕಿನ ವಳಗೆ ಎದುರು ಉಂಟೇ। ಮುತ್ತಿಗೆಯೊಳಗೆ ಬಿದ್ದು ಎಣಿಸಿ ಗುಣಿಸದೆ ಸುರಿಗಿ। ಕಿತ್ತಿಕೊಂಡು ಹೋಗಿ ವೈರಿ ಬಲವ। ವತ್ತಿ ಬೆಂಬೊತ್ತಿ ಕಂಡಕಡಿಗೆ ಓಡಿಸಿ। ಮುತ್ತಿನ ತುರಾಯ ಕಾಲಪೆಂಡೆ। ಮತ್ತೆ ಮುಂಡಾಸ ಪಾವಡ ಚಾಮರ ಛತ್ರ ಮೊತ್ತ ಬಿರಿದುಗಳು ಲೆಖ್ಖವಿಲ್ಲದೇ ಪೊತ್ತು। ಪೃಥ್ವಿಯೊಳಗೆ ಚಿಗದಾಡಿ ಹರಿದಾಡಿ। ಹೊತ್ತು ಹೊತ್ತಿಗೆ ಪೂರ್ಣಬೋಧಲಕುಮಿ ಪತಿಯ। ಚಿತ್ತದಲಿ ಇಟ್ಟು ಯತಿವಡಿಗಣಗಳಲಿ ಇದ್ದ। ದೈತ್ಯರನೆಲ್ಲ ಅಳಿಸುವರು ಆಟಕೊಡದೇ। ಉತ್ತಮರು ವಿಕಲ್ಪರಾಗರೆಂಬದು ಸಿದ್ಧ। ಶ್ರುತ್ಯರ್ಥದಲಿ ನಿರುತ ಪೇಳುತಿದುಕೋ। ಕತ್ತಲೆಂಯೊಳಗೆ ನಾಣ್ಯವನು ನೋಡಿಕೊಂಡುವವರು। ಅತ್ಯಂತ ಬೆಳಿಗಿನಲಿ ನೋಡುವದರಿದೆ। ತತ್ತಳಗೊಂಬುವದೇನು ಅವನಾದರು ಹೀನ। ಉತ್ತರವ ನಾಡಿದರೆ ಅಲ್ಲಿ ವಾಸಾ। ತತ್ವ ನಿರ್ಧಾರಕರು ಆದ್ಯರು ಮಿಗಿಲಾದ। ಸೋತ್ತಮರು ಪೇಳಿದ ನಾಮದಲ್ಲಿ। ಅರ್ಥವಾದವ ಮಾಡಿ ಶಂಕಿಸಿದರೆ। ದೇವತೆಗಳು ಮೆಚ್ಚರೊ ಸಂಗಡದಲೇ। ಮೃತ್ಯು ದೇವತೆ ಹಲ್ಲು ಕಟದು ಕೇವಲವನ। ಹತ್ತಿಲೀ ಸುಳಿದು ಮಹಾಕೋಪದಲ್ಲೀ ನಿತ್ಯ ಮುಕ್ತಾಶ್ರಯ ವಿಜಯ ವಿಠಲರೇಯನ। ಭೃತ್ಯರುಗಳ ಲೀಲೆ ಎಣಿಸಿದವನೇ ಮೂರ್ಖ ॥೪॥

### ತ್ರಿವಿಡಿತಾಳ

ಹರಿದಾಸರು ಎಲ್ಲ ಒಂದಾಗಿ ಎನಗೆ। ಹರಿಯನಾಮ ಸ್ಮರಣೆ ಮಾಡಲಿಕ್ಕೆ। ಹಿರಿದಾಗಿ ಒಲಿದು ಮಹಹಿತವೆ ಚಿಂತಿಸಿ ಹೀಗೆ। ಕರುಣಾ ಮಾಡಿದರಯ್ಯಾ ಕರವ ಪಿಡಿದು। ಪರಮ ವಿಶ್ವಾಸದಲಿ ನುಡಿದೆ ಈ ಕವನವು। ಸರಿ ಬಂದರೆ ನೋಡಿ ಒಪ್ಪವದೂ। ಅರೆ ಮರೆ ಬಿಡದಿರೀ ನಾನೆಂಬುದು ತಾಳಿ। ದರೆ ಗತಿ ಇಲ್ಲವೊ ಎಂದೆಂದಿಗೇ। ಪರಮಾತ್ಮನ ಪದವ ಸೇರುವ ಜನರಿಗೆ। ಎರಗೂವದು ಮನಕೆ ಹರುಷ ವರುಷಾ। ಸುರಗಂಗೆ ಯಾತ್ರಿಗೆ ಪೋಗುವಾಗಲಿ ಮನುಜ। ಭರದಿಂದ ಮಾರ್ಗವ

ತಪ್ಪೆ ಲೋಕಾ। ಮರುಳಾಡಿದರೇನು ಆವಗೆ ಯಾತ್ರೆ ಫಲ। ಬರುತ್ತದೊ ಇಲ್ಲೊ ಜಾಣರು ಪೇಳಿರೋ। ಹರಿಯನಾಮ ಸ್ಮರಣೆ ಪೇಳುವಾಗಲಿ ಒಂದು। ಚರಣ ಛಂದಸ್ಸು ಯತಿ ಪ್ರಾಸುಭಂಗ। ಕೊರತೆಯಾದರೇನು ಇದರಿಂದಲಿ ಎನಗೆ। ದುರಿತ ಬಂದಟ್ಟದು ಹರಿಯೇ ಬಲ್ಲಾ। ಆರ ಸಂದೇಶ ಅನ್ಯಸ್ತ್ರೀಯರ ವರಣನೆ। ಪರಿ ಪರಿ ವಿಧದಿಂದ ವರ್ಣಿಪಂಗೆ। ಅರಸೂವ ನಾನಾ ಪುಸ್ತಕ ಪ್ರಮಾಣವ ನೋಡಿ। ಬರದುಕಾಸಾವಿಸಿ ಬಟ್ಟು ಬಟ್ಟೂ। ತರುವಾಯ ಕಾವ್ಯವ ರಚಿಸಿ ಸಂಶಯ। ಹಿರಿದಾಗಿ ಬಡುತಿಪ್ಪ ದಿನ ಪ್ರತಿದಿನ। ನರಗುರಿಗ ನಾನು ಎನ್ನ ಎತ್ನವಲ್ಲಾ ಗುರುಗಳ ದಯವೆಂತೊ ಅವರಿಗರ ಹೋ। ಧರಿಯ ಮಾನವ ನೀನು ಮಾಣದೆಂದರೆ ಬಿಡದು। ಬರಿದೆ ಪೋಗದು। ಹರಿಯ ಸಂಕಲ್ಪವು। ತರಣಿಯ ಕಿರಣಗಳು ಧರೆಯಲ್ಲ ಹರಹಿರೆ। ನರನೊಬ್ಬ ನೋಡಿ ಬಲವಂತನೆಂದು। ಕರತಳ ಗಗನಕ್ಕೆ ಎತ್ತಿದರೆ ರವಿಗೆ। ಮರೆಯಾಗಿ ಕತ್ತಲೆ ಮುಸುಕುವದೇ। ನಿರುತ ಅಸ್ಥಿಯ ಕಟವ ಪಶುವೀಗೆ ಕೆನೆಪಾಲು। ತರಿಸಿಕೊಟ್ಟರೆ ಕುಡಿದು ತಲೆ ತೂಗೋದೆ। ವರಮೂರುತಿ ನಮ್ಮ ವಿಜಯ ವಿಠಲರೇಯನ। ಚರಣ ಸೇವಕನಾಗಿ ಬಾಳದಿದ್ದವ ಹೀನಾ ॥೫॥

### ಅಟ್ಟತಾಳ

ಛಾಡವ ಪೇಳಿ ಉತ್ತಮರನ್ನ ಬಳಲಿಸಿ। ನಾಡೊಳು ಸ್ವಾಮಿ ದ್ರೈವ ದ್ರೋಹತನದಲ್ಲಿ। ಆಡಬಾರದ ಮಾತುಗಳೆಲ್ಲ ಸರ್ವದಾ। ಜೋಡಿಸಿ ನುಡಿವುತ್ತ ಅನ್ನ ಉಳವರಿಗೆ। ಕೇಡು ಬಗದು ತಾನೆ ವಿವೇಕನೆಂದೆಂಬೊ। ಖೋಡಿಯ ಕರದು ಮನ್ನಿಸಿ ಅಪರಾಬುದ್ಧಿ। ಬೇಡವೆಂದರೆ ಎತ್ತ ಪೋಪದು ಸ್ವಭಾವ। ನೋಡು ಎನಗ ಇಂಥ ಛಟ (ಚಟ) ಹಿಡಿದ ಮೇಲೆ। ಬೇಡವೆಂದರೆ ಎತ್ತ ಪೋಪದು ಸ್ವಭಾವ। ಹಾಡಿ ಪಾಡೀಕೊಂಡು ಉದರಂ ಭರಣಕಿದೇ ಮಾಡಿಕೊಳ್ಳಲಿಲ್ಲ ಮನೋನಿಯಾಮಕ ಬಲ್ಲ। ಈಡು ಇಲ್ಲದ ದೈವ ವಿಜಯ ವಿಠ್ಠಲನ್ನ। ಮೂಢ ಮಂದ ಜ್ಞಾನಿ ನೆನದರೆ ಫಲವಿಲ್ಲಾ ॥೬॥

### ಆದಿತಾಳ

ಹರುವ ಹೊಳೆಯ ನೋಡಿ ದುರಳನು ಸೈರಿಸದಲೆ। ತ್ವರಿತದಿಂದಲಿ ಪೋಗಿ ಬೆರಳಿಟ್ಟು ಮಧ್ಯದಲ್ಲಿ। ಭರದಿ ಪೋಗುವ ಹರಿಯು ತಿರುಹುವೆನೆಂದು ಏ। ಸ್ತರ ಸಹಸವ ಮಾಡೆ ತರಹರಿಸಲಾಪನೆ। ಪರಮ ವೇಗವು ನಿಂದಿರಗೊಡಬಲ್ಲದೆ। ಕೆರಳಿಚಿಕೊಂಡು ತೀವ್ರದಲಿ ವೈದುಮಹ। ಧರೆಯೊಳಗೆ ವಿಪರೀತ ಮಾಡದೆ ಬಿಡದು। ಹರಿಕಥಾಮೃತವನ್ನು ಸುರಿದ ಶುದ್ಧಾತ್ಮನು। ಜರಮರಣ ರಹಿತನಾಗಿ ಸುರರೊಳು ಬಾಳುವ। ಹರಿ ನಿರ್ದೋಷನು ಕಾಣೊ ಹರಿಭಕ್ತರು ನಿರ್ದೋಷ। ಕರರೆಂದು ವರ ಕಲ್ಪಾಂತರದಲ್ಲಿ ಪೇಳುತಿವೆ। ಪರಲೋಕ ಸಾಧನಗಳು ಚರಿಸುವ ಚತುರರಿಗೆ। ನರಕ ಬಾಧೆಗಳಿಲ್ಲ ವಿಷವಾಕ್ಯ ತಟ್ಟದೊ। ನಿರುಪಮ ನಿರ್ಗುಣ ವಿಜಯ ವಿಠ್ಠಲನ್ನಂಘ್ರಿ ಸ್ಮರಿಸೆ ಮಾತ್ರಕೆ ಚಿರವಕ್ಕು ವೈಕುಂಠಾ ॥೭॥

### ಜತೆ

ಜಾರ ಪತಿಗೆ ಪುಟ್ಟದವನು ಶಂಕಿಸುವನು ।
ಶ್ರೀರಮಣ ವಿಜಯ ವಿಠ್ಠಲನ ಭಕ್ತಗೆ ಮೆಚ್ಚು ॥೮॥



## ಸುಳಾದಿ-೬೫

ಹರಿಯ ಭಕುತಿ ವಿಷಯ, ತತ್ ಸಾಧನ ಮಾರ್ಗ.

### ರಾಗ-ಭೈರವಿ ಧ್ರುವತಾಳ

ಹರಿದಾಸರೊಡನಾಡು ಹರಿಯಂಘ್ರಿ ಯುಗ್ಮನೋಡು। ಹರಿಯೆಂದು ಕೊಂಡಾಡು ಹರಿನಾಮ ಹಾಡಿ ಪಾಡು। ಹರಿ ಪ್ರಸಾದವೆ ಬೇಡು ಹರಿ ಸೇವಿಯನ್ನು ಮಾಡು। ಹರಿಗೆ ಕರವ ನೀಡು ಹರಿಯ ಬಿಡದೆ ಕಾಡು।

ಹರಿಯ ಪೊಗಳಿ ಪಾಡು ಹರಿಗೆ ಮನಸು ಕೊಡು। ಹರಿಗೊಪ್ಪಿಸು ಈ ಬೀಡು ಹರಿ ದ್ವೇಷಿಗಳ ಬಿಡು। ಹರಿಧ್ಯಾನದಲ್ಲಿ ಕೂಡು ಹರಿಕರುಣದ ಜೋಡು। ಹರಿಯದಂತೆ ತೊಡು ಹರಿನಗರಿಗೆ ಓಡು। ಹರಿಯಲ್ಲಿ ರತಿ ಇಡು ಹರಿ ವಿಜಯ ವಿಠಲನ್ನ। ಹರಿ ಎಂದರೆ ಈ ನಾಡು ಹರುಷಬಡುವದು ನೋಡು ಹರಿದು ಪೋಗದೆ ಕೇಡು ॥೧॥

### ಮಟ್ಟತಾಳ

ಹರಿಯ ಭಕುತಿ ಹರಿ ಬಲ್ಲವನೆಲ್ಲಿ। ಹರಿತಾ ಹತ್ತರೊಳಗೆ ಹರಿ ಹರಿದಾಡುವ। ಹರಿವಂತನು ಕಾಣೊ ಹರಿದಿಕ್ಕುವ ಭವದ ಹರಿಯೊಳಗಿಂದಲಿ ಹರಿದೆದ್ದು ಬಪ್ಪಾ ಹರಿಗಂಡವನೆನ್ನು। ಹರಿವದನ ನಮ್ಮ ವಿಜಯ ವಿಠಲನರ। ಹರಿನಾಮವೆ ಪರಿಹರಿಸುವದು ನರಕಾ ॥೨॥

### ತ್ರಿವಿಡಿತಾಳ

ಹರಿಯ ನಂಬಿರೊ ಜನರು ವೈರಾಗ್ಯಪರರಾಗಿ। ಹರಿದು ಪೋಗದೆ ನಿತ್ಯ ಪರರ ಒಡವಿಗೆ। ಹರಿ ಹನುಮಂತ ಒಂದೇ ಎಂದು ತಿಳಿದೂ। ಹರಿ ಇದ್ದಲ್ಲಿ ಪವಮಾನ। ಇಪ್ಪನೆಂದೂ। ಹರಿಯ ಭಜಿಸಿ ಪವಮಾನನ್ನೆ ತೊರದರೆ। ಹರಿಪುರವಾಗದು ಶತ ಕಲ್ಪಕ್ಕೂ। ಹರಿಶರಣರ ಬಳಿವಿಡಿದು ಭಕುತಿಯಲ್ಲಿ। ಹರಿ ಶ್ರವಣವ ಕೇಳು ಶ್ರವಣದಲ್ಲಿ। ಹರಿತ ವಂದಿತ ನಮ್ಮ ವಿಜಯ ವಿಠಲರೇಯ। ಹರಿ ಎಂದು ನುಡಿದರೆ ಹರಿದು ಬಪ್ಪದು ಕಾಣೊ ॥೩॥

### ಅಟ್ಟತಾಳ

ಹರಿಯ ಭಕುತಿ ಕಂಡವರಿಗೆ ದೊರಕುವದೆ। ಹರಿದೇರಿ ಪರ್ವತಾಗ್ರದಿಂದ ಭೂಮಿಗೆ। ಹರಿಯ ಬಿದ್ದರೆ ಇಲ್ಲ ಸುತ್ತುವ ಸುಳಿಯೊಳು। ಹರಿದು ಮುಣಿಗಿ ಪೋಗಿ ಎದ್ದು ಬಂದರೆ ಇಲ್ಲ। ಹರಿಯರೊಳಗೆ ನಿತ್ಯ

ಹಗಲಿರುಳು ತಲೆ। ಹರಿ ಮಾಡಿಕೊಂಡು ನಭಕೆ ಪಾರಿದರಿಲ್ಲಾ। ಹರಿ ಭಕುತಿ ಕಂಡವರಿಗೆ ಸೂರೆ। ಹರಿ ಭಕುತಿ ಸಂಪಾದನೆ ಗಂಟ। ಹರಿಣಾಂಕ ಕುಲಪಾಲ ವಿಜಯ ವಿಠಲನಂಘ್ರಿ। ಹರಿಯ ಬಲ್ಲವನಿಗೆ ಸುಲಭ ಸಾಧ್ಯವೆನ್ನಿ ॥೪॥

### ಆದಿತಾಳ

ಹರಿಯೆ ಪರಮ ಪುರುಷ ಹರಿಪರಾತ್ಪರ ದೇವ। ಹರಿ ಚತುರ ನಾಶರಹಿತ ಹರಿ ಅಚಿಂತ್ಯಾದ್ಭುತ। ಹರಿ ಅಪ್ರಾಕೃತ ಕಾಯಾ ಹರಿ ಪ್ರಳಯ ವಿರಹಿತ। ಹರಿ ಮುಕ್ತಾಶ್ರಯ ಹರಿ ಸರ್ವಾಂತರ್ಯಾಮಿ। ಹರಿ ಜೀವ ಜಡಕೆ ಭೇದ ಹರಿ ಅಣುಮಹಾರೂಪ। ಹರಿ ಕರ್ತಾ ಜಗತ್ಕಾರಣ ಹರಿ ರಮಾದಯ ಪ್ರೀಯ। ಹರಿವೈಕುಂಠ ರಮಣ ವಿಜಯ ವಿಠಲರೇಯ। ಹರಿ ತೋರುವನು ಭಕುತಿ ಕೈಕೊಂಡ ಮನುಜರಿಗೆ ॥೫॥

### ಜತೆ

ಭಕುತಿಗೆ ಕೇಡಿಲ್ಲಾ ಅನಂತ ಕಲ್ಪಕ್ಕೆ ।
ಭಕುತಿಯ ಪಡಿಯರೋ ವಿಜಯ ವಿಠಲನಲ್ಲಿ ॥೬॥



## ಸುಳಾದಿ-೮೩

ಜ್ಞಾನ ಭಕ್ತಿಪರ, ಹರಿದಾಸ್ಯತ್ವ ಲಕ್ಷಣ ತತ್ಸಾಧನ ವಿವರ

### ರಾಗ-ಕಾಂಬೋದಿ ಧ್ರುವತಾಳ

ಮನವೆ ಲಾಲಿಸಿ ಕೇಳು ಬಿನ್ನೈಸುವೆನೊ ನಿನಗೆ। ಚಿನುಮಯ ಮೂರ್ತಿಯ ಗುಣನಾಮ ಕೀ। ರ್ತನೆ ಮಾಳ್ಪ ಬಗೆಯು ನಿನಗೆ ತಿಳಿಪುವೇನೋ। ಘನವಾದ ಸುಸಾಧನವೆಂದು ತಿಳಿದು

ತ್ರಿಕರ್ಣಪೂರ್ವಕವಾಗಿ। ಘನಮಹಿಮ ನಾರಾಯಣನ ಅಚಿಂತ್ಯಾದ್ಭುತ ಶಕ್ತಿ। ಅನುಭವಕೆ ತಂದುಕೊಂಡು ಸುಖಿಸುವದೂ। ಮನವೆ ಮೊದಲಾದ ಸರ್ವ ಇಂದ್ರಿಯಂಗಳ। ವನ ಪಾದದಲ್ಲಿ ಇಟ್ಟು ಕೀರ್ತನೆ ಗೈಯೊ। ನಿನಗಿದೆ ಮುಖ್ಯವಾದ ಗತಿ ಎಂದು ಸಾರಿದೇ। ಅನುಮಾನ ಮಾಡಸಲ್ಲ ಎಂದೆಂದಿಗೇ। ಬಿನಗು ದೈವಂಗಳ ಕಾಲಿಲೊದದು ಮಧ್ವ ಮುನಿ ಮತದಲ್ಲಿ ದೀಕ್ಷಬದ್ಧನಾಗೋ। ಕುನರರ ನೆರಹಿಕೊಂಡು ಕುಚೇಷ್ಟೆ ಕಥೆಯ ಪೇಳಿ। ಘನ ಅಂಧಂತಮಸಿನೊಳು ಬೀಳದಿರೂ। ವನಜ ಭವಾಂಡದೊಳು ಹರಿದಾಸತ್ವ ದೀಕ್ಷ ಬಲು ಕಷ್ಟ ಕಾಣೊ। ಮನುಜಾಧಮರಿಗಿದು ಸುಲಭವಲ್ಲಾ। ಇನಿತು ತಿಳಿ ಇದರೊಳು ತ್ರಿವಿಧ ಬಗೆ ಉಂಟು। ಗುಣವಂತನಾಗಿ ಕಾಲಕ್ರಮಣ ಮಾಡು। ಅನುದಿನದಲ್ಲಿ ಹರಿಸೇವಿಗೆ ವಿಮುಖನಾಗದೆ। ಮನಮುಟ್ಟಿ ಒಬ್ಬನೆ ಏಕಾಂತದಲ್ಲಿ ಕುಳಿತು। ತನು ರೋಮಾಂಚನೆ ಉಬ್ಬಿ ಆನಂದ ಬಾಷ್ಪಗಳಿಂದ। ಗಾನವನ್ನೆ ಮಾಡು ಘನಜ್ಞಾನ ಪುಟ್ಟವದು। ಅನಿಮಿಷೇಶನ ಪ್ರೀತಿ ದಿನ-ದಿನಕೆ ವೆಗ್ಗಳವಾಗುವದು। ನಿನಗಿದೇ ಸಿದ್ಧ ಪೇಳಿದೆ ಶುದ್ಧ ಸತ್ವದ ಸ್ವಭಾವವನ್ನು। ಮನಸಿಗೆ ತಂದುಕೊಂಡು ಜ್ಞಾನಿಯಾಗೋ। ಗುಣಗಣಾಂಬುಧಿ ನಮ್ಮ ವಿಜಯ ವಿಠ್ಠಲನು। ಅನುಸಾರಿಯಾಗಿ ತಾನು ಹಿಂದೆ ತಿರುಗುತಿಪ್ಪ ॥೧॥

### ಮಟ್ಟತಾಳ

ಉದಯ ಕಾಲದಲೆದ್ದು ಮುದದಿಂದಲಿ ಹರಿಯ ನಾಮ। ಒದಗಿ ಅರತನಾಗಿ ವದನದಿ ಕೊಂಡಾಡಿ। ವಿಧಿಪೂರ್ವಕದಿಂದ ಸ್ನಾನಾದಿ ಕರ್ಮ ಮುಗಿಸಿ। ಬುಧರಲ್ಲಿಗೆ ಪೋಗಿ ಕಥಾಶ್ರವಣವ ಮಾಡಿ। ಅದರ ತರುವಾಯ ಉದರಗೋಸುಗ ಪೋಗಿ। ಸಾಧುಗಳ ಮನೆಯಲ್ಲಿ ಶುದ್ಧ ವೃತ್ತಿಯ ಮಾಡಿ। ಇದ್ದನಿತದರೊಳು ಸಾಕ್ಷಿ ಭೂತದಿಂದ। ಮೆದ್ದು ಸತಿ-ಸುತರೊಡನೆ ಮಮತೆ ರಹಿತನಾಗಿ। ಇದ್ದು ಸತ್ಕಾಲವನ್ನು ಕಳೆಯಬೇಕು ಮನುಜ। ಪದ್ಧತಿ ತಪ್ಪದಂತೆ ಈ ಧರೆಯೊಳು ಹಿಗಿದ್ದವನವನೆ ನಿಜ ದಾಸ ಕಾಣಿರೊ।

ಮುದ್ದು ಮೋಹನರಂಗ ವಿಜಯ ವಿಠಲಗೆ। ಮುದ್ದಾಗುವ ನವನೆ ನಿಜ ದಾಸನು ಕಾಣಿರೋ ॥೨॥

**ತ್ರಿವಿಡಿತಾಳ**

ಯಾಮ ರಾತ್ರಿಯೊಳಗೆ ಸತ್ಕರ್ಮದ। ನೇಮವನು ಮುಗಿಸಿ ನಿತ್ಯ ಭಕುತಿಯಿಂದ। ಶ್ರೀ ಮುಕುಂದಗೆ ಅರ್ಪಣೆ ಮಾಡಿ। ವಾಮಭಾಗದಿ ತನ್ನ ಸತಿಯಿಂದ ಒಡಗೂಡಿ। ಶ್ರೀ ಮನೋಹರನ ತುತಿಸಿಕೊಳ್ಳುತ। ಯಾಮ ಎರಡರಲ್ಲಿ ನಿದ್ರೆ ಕಳೆದು ಈ ಪರಿಯಲಿ। ಕಾಮುಕನಾಗಲು ಹರಿ ಒಲಿವಾ। ಕಾಮಿನಿಯಳ ಬಿಟ್ಟು ಪ್ರಥಕಶಯ್ಯನಾಗೆ। ಭೂಮಿಯೊಳಗೆ ಅವನೇ ಪಾಮರನೋ। ಯಾಮ ಮೀರಿ ಸತ್ಕರ್ಮ ಮಾಡಿದ ಪುಣ್ಯ। ಆ ಮಹಾ ದೈತ್ಯರು ಶಳಕೊಂಬೊರು। ಶ್ರೀರಮಣ ದಿನದಲ್ಲಿ ಮಾತ್ರ ಅವರ। ಸ್ವಾಮಿತ್ವ ನಡೆಯುದಿಲ್ಲವು ಕೇಳಿರೋ। ಭೂಮಿಜ ಪತಿ ತನ್ನ ಚಕ್ರವ ತಿರುಗಿಸುವ। ಕಾಮುಕ ದೈತ್ಯರ ಅಳಿಯುದಕ್ಕೆ। ಪಾಮರ ಮನುಜರು ದಾಸ ವೇಷವು ಧರಿಸಿ। ನೇಮ ನಿತ್ಯಗಳೆಲ್ಲ ಪೋಗಾಡಿಸಿ। ಕಾಮಚಾರಿಗಳಾಗಿ ಕಂಡಲ್ಲಿ ತಿರುಗಿ ಹಂಬಲಿಸಿ। ಉಮಾ ಮನೋಹರನ ಲೀಲೆ ಪೇಳಿದರೇನು। ತಾಮಸ ದಾಸನೆಂದು ತಿಳಿಯೊ ಘೋರ। ತಮಸ್ಸುವಾಗುವದವಗೆ ಸಂದೇಹವಿಲ್ಲವೊ। ಈ ಮಹಿಯೊಳು ಮೃಷ್ಟಾನ್ನ ಭೋಜನ ವಸನ ಇ। ರೆ ಮಹಫಲವೆಂದು ಹಿಗ್ಗಿ ಕೆಟ್ಟು ಪೋಗುವನೊ। ಕಾಮಿತಪ್ರದ ದೇವ ಇಂಥದೆ ಅವನಿಗೇ। ನೇಮಿಸಿ ಇಪ್ಪನು ಗಡಾ ಅವನ ಯೋಗ್ಯತೆದಂತೆ। ಸ್ವಾಮಿ ತನ್ನ ನಿಜ ದಾಸರೆಂಬವರಿಗೆ। ನಾಮ ಸುಧೆಯನುಣಿಸಿ ಸಲಹುತಿಪ್ಪ। ಈ ಮಹಾ ಭಾಗ್ಯಕ್ಕೆ ಎಣೆಗಾಣೆ ಎಣೆಗಾಣೆ। ಭ್ರಾಮಕನಾಗಿ ನೀ ಕೆಡಬೇಡವೋ। ಕಾಮ ಜನಕ ನಮ್ಮ ವಿಜಯ ವಿಠಲನ ಹೃದಯ। ಧಾಮದೊಳಗೆ ಪೂಜೆ ಮಾಡಿ ನಲಿದಾಡುವದು ॥೩॥

### ಅಟ್ಟತಾಳ

ನಿರುಪಾಧಿಕವಾಗಿ ಹರಿ ಸೇವೆ ಮಾಳ್ಪುದಕೆ। ಜ। ನರನ ನಿರಿಕ್ಷಿಸಿಕೊಂಡು ಕುಳ್ಳಿರುವ ಮಾನವನು। ಹರಿದಾಸನವನಲ್ಲ ನರವಾನರ ಕಾಣೊ। ಪರಮ ಭಕುತಿಯಿಂದ ಭರದಿಂದ ಹರಿಸೇವೆ ಮಾಡುತ। ಸುರಿಯಬೇಕು ಸುಖ ತನ್ನೊಳಗೆ ತಾನೆ। ಪರಮಗುಪ್ತನಾಗಿ ಇರಬೇಕು ತನ್ನ ಸ್ವರೂಪ ತೋರಗೊಡದಂತೆ। ದುರುಳ ಜನಕೆ ದುರಾಚಾರಿ ಎಂಬೊ ಹಾಗೆ। ಚರಿಸಬೇಕು ಅವರು ಕೆಟ್ಟು ಪೋಗುವಂತೆ। ನೆರೆ ಜಾಣನಾದವ ಈ ಹರಿದಾಸರ ಚರಣ ರಜವನ್ನು ಧರಿಸುವ ಶಿರದಲ್ಲಿ। ಪರಮ ಯೋಗ್ಯನಾಗಿ ಮುಕುತಿ ಕೈ ಕೊಂಬನು। ವರ ಕಲಿಯುಗದಲ್ಲಿ ಇಂಥವರೆ ದುರ್ಲಭರಯ್ಯಾ। ಕರುಣಾಕರ ರಂಗ ವಿಜಯ ವಿಠಲಗೆ। ಪರಮ ಪ್ರೀಯರಿವರೆ ಹರಿದಾಸರು ಕಾಣೊ ॥೪॥

### ಆದಿತಾಳ

ಒಂದು ಪದವ ಪಾಡುತಲದನು। ಹಿಂದುಗಳೆದು ಮತ್ತೊಂದು ಪಾಡಲು। ನೊಂದುಕೊಂಬೊರೊ ವರ್ಣಾಭಿಮಾನಿಗಳು। ಸಂದೇಹಜ್ಞಾನ ಉಳ್ಳ ಹರಿದಾಸನಿವನು ಕಾಣೊ। ಒಂದೆರಡು ಸ್ಥಳದಿಂದ ತಿರುಗಿ ತಿರುಗಿ ಪುಟ್ಟುವ। ಒಂದು ಬಡುವನು ನಾನಾ ಸೌಖ್ಯಂಗಳು। ಇಂದಿರೇಶನು ಇವಗೆ ಇದೆ ಕ್ಲಪ್ತಿ ಮಾಡಿಪ್ಪ। ಮಂದಮನವೆ ಕೇಳೊ ಮರುಳಾಗಿ ನೀನು ನಾ। ನಂದು ಮಾತುಗಳೆಲ್ಲ ಮನಕೆ ತಾರದೆ ನಮ್ಮ। ಕಂದರ್ಪ ಜನಕಗೆ ದೂರನಾದಿ ಕಂಡ್ಯಾ। ವಂದಿಸಿ ನಿನಗೆ ನಾಬೇಡಿಕೊಂಬೆನು ಮಂದರೋಧನ ಶಿರಿ ವಿಜಯ ವಿಠಲನ। ಪೊಂದಿ ಸಂಸಾರ ಭರದಿಂದ ಮುಕ್ತನಾಗೊ ॥೫॥

### ಜತೆ

ಜ್ಞಾನ ಭಕುತಿ ವೈರಾಗ್ಯ ಭಾಗ್ಯವನು ।
ನೀನು ಪಡಿಯೋ ಮನವೆ ಶ್ರೀನಿಧಿ ವಿಜಯ ವಿಠಲನ ದಯದಿಂದ ॥೬॥



# ಸುಳಾದಿ-೮೭

ಡಂಬಾಚಾರ ತೊರೆದು ಶುದ್ಧ ಮನದಿಂದ ಹರಿಯ ಭಜಿಸುವ ಭಕುತಿಯೇ ಪ್ರಧಾನ, ಭಕುತಿಯಿಲ್ಲದ ವಿನಾ ಮುಕುತಿಯಿಲ್ಲ.

### ರಾಗ- ಭೈರವಿ ಧ್ರುವತಾಳ

ಪಂಗನಾಮವ ಬಡಿದು ತಿದ್ದಿ ಪರಿಪರಿಮುದ್ರೆ। ಅಂಗಕ್ಕೆ ಚಿತ್ರ ಬರೆದಂತೆ ಧರಿಸೀ। ಅಂಗಾರ ಫಣಿಯಲ್ಲಿ ಸಣ್ಣನಾಗಿ ಇಟ್ಟು। ಶೃಂಗಾರಕೇಸೊಂದು ಮಣಿಯ ಮಾಲೆ। ಹಿಂಗದಲೆ ಹಾಕಿ ಹಿತವನೆಂದು ತೋರುತ್ತ। ಕಂಗಳಿಗೆ ಗೋಚರಿಸುವಂತೆ ಸುಳಿದೂ। ಮುಂಗಲಿ ಮುಖವ ತೋರಿ ಅಡಗುವಂದದಲೆಸೋ। ಗಂಗಾಳನೇ ಪರಿಪರಿ ಬೀರಿ ಪರರ। ಬಂಗಾರ ಮೊದಲಾದ ದ್ರವ್ಯಂಗಳನೆಬ್ಬಿಸಿ। ಹಂಗಿನವನಲ್ಲನಿವನೆಂಬೊ ತೆರದೀ। ಗಂಗಾದಿ ತೀರ್ಥಯಾತ್ರೆಗಳ ವ್ಯಾಜ್ಯವ ಮಾಡಿ। ಮಂಗಳ ಪುರುಷನೆಂದು ಅನ್ಯರಿಂದ ತುಂಗತನದಲಿ ಪೊಗಳಿಸಿಕೊಂಡು ನಿರುತ ಬಹಿ। ರಂಗ ಮಿಂಚಾಗಿ ನುಡಿನಡತೆ ತಿಳುಪೀ ಅಂಗಡಿ ಅಧಿಕವಾಗಿ ರಚಿಸಿದರೇನಾಹದೊ। ರಂಗನ ಪಾದದಲ್ಲಿ ನಿಷ್ಠೆ ಅಂತಾ। ರಂಗದಲ್ಲಿ ಭಕ್ತಿಪೂರ್ವಕ ಇಲ್ಲದನಕ। ಸಂಗ ರಹಿತನಾಗ ಭರಣಿಯೊಳಗೆ। ಭಂಗವಲ್ಲದೆ ಅವಗೆ ಮೀಸಲ ಪದವಿ ಇಲ್ಲ। ಡಂಗುರ ಸಾರುತಿದೆ ಶ್ರುತಿಗಳಲ್ಲೀ। ಸಂಗೀತ ಲೋಲ ಶಿರಿ ವಿಜಯ ವಿಠಲರೇಯನ। ಡಿಂಗರಿಗನಾಗದೆ ಸಕಲ ಸೌಖ್ಯ ಬಾರದು ॥೧॥

### ಮಟ್ಟತಾಳ

ಹೇಯದ ಗುಳಿಗೆಯನು ಮಾಡಿ ಭಾಗೀರಥಿ। ತೋಯದ ಮಧ್ಯದಲ್ಲಿ ಹಾಕಿದರೇನು ಅದು। ಛಾಯವಾದರೂ ಸ್ವಲ್ಪ ಪವಿತ್ರಕಾರವೇ। ಶ್ರೀಯರಸ ನಮ್ಮ ವಿಜಯ ವಿಠ್ಠಲ ಶಿರಿ। ರಾಯನ್ನ ಭಕುತಿಯು ಇಲ್ಲದ ಮನುಜನ್ನ ಕಾಯ ಶುಚಿ ಇಲ್ಲ ಸಾಧನ ಮುನ್ನಿಲ್ಲ ॥೨॥

### ತ್ರಿಪುಟತಾಳ

ಧನದಪೇಕ್ಷಿಯು ಬಿಡದೆ ತನ್ನಾಧೀನವಿದ್ದ। ಮನಸು ನಿಲ್ಲಿಸದೆ ನಿಶ್ಚಲವಾಗಿ ನಿತ್ಯ ಸ। ಜ್ಜನರ ಸಮ್ಮತಿ ಬಡಿಸದೆ ಸರ್ವಕಾಲದಲ್ಲಿ ಯೋ। ಚನೆ ಭಕ್ತಿ ಮಾಡದೆ ಬಹಳವಾಗಿ। ಮಣಿ ತುಲಸಿಯ ಮಾಲೆ ಭುಜದಲ್ಲಿ ಮುದ್ರೆಗಳು। ಫಣಿಯಲ್ಲಿ ಪುಂಡ್ರ ದ್ವಾದಶ ನಾಮಗಳು। ಇನಿತು ಧರಿಸಿಕೊಂಡು ಉದಯಾಸ್ತಮಾನದಲಿ। ಮನೆ ಮನೆ ತಿರುಗಿ ಅನ್ಯರು ಮೆಚ್ಚುವ। ಗಣನೆ ಇಲ್ಲದ ಮಾತು ಕರವ ತಿರುಹಿ ಪೇಳಿ। ಎಣೆಗಾಣೆಎನಿಸಿಕೊಂಡರೆ ಏನಯ್ಯಾ। ಪೆಣಕೆ ಶೃಂಗರಿಸಿ ಎಣಿಸಿ ನೋಡೆ ವ್ಯರ್ಥವೆನ್ನು। ವನಧಿಶಯನ ನಮ್ಮ ವಿಜಯ ವಿಠ್ಠಲರೇಯನು। ಅನುದಿನದಲಿ ಭಕ್ತಿ ಇಲ್ಲದೆ ಒಲಿಯಾ ॥೩॥

### ಅಟ್ಟತಾಳ

ವೈರಾಗ್ಯ ಜ್ಞಾನವಿದ್ದರೇನದು ಭಕುತಿ ಇಲ್ಲದನಕಾ, ಅವಗೆ ಭಕುತಿ ಇಲ್ಲದನಕಾ। ವೈರಾಗ್ಯ ಭಕುತಿ ಇದ್ದರೇನು ಜ್ಞಾನವಿಲ್ಲದನಕಾ ಅವಗೆ ಜ್ಞಾನವಿಲ್ಲದನಕಾ। ಸಾರ ಭಕುತಿ ಜ್ಞಾನವಿದ್ದರೇನು ವಿರುಕುತಿ ಇಲ್ಲದನಕಾ ಈ। ಮೂರುಳ್ಳರೇನು ಮುನಿ ಶಿರೋಮಣಿಯಾದ। ಮಾರುತಿ ಮತ ಮೊಂದದನಕಾ। ಚೀರಿ ಹಾರಿ ಕೂಗಿ ಚಾಲವರಿದು, ವಿ। ಹಾರವನ್ನೆ ಮಾಡಿ ವಿಲಕ್ಷಣವನ್ನೆ ತೋರಿ। ಶರೀರ ದಂಡಿಸಿ ನಾನಾಪರಿ। ಪರಿತಾಪ ತಾಪಡಲು ತರಳಿ ಎಲ್ಲದೆ ಎಲ್ಲ। ದಾರಿಯಾಗದು ಕಾಣೊ ವೈಕುಂಠಕ್ಕೆ। ಮಾರಾರಿನುತ ಶಿರಿ ವಿಜಯ ವಿಠ್ಠಲ ಮೊಗ। ತೋರನು ಎಂದೆಂದಿಗೂ ಎಂದಿಗೂ ಸಿದ್ಧ ॥೪॥

### ಆದಿತಾಳ

ಹೃದಯ ಶುದ್ಧಿ ಇಲ್ಲದ ಭಕುತಿ ಗ್ರಾಮದ ಸೂಕರ ಭಕುತಿನೋಡೊ। ಅದು ಯಾತರ ಉಕುತಿ ತಿಳಿಯೊ ಅದು ಯಾತಕೆ

ಬಾತಿ। ಮದುವೆಯ ಮನೆಯೊಳು ಶ್ವಾನ ಕುಳಿತರೆ ಮದುವಣಿಗೆನಿಸುವದೆ। ಪದುಮನಾಭನ ಪಾದ ಪದುಮವನ್ನು। ಪದೋಪದಿಗೆ ವಿಮಲಭಕುತಿಯಲ್ಲಿಟ್ಟು ನೆನೆ। ಯುದವ ದೇಶದ ಮೇಲೆ ಹರಿದಾಸನೆನಿಸಲೇನು। ಪದವಿಗೆ ಸಲ್ಲನು ಭೂತ ಚರಿತೆಯ ತೋ। ರಿದರೇನವ ಮಾತಿನ ದಾಸದಾಸ। ಮೃದು ವೃತ್ತಿಯಲ್ಲಿ ನಡೆದರೇನೊ ಹಣಗಳಿಸುವ ದಾಸದಾಸ। ಉದರಗೋಸುಗ ಅಂತರ ವಂಚನೆ ಸ್ಥಿರವಾಗಿಪ್ಪದಯ್ಯಾ। ಕಂಡರು ಇಲ್ಲದ ಮನೆಯೊಳಗಿದ್ದಂತೆ ಅವನ ಪುಣ್ಯ ವ್ಯರ್ಥ। ತ್ರಿದಶರೊಂದ್ಯ ಶಿರಿ ವಿಜಯ ವಿಠ್ಠಲರೇಯ। ಬದಿಯಲ್ಲಿ ನಿಲ್ಲ ನಿಲ್ಲ ನಿಲ್ಲ ಹುದುಗಿಪ್ಪಾ ॥೫॥

**ಜತೆ**

ಯಲುವಿನ ಹೊರೆ ತಂದು ಬದಿಯೊಳಿಟ್ಟಂತೆ ।
ಒಲಿಯಾ ವಿಜಯ ವಿಠ್ಠಲ ಭಕುತಿ ಮಾಡದನಕಾ ॥೬॥

❖ ❖ ❖

## ಸುಳಾದಿ-೮೮

ಹರಿ ಸ್ವಾತಂತ್ರಾನು ಸಂಧಾನಪೂರ್ವಕ, ಸಾಧನವಾದ ಕಾಲ, ಮಧ್ಯಕಾಲದಿ ಜ್ಞಾನಾರ್ಜನೆ, ಹರಿಗರ್ಪಣೆ

**ರಾಗ- ಭೈರವಿ ಧ್ರುವತಾಳ**

ಗರ್ಭದೊಳಗೆ ಇದ್ದು ಒಂದು ವತ್ಸರ ನಿನಗೆ। ಹಬ್ಬಮಾಡಿಸಿ ಉಣಲಿತ್ತರಾರೊ। ಒಬ್ಬರ ಹಾಗೆ ಹಾಗೆ ಯೋಚಿಸಿ ನೋಡು ಬಲು। ಉಬ್ಬಿ ತಿರುಗದಿರು ಮುಂದೋರದೇ। ಉಬ್ಬಸ ಗೈವರನ್ನುಬ್ಬಸರೊಳಗಿಂದ ತೆಗೆದು। ಊರ್ಭಿಯೊಳಗೆ ಇಟ್ಟು ಪಾಲಿಪನಂತೆ। ನೆಬ್ಬವು ತೆರದಂತೆ ಸಂಸೃತಿ ಕಾಣೆ

ನೀನು। ಗಬ್ಬಿನಲ್ಲಿ ಕೆಟ್ಟು ಪೋಗದಿರೂ। ಅಬ್ಬರದಲ್ಲಿ ನಿನ್ನ ಮಿತಿಕಾಲ ನೋಡಿ ಬಹು। ಆರ್ಭಟದಲ್ಲಿ ಎಳೆದೊಯ್ದಾಗಲು। ಒಬ್ಬರಾದರು ಬಂದು ಬಿಡಿಸಿ ಕೊಂಬುವರಿಲ್ಲ। ಮಬ್ಬಿನಲ್ಲಿ ಇದ್ದು ಮರುಳಾಹರೆ। ಈರ್ಬಗೆ ಕಾರ್ಯದಲ್ಲಿ ನಿನ್ನ ನಿನ್ನವರ ಯತ್ನ। ಅಬ್ಬಿತೇನೊ ನೋಡು ಗುಣಿಸಿ ಎಣಿಸೀ। ಅರ್ಭಕತನ ಹೀಗೆ ಮಧ್ಯಕಾಲವು ಬರಲು। ಲಬ್ಧವಾದುದು ಎನ್ನ ಶೌರ್ಯವೆಂಬೇ। ಹುಬ್ಬಿನ ಮಧ್ಯದಲ್ಲಿದ್ದದ್ದು ಕಾಣೆ ನಿನ್ನ। ಲುಬ್ಧತನವೆ ಬಿಡು ಬಿಂಕವ್ಯಾಕೊ। ಅಬ್ಜಪಾಣಿಯ ಪ್ರೀಯ ವಿಜಯ ವಿಠಲರೇಯ। ತಬ್ಬುಬ್ಬಿಗೊಳಿಸದೆ ಕಾವದು ಮರಿಯದಿರು ॥೧॥

### ಮಟ್ಟತಾಳ

ಹರಿಯಿತ್ತ ಭಾಗ್ಯ ಹರಿಗೆ ಸಮರ್ಪಿಸಿ। ಸುರಲೋಕವ ಮೀರಿ ಪರಮ ಪದವಿಯ ಸೇರಿ। ನಿರಯದೂರರ ಕೂಡ ಹರುಷದಿಂದಲಿ ಇದ್ದು। ಪರಿ ಪರಿ ಸುಖವನ್ನು ಸರಿ ಸರಿ ಬಂದಂತೆ। ಚರಿಸಲೊಲ್ಲದೆ ಇನಿತು ಬರಿದೆ ಬಳಲಿ ತೊಳಲಿ। ನರಕಕ್ಕೆ ಬೀಳುವ ತೆರನು ಮಾಡದಿರೂ। ವರದೊರದು ಮನವೆ ಹಿರಿದು ಪೇಳುವೆ ಕೇಳು। ಗರುವ ದೇವರ ದೇವ ವಿಜಯ ವಿಠ್ಠಲರೇಯನ। ಇರುಳು ಹಗಲು ನೆನೆಸಿ ನೆರೆನಂಬು ನಂಬೂ॥೨॥

### ತ್ರಿವಿಡಿತಾಳ

ಆಡಿ ಅಂತಯಲ್ಲಿ ಇದ್ದಂತೆ ಇದ್ದು ಸಂ। ಪಾದಿಸು ಮಧ್ಯ ಕಾಲದಲಿ ಜ್ಞಾನ। ಸಾಧನದಿಂದಲ್ಲಿ ಹರಿ ಸ್ವತಂತ್ರನೆಂದು। ಭೇದಾರ್ಥದಲಿ ತಿಳಿದು ನಡೆಯಬೇಕು। ವೈದಿಕ ಮಾರ್ಗವನ್ನು ಚನ್ನಾಗಿ ಬಗೆ ಬಗೆ। ಶೋಧಿಸಿ ಸಕಲವು ನಿರ್ಣೈಸಿ। ಓದನಗೋಸುಗ ಚಿಂತೆ ಮಾಡದೆ ನೀನು। ಮೋದದಿಂದಲಿ ಮನವೆ ನಿಂದು ಕಾಮ। ಕ್ರೋಧಾದಿಗಳ ತೊರೆದು ಕೋಮಲ ಮತಿಯಲ್ಲಿ ಮಾಧವನ್ನ ನಂಬು ಏಕಾಂತದಿ। ಬಾಧೆಯ ಬಿಡಿಸುವ ವಿಜಯ ವಿಠ್ಠಲರೇಯ। ಆದಿತ್ಯ ಜನರಿಗೆ ಆತನೆ ಗತಿಯೆನ್ನು॥೩॥

### ಅಟ್ಟತಾಳ

ನಿನ್ನ ಪ್ರಯತ್ನಂಗಳ್ಯಾತಕೆ ಬಾತಿಯಾ। ಬೆನ್ನು ಬಲವಾಗಿ ಹರಿಯದಿದ್ದರೆ ಸರ್ವ। ತನ್ನಿಂದ ತಾನೇವೆ ಪ್ರಾಪ್ತವಾಗುವವು। ನಿನ್ನ ಪ್ರಯತ್ನವು ವ್ಯರ್ಥ ಕಾಣೊ। ಇನ್ನು ಹಿಗ್ಗದಿರು ಹಿತದಿಂದಲಿ ಹರಿ। ತನ್ನವನೆಂದಡೆ ಅತಿಶಯ ನೆನದದ್ದು। ಮುನ್ನೆ ತಿಳಿದು ನೋಡು ಆಯು ಕರ್ಮವಿತ್ತ। ವನ್ನು ವಿದ್ಯ ದಾರಿದ್ರ ಪೂರ್ವಕದಿಂದ। ಚನ್ನ ಹರಿ ಅಂದೆ ನಿರ್ಮಾಣ ಮಾಡಿರೆ। ಕುನ್ನಿಯಂತೆ ಕಂಡ ಕಂಡಲ್ಲಿ ಪೋಗದಿರು। ಉನ್ನತ ಮಹಿಮ ವಿಜಯ ವಿಠ್ಠಲರೇಯ। ಕನ್ನಡಿಯೊಳಗೆ ಇದ್ದಂತೆ ತೋರ್ವನೆಲ್ಲ ॥೪॥

### ಆದಿತಾಳ

ಬಸುರೊಳಗಿದ್ದಾಗ। ಸುಖಬಡಿಸಿದಾತ। ಆಸವು ಸಹಾಸನಾವವನೊ। ಅಸಮ ಸಹಾಸನಾವವನೊ। ವಸುಧೆ ಪಾಲಕ ಹರಿಯಲ್ಲದೆ ರಾ। ಜಿಸುವ ದೈವವು ಇಲ್ಲ ಎನ್ನು। ಘಸಣಿಗೊಳ್ಳದಿರು ದೃಢಚಿತ್ತ ನೀನಾಗಿ। ಬೆಸಸು ಹರಿಯ ಗುಣ ಕಥೆಯ। ಅಸುರ ವೈರಿ ವಿಜಯ ವಿಠಲರೇಯ। ವಶವಾಗಿ ಇಪ್ಪ ಎಲ್ಲಿರಲು ॥೫॥

### ಜತೆ

ಚಿಂತೆ ಮಾಡದಿರು ಚಿತ್ರವಿಚಿತ್ರವು ।
ಕಂತು ಜನಕ ವಿಜಯ ವಿಠ್ಠಲ ಮಾಡಿದನೆನ್ನು ॥೬॥



## ಸುಳಾದಿ-೮೯

ಕರ್ಮಮಾರ್ಗವಾದ ಡಿಂಬದಂಡನೆ ಬಿಟ್ಟು ಜ್ಞಾನಾರ್ಜನೆ ಮಾಡಿ ಹರಿಪಾದ ನೆರೆನಂಬು.

### ರಾಗ – ಶಂಕರಾಭರಣ ಝಂಪೆತಾಳ

ಜಡದೊಳಗೆ ಮುಣುಗಿ ದಟ್ಟಡಿಯಾಗಿ ಮೂಗನು। ಪಿಡಿದು ನಿಡಿಗಲ್ಲಿನಲಿ ವಾಸವಾಗಿ। ಗಿಡ ಲತೆ ಎಲೆ ಮೆದ್ದು ಒಡಲುಸೇದಿ ಬಾಡಿ। ಬಿಡದೆ ತೀರ್ಥಾದಿಗಳು ಸಂಚರಿಸೀ। ಪಿಡಿದು ಉಪವಾಸ ವ್ರತ ಜಪತಪ ಕೃತುಗಳು ಕೊಡುವ ದಾನಗಳು ಬಲು ಮಿತಿ ಇಲ್ಲದೆ। ಅಡಿ ತೊಲಗದಲೇ ಈ ಪರಿ ಮಾಡಲೇನು। ಪೊಡವೇಶ ರಂಗನ ದಯವಿಲ್ಲ ದನಕ। ಕೊಡುವ ಫಲ ಒಂದಿಷ್ಟು ದೇವರಿಲ್ಲದ ಹಾಳ। ಗುಡಿಗೆ ತೋರಣ ಶಿಖರ ರಚಿಸಿದಂತೆ। ಕೊಡಬೇಡ ಕೊಳಬೇಡ ಸುರವಿಜಯ ವಿಠ್ಠಲನ್ನ। ಅಡಿಗಳನು ನಂಬಿ ಪಡಿ ಮುಖನಾಗು ಗತಿಗೆ ॥೧॥

### ಮಟ್ಟತಾಳ

ಕ್ಷೀರ ವಾರಿಧಿಯಾ (ವಾರಿನಿಧಿಯ) ತೀರದಲಿ ಪೋಗಿ। ಸೇರಿದರೆ ತಾನು ಕೋರಿದ ನಿತ್ತುಯೊಕು। ಧಾರುಣಿಯೊಳಗುಳ್ಳ ಊರು ಊರನೆ ತಿರುಗಿ। ಕ್ಷೀರನು ತಂದರೆ ಕ್ಷಿರಾಬ್ಧಿಗೆ ಸರಿಯೆ। ನಾರಾಯಣನೆಂಬ ಮೂರುತಿಯ ಅಂಗೀ। ಕರಸದಲಪಾರ ಮೂರುತಿಗಳ। ನಾರಾಧಿಸಲೇನು ಪಾರಮಾರ್ಥಗಳಿಲ್ಲ। ಶಾರೀರ ಭೃ (ಶೃ) ತು ವಿಜಯ ವಿಠ್ಠಲನ್ನ। ಆರಾದರು ಸಾರೆ ಹಾರೈಸಿದ ಫಲವು ॥೨॥

### ತ್ರಿವಿಡಿತಾಳ

ತತ್ವಜ್ಞಾನ ಇಲ್ಲದೆ ಚಿತ್ತಶುದ್ಧಿಯಾಗದೆ। ಚಿತ್ತಜಪಿತ ಸರುವೋತ್ತ ಮನೆನ್ನದೆ। ಹತ್ತೆಂಟು ಸಾರಿಗೆ ನಾನಾವ್ರತವ ಮಾಡೆ। ಸುತ್ತಿದ ಬಳಿಕ ಎತ್ತಲು

ಪೊಂದದಲೆ ಪೋಗಿ। ಕತ್ತಲೆಯೊಳು ಬಿದ್ದು ಹೊತ್ತುಗಾಣದೆ ಪಾಪ ಮೊತ್ತವನುಂಡು ಯಾತನೆ ಬಡುವರು। ದ್ರಿ (ಧೃ) ತ್ತ ಸನ ನಾಮ ವಿಜಯ ವಿಠಲನಾ ದೂ। ರುತ್ತ ದ್ವೇಷವ ಬಳಲಿಸಿದವಗೆ ಸಿದ್ಧ ॥೩॥

**ಅಟ್ಟತಾಳ**

ಗಾರ್ಧಪದ ಮರಿಯ ತಂದಾವಿನ ಪಾಲಿಟ್ಟು। ನಿರ್ಧರವಾಗಿ ತುರಗವ ಮಾಡುವೆನೆಂದು। ಮೂರ್ಧನ್ಯನಾಗಿ ನಿದ್ರೆಗೆಟ್ಟು ಕಾಯಲು। ಗಿರ್ದವಾದರೂ ತೋರಿ ಕಾಣಿಪೋದೆ। ವರ್ಧಮಾನಗದು ಕೋಟಿ ಯಾಚಿಸಿದರು। ವಾರ್ಧಿಕ ಪುರುಷಗೆ ಪಂಚಾಮೃತವನುಣಿಸಿ। ಸಾರ್ದು ಪ್ರಾಯಾವಸ್ಥಿ ಎನಿಸುವನೇ ನಿ। ನ್ನರ್ಧಮನಸು ಬಿಡು ಜ್ಞಾನದಿಂದಲಿ ವಂಶ। ವರ್ಧನ ನಾಮ ವಿಜಯ ವಿಠಲನ್ನ ನೆನಿಯೆ ಕ್ಷ। ಣಾರ್ಧದೊಳಗೆ ತಡವಿಲ್ಲದೇ ಗತಿ ॥೪॥

**ಆದಿತಾಳ**

'ಭೂತ ಸಂಖೇ ಹಿತರತಾಚ' ಮಾತಿಗಿದೂ ಶ್ರುತಿವಚನ। ಭೂತಳದೊಳಗೆ ಏಕೋವಿಷ್ಣು ಅಜಾತನೆಂದೂ। ನೀತಿಯೆ ವಿಧಾತವಾತ ಭೂತನಾಥ ಸುರವ್ರಾತ। ಜಾತರೆಂದು ತಿಳಿದು ಸಂಖ್ಯಾತ ಮಾಡಿ ಪ್ರತಿದಿನ। ದಾತನೆಂದು ಒಂದು ಪತ್ರವು ಫಲತೋಯ ತಂದು। ಪ್ರೀತಿಯಿಂದರ್ಚಿಸಿ ಜಗನಾಥ ನೀನೆ ಗತಿ ಎನಲು। ಮಾತು ಎಂಬನಿತರೊಳು ಪಾತಕವನ್ನು ಹರಿಸಿ। ಭೂತವಾಸ ವಿಜಯ ವಿಠಲ ಆತುಮದೊಳಗೆ ನಿಲುವ। ಈತನನ್ನು ಬಿಟ್ಟು ನೀವು ನೂತನೂಲು ಕೋತಿಕೈಯ್ಯ। ಯಾತನೆ ಬಟ್ಟಂತೆ ಯಮನ ಯಾತನೀಯ ಬೀಳದಿರೀ ॥೫॥

**ಜತೆ**

ಡಿಂಬಾದಂಡಣೆ ಬಿಟ್ಟು ನಂಬು ನಂಬೆಲವೊ ಕಮ ।
ಲಾಂಬಕ ಸುರೇಶ ವಿಜಯ ವಿಠ್ಠಲನ್ನ ॥೬॥



## ಸುಳಾದಿ-೯೦

ಭಕುತಿ ಎಂಬ ಕೊಡಲೆಯಿಂದ ಸಂಸಾರ ವೃಕ್ಷವನ್ನು ಛೇದಿಸಿ ಹರಿ ಪಾದಾವಲಂಬನೆ.

### ರಾಗ- ಕಲ್ಯಾಣಿ ಧ್ರುವತಾಳ

ಹಾರೈಸಿದಿನೆ ನಿನ್ನ ಹಾರಾ ಮಾಡಿದ ಮನೋ। ಹಾರಿಗಳ ಸಂಗ ವ್ಯವಹಾರ ತೊರದು। ಹಾರಿ ಹಾರುವ ಮನಾಹಾರವಾಗಿ ಎನ್ನ। ಹಾರದೊಳಗಿರಲಿ ಅಘಹಾರಿ ಎಂದು। ಹಾರಿ ಹಾರಿ ಮಾಡಿ ಹರುಷದಿಂದಲಿ ನಿತ್ಯ। ಹಾರವಾಗಲಿ ಎನಗೆ ಯಂಜಲನ್ನಾ। ಹಾರೈಸುವೆ ನಾಮ ಬ್ಯಾಹಾರಿಗನು ಎನಿಸಿ ಮೋ। ಹಾರ ಪಾಪಗಳು ಪರಿಹಾರ ಮಾಡಿ। ವೀರ ಬಾಹ್ವರ್ವಿದಾರಣ ವಿಜಯ ವಿಠಲ। ಹಾರುವರ ಪ್ರೀಯಾ ಮಹರಮಣ ಜೀಯಾ ॥೧॥

### ಮಟ್ಟತಾಳ

ತೈಲಧಾರಿ ಬಿಂದು ಜಲದೊಳು ಬಿದ್ದಂತೆ। ನೆಲೆಯಾಗಲಿ ಚಿತ್ತದೊಳಗೆ ನಿನ್ನಯ ಭಕುತಿ। ಗಳ ದಾಸ್ಯಕೆಗಳುಬ್ಬಿ ದಳ ದಳ ಬಾಪ್ಪೋದ। ಕಳಿಯಲಿ ಪದಯುಗಳ ನೆನೆದು। ಪುಳಕೋತ್ಸದಲ್ಲಿ ನಲಿ ನಲಿದೊಲಿದು। ತಲೆದೂಗುತಲಿ ತೊದಲ ನುಡಿಗಳಿಂದ। ಜಲಜಾಕ್ಷಾಗ್ರಣಿ ವಿಜಯ ವಿಠಲರೇಯ। ನಿಲವಾಗಲಿ ನಿನ್ನಲಿ ಎನ್ನ ಮನಸು ॥೨॥

### ತ್ರಿವಿಡಿತಾಳ

ಬಹುಕಾಲದಲಿ ನಿನ್ನರ್ಚಿಸುವ ಕಿಂಕರರಿಗೆ। ಬಹು ವೇಗ ಸದ್ಗತಿ ನೀವೆನೆಂಬ। ಅಹುದೊ ದಾತಾರನೆ ಅವರು ಎನ್ನನು ನೋಡೆ। ಸಹಸಿಗರು ನೂರಾರು ಮಡಿವೆಗ್ಗಳ। ಮಹಪದವೀಗಾವರರು ತರುಕಾಣೋ। ಪಾಹಿನಾ ನಧಿಕಾದ ಯೋಗ್ಯನಲ್ಲಾ। ರೋಹಿತಾ ವಿಜಯ ವಿಠಲ ಕೇಳು ಸೂಚಿಕ। ಟಾಹ ನ್ಯಾಯವಲ್ಲವೇನೋ ಭಕ್ತರಲ್ಲಿ ॥೩॥

**ಅಟ್ಟತಾಳ**

ಪಕ್ಕ ಪುಟ್ಟದ ಮರಿ ಸಿಕ್ಕಿ ವರಲಿದಂತೆ। ಸೊಕ್ಕಿದಾನೆ ಕಮಲಕ್ಕೆ ಲಂಘಿಸುವಂತೆ। ಲಕ್ಕವ ತಂದಗ್ನಿ ಮುಖದಲ್ಲಿ ಇಟ್ಟಂತೆ। ಉಕ್ಕುವ ಹೊಳೆಯೊಳು ಪೊಕ್ಕು ಮುಣಗಿದಂತೆ। ಕಕ್ಕುಲಾತಿಯಿಂದ ಕಕ್ಕಸಘದೊಳು। ಕಿಕ್ಕಿರದಲಿ ನಾನಕ್ಕಟ ಭ್ರಮೆಯಾದೆ। ಚಕ್ರಗದಾಧರ ವಿಜಯ ವಿಠಲ ಗುಟು। ಕ್ಕಿಕ್ಕಿಸಲುಹೋವ ನಿನ್ನ ಪಕ್ಕದೊಳಿರಿಸಿ ॥೪॥

**ಆದಿತಾಳ**

ನಿನ್ನಧೀನದಲ್ಲಿ ಸರ್ವವನ್ನು ತ್ಯಾಗ ಮಾಡಿ। ಅನಿಮಿಷದ ಜಾಗರವನ್ನು ಮಾಳ್ಪಸಿದ್ಧರೊಡನೆ। ಎನ್ನನೀಟ ಪಾಂಗದಿಂದ ಮನ್ನಿಪದು ಮಾರನಯ್ಯ। ಕಣ್ಣಿಗೆವೆ ಕಾಯದ ತೆರದಿ ಸನ್ನುಮಾನದಲ್ಲಿ ಕಾಯೊ। ಎನ್ನೊಡಿಯ ಸಾಮಾವರ್ತ ವಿಜಯ ವಿಠಲರೇಯಾ। ಅನ್ಯಥಾ ವನ್ಯರ ನಂಬೆ ಎನ್ನಪೇಕ್ಷೆ ತೀರಿಸಯ್ಯಾ ॥೫॥

**ಜತೆ**

ಕೊಡಲೆ ಭಕುತಿ ಮಾಡಿ ಸಂಸಾರವೆಂಬೊ ವೃಕ್ಷ<br>
ಕಡಿದು ಕೆಡಿಸುವದು ಶತ ವಿಜಯ ವಿಠಲಾ ॥೬॥



## ಸುಳಾದಿ-೯೧

ಸ್ವರೂಪ ಸ್ಥಿತರಾದ ನಾನಾ ಜೀವರಲ್ಲಿ, ಶ್ರೀಹರಿಯ ದ್ವಿವಿಧರೂಪ ಚಿಂತಿಸಿ, ಶ್ರೀಹರಿಯನ್ನು ಪೂಜಿಸು

**ರಾಗ - ಭೈರವಿ ಧ್ರುವತಾಳ**

ಕರಿ ತುರಗ ವೃಷಭ ಗೋವು ನೆಗಳಿ ಮಹಿಷಿ ಮೇಷ। ಹರಿಣ ಮಯೂರ ಶ್ವಾನ ಮೂಷಕ ಹಂಸ। ಹರಿ ಶಾಖಾಮೃಗ ಗರುಡ ಉರಗ

ನಾನಾ ಮೃಗಾದಿ। ಇರುತಿಪ್ಪವು ಕೇಳಿ ಸ್ವರೂಪಾದಿ। ಸುರರು ಮಿಕ್ಕಾದವರು ಜೀವರಾಶಿಗಳುಂಟು। ಅರಿತು ನುಡಿಯಬೇಕು ಸತತದಲ್ಲಿ। ಹರಿರೂಪ ದ್ವಿವಿಧ ತಿಳಿ ಆರಾಧನೆ ಮಾಡು। ಎರಡೊಂದು ಬಗೆಯಲ್ಲಿ ಒಲಿದೊಲಿದು। ತಾರತಮ್ಯ ಭೇದ ಜ್ಞಾನದಿಂದ ಸ್ವಧರ್ಮಾ। ಚರಣೆ ತೊರೆಯದೆ ತವಕದಿಂದ ಯೋಚಿಸುವದು। ಪರಮ ಪುರುಷ ನಮ್ಮ ವಿಜಯ ವಿಠಲರೇಯ। ಪರಿಪರಿ ವಿಧದಿಂದ ಅರ್ಚನೆಗೊಂಬಾ ॥೧॥

### ಮಟ್ಟತಾಳ

ಆರಾರ ಆಹಾರ ನೈವೇದ್ಯವೆ ಎನ್ನು। ಆರಾರ ವಿಹಾರ ಕ್ರಿಯಾಲಕ್ಷಣವೆನ್ನು। ಆರಾರು ನುಡಿವ ಮಾತುಗಳೆ ಮಂತ್ರಗಳೆನ್ನು। ಆರಾರ ಆಹಾರ ನೈವೇದ್ಯವೆ ಎನ್ನು। ಆರಾರ ರೂಪಗಳು ಪ್ರತೀಕವೆ ಎನ್ನು। ಆರಾರ ಸ್ವಭಾವ ಹರಿಯಾಧಿನವೆನ್ನು। ಆರಾರು ಆರಾರು ಆವಾವ ಜನುಮದಲ್ಲಿ। ಆರಾಧನೆ ಮಾಡಿದ್ದು ಸಮರ್ಪಣ್ಯಗೈಯೆ। ಮಾರ ಜನಕ ನಮ್ಮ ವಿಜಯ ವಿಠಲರೇಯ। ತೋರುವ ತನ್ನಯ ಪಾರಮೂರ್ತಿ ಸೊಬಗು ॥೨॥

### ತ್ರಿವಿಡಿತಾಳ

ನಿನ್ನ ಕಣ್ಣಿಂದಲೆ ನೋಡಿದೆ ನೋಡಿದೆ। ನಿನ್ನ ಕರಣದಿಂದ ಕೇಳಿದೆ ಕೇಳಿದೆ। ನಿನ್ನ ನಾಲಿಗೆಯಿಂದ ಪಾಡಿದೆ ಪಾಡಿದೆ। ನಿನ್ನ ನಾಶಿಕದಲ್ಲಿ ನಿರ್ಮಾಲ್ಯಘ್ರಾಣಿಸಿದೆ। ನಿನ್ನ ಪ್ರಾಣದಲ್ಲಿ ತರ್ಕೈಸಿ ತರ್ಕೈಸಿದೆ। ನಿನ್ನ ಹಸ್ತದಲ್ಲಿ ಪಿಡಿದೆಪಿಡಿದೆ ನಿತ್ಯ। ನಿನ್ನ ಚರಣದಲ್ಲಿ ಯಾತ್ರೆಯಚರಿಸಿದೆ। ನಿನ್ನ ವದನದಲ್ಲಿ ಪ್ರಸಾದಸವಿಸವಿದೆ ನಿನ್ನಾರಾಧನೆಗೆ ಶುಚಿಯಾದೆಶುಚಿಯಾದೆ। ನಿನ್ನ ಭಜಿಪದ್ಕೆ ಅನುಕೂಲ ನಾನಾದೆ। ನಿನ್ನವನೊ ನಿನ್ನವನೊ ಎನುತಧೇನಿಸಿ ಪಾ। ವನ್ನನಾಗಲೆಬೇಕು ನೋಡಿದಲ್ಲಿ। ಭಿನ್ನ ತಿಳಿದು ಹರಿಯ ವಿಚಿತ್ರ ಶಕ್ತಿಗೆ। ಸನ್ನುತಿಸಿ ಸಾಕಲ್ಯ ತಿಳಿಯದಿದಕೊ। ಅಣೋರಣಿ ರೂಪ ವಿಜಯ ವಿಠ್ಠಲ। ಅನುಗುಣ್ಯನುಕಾಣೊ ನಮಗೆಲ್ಲ ಎನಲಿಬೇಕು ॥೩॥

### ಅಟ್ಟತಾಳ

ನದಿ ಜಲಧಿಕವಾಗಿ ಬಂದ ಬಂದತೇವೆ। ನದಿಯೊಳಗಿದ್ದ ತೆಗ್ಗುಮಿಟ್ಟ ಪಾಷಾಣ। ಹುದಗಿ ಪೋಗಲು ಸಂಪೂರ್ಣ ಪ್ರವಾಹದಿ। ಅದರೊಳಗೇನೇನು ಇದ್ದವಿದ್ದವೆಲ್ಲ। ಬದಿಯಲ್ಲಿ ನಿಂದರು ಕಾಣಿಸದಿಪ್ಪವು। ಇದರಂತೆ ಮನದಲ್ಲಿ ವಾಸುದೇವನ ಪಾದ। ಪದುಮ ಭಕುತಿಯಿಂದ ಧೇನಿಸಲು ಸ್ವರೂ। ಪ ಜ್ಞಾನ ನಿರಂತರ ವೆಗ್ಗಳವಾಗ ಲಿಂ। ಗದಲಿಂದ ಬಂದಿಪ್ಪಜ್ಞಾನ ಅಡಗುವದು। ಮುದದಿಂದ ಮಾನವ ಈ ಪರಿ ಇದ್ದರೆ। ಪದೊಪದಿಗೆ ಸಂಸಾರದಲ್ಲಿ ಇರನ್ಯಾಕೆ। ನದಿ ಪ್ರವಾಹದಂತೆ ನಿಜ ಜ್ಞಾನ ಪ್ರಕಾಶ। ಅಧಿಕವಾಗುವದಯ್ಯ ಲೇಶ ಕಡಿಮೆ ಉಂಟೆ। ವಿಧಿಪಿತ ವಿಜಯ ವಿಠ್ಠಲರೇಯನ ದಿವ್ಯ ಪಾದದ ಮಹಿಮೆಯನ್ನು ಪೊಗಳಿದವನೆ ಧನ್ಯ॥೪॥

### ಆದಿತಾಳ

ನಾನಾ ಜಂಗಮ ಸ್ಥಾವರ ದೇಶಕಾಲದಲ್ಲಿ। ನಾನಾ ಪ್ರಕಾರದಿಂದ ವ್ಯಾಪಾರ ಭೇದಂಗಳ। ನಾನಾಲೋಚನೆಯ ಮಾಡೊ ನಾರಾಯಣ ಭಗವಂತ। ನಾನಾತ್ವ ನಿಪ್ಪನೆಂದು ಎನ್ನಿ ವೈಷಮ್ಯದಿಂದ। ನಾನಾವತಾರ ಹರಿ ಸಕಲಾಧಿಷ್ಠಾನದಲ್ಲಿ। ನಾನಾ ಗುಣದಿಂದ ಪರಿಪೂರ್ಣಲಕುಮಿ ರಮಣ। ನಾನಾ ಪ್ರಯೋಜನ ಮಾಡುವ ಬಹಿರಂತರ। ನಾನಾ ಗುಣದಿಂದ ವೃತ್ತಿ ಮಾರ್ಗವೆ ರಚಿಸಿ। ನಾನು ಎಂಬೋದು ತೊರದು ಅಸ್ವತಂತ್ರನಾಗ್ವದೆ। ನಾನಾ ನಂದವೆ ಉಂಟು ಜ್ಞಾನವೆ ಪರಮ ಮುಖ್ಯ। ನಾನಾ ಲೋಕೇಶ ಹರಿ ವಿಜಯ ವಿಠಲರೇಯಾ। ನಾನೆ ನಿನ್ನವನೆನಲು ವಿಷಯದಲ್ಲಿ ಪೊಗಸಾ ॥೫॥

### ಜತೆ

ಗುಣಕರ್ಮ ಕಾಲದಲಿ ಪರಿಪೂರ್ಣವಾಗಿಪ್ಪ ।
ಗುಣನಿಧಿ ವಿಜಯ ವಿಠ್ಠಲನ ಚಿಂತಿಯ ಗೈಯೊ ॥೬॥



# ಸುಳಾದಿ-೯೨

ಫಲಾಪೇಕ್ಷರಹಿತನಾಗಿ, ಸಕಲ ಕರ್ಮವನ್ನು ಶ್ರೀಹರಿ ಕರ್ತೃತ್ವಾನು ಸಂಧಾನದಿಂದ ಮಾಡಿ ಶ್ರೀಹರಿಚರಣಕ್ಕೆ ಅರ್ಪಿಸು.

**ರಾಗ- ತೋಡಿ ಧ್ರುವತಾಳ**

ಅಪ್ಪಾ ಬಿನ್ನಹ ಕೇಳೊ ಒಪ್ಪಾಚಾರದಿಂದಲಿ। ಒಪ್ಪಿ ನಿನಗೆ ನಾನಾ ಪ್ರಕಾರದಿಂದ ನಾನರ್ಪಿಸಿದ ಫಲವ। ಕಪ್ಪು ಕಲುಷವಿರೆ ತಪ್ಪುದು ನಿನಗ ಜನಪ್ಪನೆ ಕೈಕೊಳ್ಳೊ ತಿ। ಮ್ಮಪ್ಪಾ ಎನ್ನ ಮುಪ್ಪುರದೊಳು ನಿನ್ನ। ಗರ್ಪಿಸಿದ ಕರ್ಮ ಸುಫಲವೆ ನಿಜ। ತಿಪ್ಪೆ ಮೇಲೆ ಶರ್ಕರ ತುಪ್ಪ ಉಂಡಂತೆ। ಇಪ್ಪ ದೈವಂಗಳು ಒಪ್ಪದಿಂದಲಿ ಭಜಿಸೆ ಸು। ಕೃಪೆಯಾಗದೆ ಪುಣ್ಯನಿಪ್ಪ ತಾನಾಗೋದು। ಸಪ್ಪಡಿ ಮೆಲುವನ ಉಪ್ಪು ಕೇಳಿದಂತೆ। ಅಪ್ಪುಗೈವ ನಾನಾ ಅಪ್ಪಿಕೊಂಡಂತೆ। ಇಪ್ಪದು ಬರಿದೆ ಫಲ ಹೊಪ್ಪದು ಪುಣ್ಯ ಬಾರದಲೆ। ದರ್ಪದ ನಾಮ ಸಿರಿವಿಜಯ ವಿಠಲ ಕೇಳೊ ॥೧॥

**ಮಟ್ಟತಾಳ**

ಕಡು ನಹುಷನ ಋಷಿಗಳು ಬಿಡದಲಂದಣ ಪೊತ್ತು। ನಡೆಯುತಲಿರೆ ಒಂದು ಅಡಿ ಪಲ್ಲಟವಾಗೆ। ನುಡಿದು ಕೋಪದಲ್ಲಿ ನಡೆ ಎಂದೆನಲವನ। ಒಡಿಯನಾದವ ಮುನಿದು ತೊಡಕಿಕ್ಕಿ ನೋಡೆ। ಮಿಡುಕಿದನಾ ರಾಯನೆ ಮನದಲಿ ಚಿಂತಿಸಿ। ಒಡಿಯ ನಿನ್ನನು ಹೃದಯದೆಡಿ ನಿಂದಿರಿಸಿ। ಅಡಿಗಳ ಧೇನಿಸಲು ಒಡನೆ ಕುಳ್ಳಿರೆ ಒಂದು। ನುಡಿದಪ್ಪಿದರೆನ್ನ ಕಡೆಯಲಿ ನೋಡದಲೆ। ಬಿಡುವದುಚಿತವೇನೊ ಬಿಡ ಸುಖಸ್ತಾ। ಮೃಡ ಸಖಸ್ತವ ಪ್ರೀಯು ವಿಜಯು ವಿಠಲರೇಯು। ಒಡವರಾಧಾರಿ ಎಂದು ಬಿಡದೆ ಭಜಿಸು ಕಂಡ್ಯಾ ॥೨॥

## ತ್ರಿವಿಡಿತಾಳ

ಬಾಲ ವತ್ಸರಾಕಳವೊಲಿಯು ಸವಿದುಂಬಾಗ। ಪಾಲು ಬರಬೇಕೆಂದು ಮೌಳಿಯಿಂದಲಿ ತಾನು। ಮೇಲು ಭಾಗಕೆ ತಿವಿದು ಪಾಲುಗುಡದೆ ಗುಡಿಯ ಬಿಡದೆ। ಆಲಯದಲಿ ನೋಡಿ ಪಾಲಿಸುತಿಪ್ಪದು। ಮೂಲೋಕಕೆ ನೀನು ವಾಲಯ ಸುರಧೇನು। ಆಳುಗಳಲ್ಲೆರು ಬಂದು ಬಾಲರಾರರು ಕಾಣೆ। ಮೇಲಾದರೂ ಒಂದು ಕೀಳಾದರೆ ತಪ್ಪು। ತಾಳಿಕೊಂಡರಲ್ಪರ ಪಾಲಗಕೊಳಬೇಕು ಶ್ರೀ। ಲೋಲಾಮೃತ ವಪುಷ ವಿಜಯ ವಿಠಲ ವಿಭುವೆ। ಬಾಲಾನಿಂದಲಿ ಬಂದ ಜಾಲಾವೆಣಿಸದಿರೊ॥೩॥

## ಅಟ್ಟತಾಳ

ದಿನ ಪ್ರತಿದಿನ ಬಡವನು ಗಳಿಸಿ। ಹಣ ಮನಿಯೊಳಗಿಡದಲೆ। ಜನ ಪತಿಯಲ್ಲಿಡೆ ಮುನಿದು ಚೋರ ಬಂದು। ಮನಿ ಎಲ್ಲ ಶೋಧಿಸೆ ತೃಣ ಒಂದಾದರು ಚೋ। ರನಿಗೆ ದೊರಕುವದೇ। ಕನಸೀಲಿ ಮನಸೀಲಿ ಮಾಡಿದ ಕರ್ಮ ಸಾ। ಧನ ಲೇಸು ಹೊಲ್ಲೆಗಳೇನಾದರಾಗಲಿ। ನಿನಗೆ ಸಮರ್ಪಿಸೆ ಅನುಮಾನವಿಲ್ಲದಲೆ। ಎನಗದು ನಿಕ್ಷೇಪ ನೆನದಾಗಲೀ ದೇವ। ಬಿನಗು ಇಂದ್ರಿಯಗಳೆನ್ನ ಮುನಿದು ಮಾಡುವದೇನೊ। ಮನೆ ಬರಿದಲ್ಲದೆ ಧನವೆಲ್ಲಿಹದಯ್ಯಾ। ಸನಕಾದಿ ಪಾಲಾ ಸತ್ಯವಿಜಯ ವಿಠಲ। ಕ್ಷಣ ಕ್ಷಣಕೆ ಸಮರ್ಪಣೆ ಗೊಳ್ಳೊ ಎನ್ನಿಂದಾ ॥೪॥

## ಆದಿತಾಳ

ಅರ್ಪಿತದೊಳಗೆ ಶ್ರೀಕೃಷ್ಣಾರ್ಪಿತವೆ ನಿಜವೆಂದು। ಬಪ್ಪನೊ ಕಾಳ್ಗಿಚ್ಚು ಹೊಕ್ಕು ಸರ್ಪನ ತುಳುಕುವೆನೊ। ಸರ್ಪತಲ್ಪನ ಭಜಿಸುವ ನಮ್ಮಪ್ಪಗಳಿರಾ ಪೇಳಿರದಕೆ। ಸುಪರ್ದಿ ಬಿರಿದನೆತ್ತಿ ಅಪ್ಪಳಿಸಿ ರನ್ಯವಚನ। ಸರ್ಪಿ ಸಮುದ್ರಕ್ಕೆ ಪೋಗಿ ಹಿಪ್ಪಿಯನ್ನು ಬಾಯಲಿಟ್ಟು। ಚಪ್ಪರೀಸಿನೆ ಮಲಿದಂತೆ ಅರ್ಪಿತವನ್ನ್ಯರಿಗೆ ಕೊಡಲು। ದರ್ಪಹಾ ವಿಜಯ ವಿಠಲಗರ್ಪಿತವೆನಲು ಭವ। ದರ್ಪಗುಂದುವದು। ಸರ್ಪ ಹೆಪ್ಪು ಹಾಕಿದಂತೆ ಸಾಧನ ॥೫॥

**ಜತೆ**

ಮಂತ್ರ ತಂತ್ರಪಾವ ಪರಿಯಲರ್ಚಿಸಿದ ಫಲ ।
ಕಾಂತಾ ಶ್ರೀವಿಜಯ ವಿಠಲಗೆ ಸಮರ್ಪಿಸು ॥೬॥

❖ ❖ ❖

## ಸುಳಾದಿ-೯೩

ನಿಜವಾದ ವೈರಾಗ್ಯ ಕುಜ ಸಂಗ ತ್ಯಜನ, ಸಕಲ ವಸ್ತು ಹರಿಗರ್ಪಣ, ಡಂಬಕತನ ಬಿಡುವಿಕೆ, ಬಾಹಿರ ಪೂಜೆ ಧ್ಯಾನಾದಿಕ್ರಮ. ಅರ್ಚಿಸವ ಬಗೆ.

**ರಾಗ -ಕಾಂಭೋದಿ ಧ್ರುವತಾಳ**

ಭಜಿಸ ಬಲ್ಲೆನೆ ನಿನ್ನ ಬಹು ಬಗೆಯಿಂದ ಎನ್ನ। ಸೃಜಿಸಿದ ಪೂರ್ಣೈಶ್ವರ್ಯ ಅಮಿತ ಶೌರ್ಯಾ। ಅಜ ಹಸ್ತಿ ಚರ್ಮಾಂಬರ ಗಜವಾಹನರಗೀರ್ವಾಣ। ವ್ರಜಗಳಿಗೆ ದೂರತರ ದೂರನೇ। ನಿಜ ಆನಂದ ವೈಭವ ಭಯದೂರ ಸರ್ವ। ಮಜಗಳೊಳಗೆ ಇಪ್ಪ ಪೂರ್ಣಶಕ್ತಾ। ತ್ರಿಜಗ ಮಧ್ಯದಿ ನಿನ್ನ ಅರ್ಚಿಸಿ ಮೆಚ್ಚಿಸುವ। ಸುಜನರ ಕಾಣೆನಯ್ಯಾ ನಿಯಾಮಕಾ। ರಜ ಭಕುತಿ ರಜಜ್ಞಾನ ರಜ ವೈರಾಗ್ಯದ ಮಾರ್ಗ। ಭಜಿಸುವ ಮಾರ್ಗ ತಿಳಿಯೆ ತ್ರಿಗುಣಾತೀತಾ। ಗಜ ಇರುವು ಮಿಕ್ಕ ಜನನದೋಪಾದಿಯಲಿ। ಮನುಜ ದೇಹ ತೆತ್ತು ಸಂಚರಿಸಿದೆನೋ। ರಜೋತಮ ಗುಣದ ವ್ಯಾಪಾರವಪೇಕ್ಷಿಸಿ। ಕುಜನ ಸಂಗತಿಯನ್ನು ಬಯಸುತಿಪ್ಪೆ। ಯಜಮಾನ ನಾನೆಂಬೊ ಗರ್ವದಿಂದಲಿ ಇದ್ದು। ಗಜರಾಜ ವರದನ ಪೂಜೆ ತೊರದೆ। ದ್ವಿಜರಾಜ ಧ್ವಜ ನಮ್ಮ ವಿಜಯ ವಿಠಲರೇಯ। ಭಜನೆ ಮಾಡುವರ ಹೃತ್ಕಮಲವಾಸಾ ॥೧॥

**ಮಟ್ಟತಾಳ**

ಪ್ರಕೃತಿದೆಶೆಯಿಂದ ನಿನ್ನ ಇಚ್ಛೆಯಾಗೆ। ಸಕಲ ಪದಾರ್ಥ ಸರ್ವ ಜಗದೊಳಗೆ। ಅಖಿಳ ಬಗೆಯಿಂದ ತುಂಬಿ ತುಳುಕುತಿವೆ। ಅಕಟನೊ

ನಾನೊಬ್ಬ ಸಮರ್ಪಣೆ ಬಗಿಯಾ। ಸುಖದಿಂದಲಿ ತಿಳಿದು ಈಯ ಬಲ್ಲೆನೆ ದೇವ। ಮುಕುತಿ ಯೋಗ್ಯರು ಯಥಾರ್ಥವೆಂದರಿದು। ಲಕುಮಿ ರಮಣ ನಿನಗೆ ಅರ್ಪಿಸಿ ಅನುದಿನ। ಭಕುತಿಯನು ಮಾಡಿ ನಲಿದಾಡುವರು। ರುಕುಮಿಣಿ ಪತಿರಂಗ ವಿಜಯ ವಿಠಲರೇಯ। ಅಕಳಂಕ ಚರಿತ ಆರಭಾರ ಕರ್ತಾ ॥೨॥

## ತ್ರಿವಿಡಿತಾಳ

ಮಂದಿರವನೆ ರಚಿಸಿ ವೇದಿಕವನೆ ಮಾಡಿ। ಚಂದುಳ್ಳ ಗದ್ದುಗೆ ತತುವು ಪರಿ। ಸುಂದರವಾಗಿದ್ದ ಅಹಿತಾ ಪ್ರತಿಮಿಯ। ತಂದು ಕುಳ್ಳಿರಿಸಿ ಜಯ ಜಯವೆನುತ। ಮುಂದೊರದು ಪೇಳಿ ಅಲ್ಲಿ ವಿಧವ ತಿಳಿದು। ಕುಂದದೆ ಪಂಚಾಮೃತವ ಎರದು। ಚಂದದಿಂದಲಿ ವಾರಿಮಜ್ಜನ ಮಂತ್ರೋಕ್ತ। ಕುಂದಣಾಂಬರ ಭರಣ ಪರಿಪರಿಯೂ। ಗಂಧ ಕುಸುಮ ಧೂಪ ದೀಪ ಎತ್ತುವ ಸೊಬಗು। ಅಂದವಾಗಿದ್ದ ನೈವೇದ್ಯವೆಲ್ಲಾ। ತಂದಿಟ್ಟು ಪಾನೀಯ ಯಾಚಮನ ಪೋಷಣೆ। ಗಂಥ ವಿಳ್ಯವು ಪಾದುಕ ಮಿಕ್ಕಾದ। ಒಂದೂ ಬಿಡದೆ ನಿನಗೆ ಸಮರ್ಪಿಸುವ ಬಗೆ। ಅಂದ ನಾನರಿಯೆನು ವಿಚಾರವ। ಮುಂದೆ ಬಾಹಿರದಾರ್ಚನೆಯ ತಿಳಿಯೆ ಧ್ಯಾನ। ದಿಂದ ಪೂಜಿಪದೆಂತೊ ಹೃದಯದಲ್ಲಿ। ಮಂದಮತಿಗ ನಾನು ಡಂಭಕವನೆ ತೋರಿ। ಮಂದಿಯ ಕಣ್ಣಿಗೆ ನಿರ್ಮಳನೋ। ಎಂದಿಗೆಂದಿಗೆ ಇದೆ ಅಧಮಾಧಮ ಪೂಜೆ। ಎಂದೆನಿಸದಿರು ಹರಿನಿನ್ನ ಪರವ್ಯೆ। ಇಂದಿನ ಜನುಮಕ್ಕೆ ಈ ಪರಿಯಾದರೂ ಮುಂದಿನ ಜನುಮಕ್ಕೆ ಒಲಿದು ನೀನೆ। ಬಂದು ಸೋತ್ತಮವಾದ ಗುರುಗಳ ಮುಖದಿಂದ। ಅಂದು ತಿಳುಹಿ ಕೊಡುವ ಕರುಣಿ ನೀನೇ ವೃಂದಾರಕ ವಂದ್ಯ ವಿಜಯವಿಠಲ ನೀನೆ। ಬಂಧು ಎನಗಿರಲಾಗಿ ಎಲ್ಲ ಸೌಭಾಗ್ಯವಹದು ॥೩॥

### ಅಟ್ಟತಾಳ

ಆವ ಪದಾರ್ಥವೋ ಆವಾವ ರಸಗಳೋ। ಆವಾವ ತಾತ್ವಿಕ ದೇವತೆಗಳುಂಟೋ। ಆವ ಸ್ವಮೂರ್ತಿಯೊ ಆವಾವಗುಣವಧಿಕವಾಗಿಪ್ಪದೋ। ಆವಾವ ಸ್ಥಾನದಲ್ಲಿ ಪುಟ್ಟುವದೋ। ಮತ್ತಾವಾವದಿಂದಲಿ ತಿರುಗಿ ಸೇರುವದು। ಆವಾವ ದೇವರು ಆವದು ಮಾಳ್ಪರು। ಅವನು ಎತ್ತುವ ಆವನು ಭುಂಜಿಪ। ಆವನಿಂದಲಿ ಅವಕಾಶ ಪ್ರದ ಉಂಟು। ಆವಾವ ಭಾಗವೋ ಆವಲ್ಲ ಸೇರೊವೋ। ಆವಾವ ಸ್ಥಾನದಲ್ಲಿ ಆವನಾದರು ಕರ್ತಾ। ಅವನು ನೋಡುವ ಆವನಿಂದಲಿ ಕ್ಷುಧಿ ಜೀವಕ್ಕ ಒದಗೋದು। ಆವನ ಭಯದಿಂದ ಯಾವತ್ತು ಜೀರ್ಣ। ಪಾವನ ಮೂರುತಿ ವಿಜಯ ವಿಠಲರೇಯ। ಈ ವಿಧ ತಿಳಿದು ಕೊಡುವಾವರ್ಪಣೆ ಅರಿಯೆ ॥೪॥

### ಆದಿತಾಳ

ಸೃಷ್ಟಿ ಪ್ರಾರಂಭದಲ್ಲಿ ಸರ್ವ ರಸಂಗಳು। ಸೃಷ್ಟಾ ನಿನ್ನಿಂದಲಿ ನಿರ್ಮಾಣವ ಮಾಡಿದನೆಂದು। ಅಷ್ಟರ ವಳಗೆ ತಾತ್ವಿಕ ದೇವತೆಗಳ। ಇಟ್ಟು ಇಪ್ಪನೆಂದು ಅಲ್ಲಿ ನೀನೆ ವಾಸಾ। ಎಷ್ಟು ಶುಭರಸಾಯನ ಉಳ್ಳ ಪದಾರ್ಥದಲ್ಲಿ। ತುಷ್ಟನಾಹ ಹರಿ ನಿತ್ಯ ತೃಪ್ತನೆಂದು। ಇಷ್ಟೇ ಮಾತುರ ಬಲ್ಲೆ ಇದಕ್ಕಿಂತಧಿಕವರಿಯೆ। ಸ್ಪಷ್ಟವಾಗಿದ್ದ ವೇದ ಮಂತ್ರಬಾರದು। ಪೊಟ್ಟೆಯೊಳಗಿನ ಅನ್ನ ಹರಿಪಚನ ಮಾಡುವ ವಂ। ದಿಷ್ಟು ಬಿಡದೆ ಸರ್ವ ಜೀವರಲ್ಲಿ ಎಂದು। ಅಷ್ಟ ಕರ್ತತ್ವ ದೇವ ವಿಜಯ ವಿಠಲ ಅಂ। ಗುಷ್ಟದಿ ಪೂರ್ಣನೆಂದು ಆವಾಗಾದರು ನೆನಿವೆ ॥೫॥

### ಜತೆ

ಒಂದರಿತರೆ ಒಂದು ತಿಳಿಯೆ ಭಕ್ತವತ್ಸಲ ।
ತಂದೆ ವಿಜಯ ವಿಠಲ ನಿನ್ನವರೊಳಗಿಡು ॥೬॥



## ಸುಳಾದಿ-೯೪

ವೈರಾಗ್ಯ ಲಕ್ಷಣ. ಜನನಾದಿಗಳ ಹೀಯಾಳಿಕೆ. ಬಾಕುಳಿಕತ್ವನೀಗಿ ಮಿತಾಹಾರದಿಂದ ಆಚರಣೆ ಇತ್ಯಾದಿ.

### ರಾಗ – ಭೈರವಿ ಧ್ರುವತಾಳ

ಜನನವ ನೋಡೀಯಾ ಜನನದಲ್ಲಿ ಹುರಳಿಲ್ಲ। ಗಣವನ್ನು ನೋಡೀ ಯಾ ಗಣದಲ್ಲಿ ಹುರಳಿಲ್ಲ। ಗುಣದಲ್ಲಿ ನೋಡೀಯಾ ಗುಣದಲ್ಲಿ ಹುರಳಿಲ್ಲ। ಮನವನು ನೋಡೀಯಾ ಮನದಲ್ಲಿ ಹುರಳಿಲ್ಲ। ತನುವನು ನೋಡೀಯಾ ತನುವಿಲಿ ಹುರಳಿಲ್ಲ। ಜನನ ಗಣ ಗುಣ ಮನ ತನವೆಂಬೊದಿನಿತು। ಗುಣವಾದರೂ ಒಂದನಲಾಗದು ದಿನ। ದಿನ ಪ್ರತಿದಿನ ಶುದ್ಧನು ಎನಿಸಲಿಲ್ಲ। ಧನವಂತನೆಂಬೊ ಪೆಸರು ಬರಿದೆ ಒಂದು ಕಾ। ಸನು ಕಾಣದವನಂತೆ ನಾನುತ್ತಮ ದಾ। ಸನು ಎಂದೆನಿಸುವೆನು ಗುಣವ ನೋಡಲು ಬರಿದೆ। ಅನಿರುದ್ಧ ವಿಜಯ ವಿಠಲ ನಿನ್ನ ಶ್ರವಣ। ಮನನ ಧ್ಯಾನ ಮಾಡದೆ ಮನುಜಾಧಮನಾದೆ ॥೧॥

### ಮಟ್ಟತಾಳ

ಹಸ್ತುಕಕ್ಕರನಾಗಿ ಪ್ರಸ್ತ ಮಾಡುವ ಗೃ ಹಸ್ಥನ ಮನೆಯಲ್ಲಿ ಹೊಸ್ತಲ ಕಾಯ್ದು ಪ। ರಸ್ಥದವನೆಂದು ಮಸ್ತಕವನು ಬಾಗಿ। ಹಸ್ತಗಳ ಮುಗಚಿ ಸ್ವಸ್ತಿಯನ್ನು ಪೇಳಿ। ಆಸ್ತಿ ಎನಿಸಿಕೊಂಡು ಅಸ್ತಂಗತ ಇದ್ದು। ಸ್ವಸ್ತದಲಿ ತಿಂಬೆ ಅಸ್ತಿಹೂಲೊತನಕ। ಸ್ವಸ್ತಿ ದಕ್ಷಣನಾಮ ವಿಜಯ ವಿಠಲರೇಯ। ಹಸ್ತಗಾರಿ ನಿನ್ನೋಪಾಸ್ತಿ ಮಾಡಿದರೆ ಸ। ಮಸ್ತ ಷಡರಸನ್ನ ನಾಸ್ತಿ ಎನಬಲ್ಲ್ಯಾ ॥೨॥

### ರೂಪಕತಾಳ

ಪರರ ನಾಶ್ರೆಯಿಸಿ ಉದರ ಪೊರೆವೆನೆಂಬೊ। ತಿರುಕ ಬಡಿವಾರವ ಒಂದಲ್ಲದೆ। ಭರದಿಂದೆ ರುಚಿ ವಸ್ತ ಕಲಿಸಿ ನಾಲಿಗೆಯಲ್ಲಿ। ಇರಸಲು

ಕೊನೆಯಲ್ಲಿ ತೋರುವದು ಮಗುಳೆ। ಹೊರಗೆ ಉಗಳಲು ಇಲ್ಲ ಒಳಗೆ **ನುಂಗಲು** ಇಲ್ಲ। ಅರಿವದು ರುಚಿ ಇಪ್ಪತೆರನಂಗಳೂ। ಪರರ ಬೇಡದೆ ಶ್ರೀಹರಿ ನಾಮಾಮೃತವನ್ನು। ಸುರಿದರೆ ಒಳಹೊರಗೆ ಇಹ ಪರದಲ್ಲಿ। ಪರಿಪೂರ್ಣವಾಗಿ ಸ್ವಾದವನು ಕೊಡುತಲಿಪ್ಪದು। ಪುರಜತು ನಾಮ ಶಿರಿವಿಜಯ ವಿಠ್ಠಲನ್ನ ನಂಬಿ। ದರದೆ ನಾನಾಕಾದಶ್ಚರಿತಗಳುಂಬೆ ॥೩॥

### ಜಂಪಿತಾಳ

ಡೊಂಕಕಾಷ್ಟವು ಇರೆ ಬೆಂಕಿ ಇಂದಲಿ ಕಾಸಿ। ಡೊಂಕ ತಿದ್ದಲು ಬಲು ಸರಳಾಗೋದೂ। ವೆಂಕಟಾ ಎನ್ನಂಗ ಅಹಂಕಾರ ಲೇಪನದಿ। ಡೊಂಕಾಗೆ ನಿನ್ನ ನಾಮಾಂಕಿತದಲಿ ಕಾಸಿ। ಡೊಂಕ ತಿದ್ದಲಿಬೇಕು ಕೊಂಕಾಗಗೊಡದಂತೆ। ಮುಂಕಟ್ಟು ಸಂಕಟದೋರದೋಪಾದಿಲಿ। ಶಂಖಭೃತೆ ನಾಮ ವಿಜಯ ವಿಠ್ಠಲ ಮೀ। ನಾಂಕ ಜನಕ ಎನ್ನ ಕಳಂಕವ ಹರಿಸೊ ॥೪॥

### ತ್ರಿವಿಡಿತಾಳ

ಪತಿಯಿ ಗತಿ ಎಂದು ಸತತದಲಿ ನಂಬಿ। ಇತರ ಸಂಗತಿಗೆ ಪೋಗದೆ ನುಡಿಸದೆ। ಹಿತದಿಂದ ಪತಿಯನ್ನು ನುತಿಸಿ ನಿಜ। ಪತಿವ್ರತೆಯಾಗಿ ಸಮ್ಮತವಿರಲೂ। ಚತುರನು ನಾರಿಯ ಖತಿಗೊಂಡು ನೂಕಲು। ಪ್ರತಿಮನೆ ಸೇರುವಳೆ ಹತವಾದರೂ। ಪ್ರತಿದೈವವಿಲ್ಲ ನದ್ವಿತಿಯ ನೀನೆಂದು। ನಿಶ್ಚಿತವಾಗಿ ತಿಳಿದು ನಮಿತನಾದೆನೊ। ಕೃತುನಾಮನೆ ವಿಜಯ ವಿಠ್ಠಲದೇವೋತ್ತಮಾ। ಹಿತಮಾಡಿದರೆ ಕೀರುತಿ ನಿನಗೆಲ್ಲೈದೊ ॥೫॥

### ಅಟ್ಟತಾಳ

ಹೆಣ್ಣು ಹೀನನಾಗೆ ತವುರ ಮನೆಯೆ ಗತಿ। ಹೊನ್ನು ಹೀನವಾಗೆ ಪಂಚಾಲನೆ ಗತಿ। ಕಣ್ಣು ಹೀನವಾಗೆ ಕುಳಿತಸ್ಥಳವೆ ಗತಿ। ನಿನ್ನ ಸೇವಕನೀಗ

ನ್ಯೂನ್ಯಗುಣನಾಗೆ। ನಿನ್ನ ಪಾದವೆ ಗತಿ ಪನ್ನಂಗ ಶಯನಾ। ಇನ್ನಾರು ಸೇರುವ ಇನ್ನಾರು ಕೇಳುವ। ಚನ್ನಾಗಿ ತೋರದು ಚನ್ನಿಗರಾಯಾ। ಘನ್ನ ಸಿರಿವಂತ ತನ್ನ ಪಡಿತೊತ್ತಾ। ಅನ್ಯಾರು ಕರಿಯಲು ಕಣ್ಣೆತ್ತಿ ನೋಡರು। ನಿನ್ನ ಭೀತಿಯಿಂದ ಮನ್ನಣೆಗೈವರು। ನಿನ್ನ ಸೇವಕಾಓರರನ್ನ ವಾಲ್ಗೈಸಲು। ನಿನ್ನದೆ ಘನವ್ವೆ ಪ್ರಚ್ಛನ್ನ ಚಿರಕಾಲ। ಪನ್ನಂಗ ಶಾಯಿ ಶ್ರೀವಿಜಯ ವಿಠ್ಠಲರೇಯ। ನಿನ್ನವರ ಕೊಂಕು ನೀನೆ ತಿದ್ದಲಿಬೇಕೊ ॥೬॥



## ಸುಳಾದಿ-೬೫

ಭಗವದ್ಭಕ್ತರ ಭಗನಿಷ್ಟತೆ ಕವನಗಳಿಗೆ ವಿಷವಾಕ್ಯಗಳೆಲ್ಲಿ? ಇಲ್ಲ ದೋಷರಾಶಿಗಳು ಬೆಂದು ಪೋಪವು.

### ರಾಗ- ಭೈರವಿ ಧ್ರುವತಾಳ

ವಿಷವಾಕ್ಯ ಮತ್ತಾವದೊ ಎಲೆ ಮಾನವನೆ ಕೇಳೊ। ವಸುಧಿಯೊಳಗೆ ಪುಟ್ಟ ಮೂಢನಾಗಿ। ಪಶುವಿನಂತೆ ತಿಂದು ಅಶನಾದಿಗಳಲ್ಲಿ ದಿ। ವಸ ಕಳೆದು ಶರೀರವು ವ್ಯರ್ಥ ಮಾಡಿ। ಹಸಿವಿ ನೀರಡಿಕೆಯಿಂದ ಲೋಲುಪನಾಗಿ ಚ। ರಿಸುವನು ಆವಾಗ ಉದರಗೋಸುಗ ಪೋಗಿ। ಪುಶಿಯ ಪೊಗಳಿ ಜನರ ಉಪಕರಿಸಿ ನಾನಾ ಪರಿ। ಬೆಸನೆ ಮಾಡಿ ಸಕಲಾವರಣದಿಂದ। ಕುಶಲವೆ ಚಿಂತಿಸಿ ಸ್ವತಂತ್ರ ಪಚ್ಚಿಕೊಂಡು। ನಸುಗುನ್ನಿಯಂತೆ ನಾನಾ ಸೋಗುಮಾಡಿ। ಹಸನಾದ ಪೆಣ್ಣುಗಳ ಕಚ ಕುಚವನ್ನು ವ। ರ್ನಿಸಿ ನರರ ಸ್ತೋತ್ರವನು ವಿಸ್ತರಿಸಿ। ಅಸಮ ಲೋಕಕೆ ಪೋಪ ಮಾರ್ಗಸಾಧನ ಕೆ। ಡಿಸಿಕೊಂಡು ಬಗೆಬಗೆ ಒಯ್ಯಾರದಿ। ವಿಷಯ ಲಂಟಪನಾಗಿ ವಿಡಂಡಕರ್ಮವ। ನುಸರಿಸಿ ಇದ್ದವಗಾಗೋವು ವಿಷವಾಕ್ಯವೂ। ಉಸರು ವ್ಯರ್ಥ ಬಂಧಿಸಿ

ಯೋಗಾಭ್ಯಾಸವರಿಯದೆ। ಅಸುವು ಪೋಗಾಡಿದಂತೆ ನಿರರ್ಥಕ। ಕಸಕುಪ್ಪೆ ಜೋಕೆ ಮಾಡಿ ಕಣಜಕ್ಕೆ ಹಾಕಿದಂತೆ ರಸಿರಸಾಯನದೊಳು ಮದ್ಯ ಕಲಿಸಿದಂತೆ। ಎಸೆದ ಬಾಣಕ್ಕೆ ತಾನೆ ಗುರಿಯಾಗಿ ನಿಂದ ಮಾ। ನಿಸನಂತೆಯಾಗವದು ಪೇಳಿದ ಕವನ। ಬಿಸರುಹ ನಾಭನ ಗುಣರೂಪ ಕ್ರಿಯೆ ಮಾ। ನಸದಲ್ಲಿ ತಿಳಿದು ಅತನ ಚರಿತೆಯ। ಮಿಸಣಿ ಎಂದದಿ ಕೊಂಡಾಡಿ ಹಿಗ್ಗಿ ತು। ತಿಸುವ ಪ್ರವಾಹದಂತೆ ಹಗಲಿರುಳು। ವಸವಿನ ಮೇಲೆ ಪ್ರಾಣ ಇದ್ದಂತೆ ಇದ್ದ ಮಾನಸಗೆ। ವಿಷ ವಾಕ್ಯ ಉಂಟೇ ಕೇಳೊ ಪ್ರಾಣಿ। ಪಶುವಿನ ಬುದ್ಧಿಯಲ್ಲಿ ಬಲಾತ್ಕಾರ ಮಾಡಿದರೆ। ಹಸಗೆಟ್ಟು ಪೋಗುವದೊ ನಾನಾ ಬಣ್ಣಾ। ಅಸುರರ ಉಪಹತಿ ಪೆಚ್ಚುವದೊ ಆವಾಗ। ಋಷಿ ಗೀರ್ವಾಣಾದಿ ಜನರು ಒಲಿಯರದಕೊ। ದಶದಿಕ್ಕಿನೊಳಗೆ ಆವಾವ ಕವನ ಪೇಳಿದರು। ವಿಷವಾಗಿ ತೋರುವದು ಒಲಿಯಾ ಕೃಷ್ಣಾ। ಶಶಿಹಾಸ ಪಾಲಾ ನಮ್ಮ ವಿಜಯ ವಿಠ್ಠಲನ್ನ ಬಂ। ಧಿಸಿದ ಜ್ಞಾನಿಗೆ ಎಲ್ಲ ವಿಷ ಸುಧೆಯಾಗುವದೊ ॥೧॥

## ಮಟ್ಟತಾಳ

ಹರಿ ಪ್ರೇರಣೆ ಎಂದು ಅಂತರಂಗದಿ ತಿಳಿದು। ಪರಮ ಮುದನಾಗಿ ಪೇಳಿದ ಕವಿತಾ। ನೆರೆ ಪೂರ್ಣವಾಗಿ ಕೋಡಿ ಹರಿದಂತೆ। ಭರಿತವಾಗಿ ಅವಗೆ ಅಲ್ಲಿಂದುತ್ತಮ। ನರರಿಗೆ ಪ್ರಾಪುತವಾಗುವದು ಸಿದ್ಧ। ಧರೆಯೊಳಗಿದು ಸತ್ಯ ಧರೆಯೊಳಗಿದು ಸತ್ಯ। ವರುಷ ಸುರಿದರೆ ಫಲ ಪಲ್ಲೈಸಿದ। ತೆರದಂತೆ ಸರ್ವಾ ಭೀಷ್ಟ್ಯಯಾಗುವದಯ್ಯಾ। ಗುರುದೇವತ ಕರುಣ ಪಡದ ಮಾನವನಿಗೆ ಅ। ಕ್ಷರಗಳೊಂದೊಂದು ಸುರಭಿ ತುಂಬಿದ ಕುಸುಮಾ। ಕರಗಳಾಗಿ ಹರಿಗೆ ಸಮರ್ಪಣೆಯಾಗುವದೋ। ನರನೆನದಿರು ಅವನ ನಿಜವ ಕಂಡವನಾರು। ಸ್ಮರನಯ್ಯಾ ನಮ್ಮ ವಿಜಯ ವಿಠ್ಠಲನ್ನ। ಸ್ಮರಿಸುವ ಧೀರನಿಗೆ ಸರ್ವದಾ ಶುಭಯೋಗಾ ॥೨॥

### ತ್ರಿವಿಡಿತಾಳ

ರಾಜರಾಜರೂಪ ರಮಣಿಯಂತರರೂಪ। ತೇಜೋಮಯದ ರೂಪತೃಪ್ತಿ (ತೃಷಿ) ರೂಪ। ರಾಜವರ್ನದ ರೂಪ ರಾಗದೂರ ರೂಪ। ಮಾಜದಿಪ್ಪ ರೂಪ ಮಾಜದ ರೂಪ। ವಾಜಿಶ್ಯಂದನವೇರಿ ಬರುವ ಪೋಗುವ ರೂಪ। ಜೂಜನಾಡುವ ರೂಪ ಜೂಟರೂಪ ಗೋಜು ಬೀಳುವ ಗಣಣೆಮಾಡದರೂಪ। ಭೋಜನ ಮಾಡುವ ಭೋಕ್ತರೂಪ। ಸೋಜಿಗದ ರೂಪ ಸೊಬಗು ತೋರುವರೂಪ। ಯೋಜನವತಿ ಶಯವ ಮೆರೆವ ರೂಪ। ಸುಜನರೊಡನೆ ಕಾಲವ ಕಳೆವ ರೂಪ। ಕುಜನರಲ್ಲಿ ದ್ವೇಷ ಮಾಳ್ಪರೂಪ। ರಾಜನ್ಯರೂಪ ರಾಜಿಸುವ ಅಣುಮಹರೂಪ। ಭೂಜದಿಂದಲಿ ಫಲ ಕೊಡುವ ರೂಪ। ನೈಜ ಭಾವದಿಂದ ಕವನ ಪೇಳುವ ರೂಪ। ಬೀಜವಾದರೂಪ ಚಿತ್ರರೂಪಾ। ಮೂ ಜಗದೊಳಗುಳ್ಳ ರೂಪಾತ್ಮಕನಾದ। ಆ ಜನಾರ್ದನನು ಎನೊಳಗೆ ನಿಂದು। ಪೂಜೆಗೊಂಬುವನು ಈ ಪರಿ ಎಂದು ತಿಳಿದು ನಿ। ರ್ವ್ಯಾಜ್ಯ ಭಕುತಿಯಿಂದ ಬಾಳಿದರೆ। ರಾಜಧಾನಿಯಂತೆ ಮನೆ ಇದ್ದು ವೈಷಿಕ। ಭೋಜನ ಮಾಡಿದರು ಲೇಪವಿಲ್ಲ ಸು। ಜನ್ಮಧರಿಸಿ ವೈಷ್ಣವನಾಗಿ ನಿರುತ ಸ। ರೋಜ ನೇತ್ರನ ಪೊಗಳಿ ಸುಖಿಸುವಂತೆ। ಈ ಜನರಿಗೆ ವಿಷವಾಕ್ಯ ಎತ್ತಣದೊ ವಾ। ರಿಜಭವನು ಬಲ್ಲಾ ಬಲ್ಲಾನಯ್ಯಾ। ವೈಜಯಂತಿ ಗ್ರೀವ ವಿಜಯ ವಿಠ್ಠಲನಂಘ್ರಿ। ಆ ಜನ್ಮವಾರಭ್ಯ ನೆನೆಸುವ ನಿರ್ದೋಷ ॥೩॥

### ಅಟ್ಟತಾಳ

ಅನಳನ್ನ ಮಧ್ಯದಲಿ ಅಗ್ನಿಯ ಹುದಗಲು। ಇನಿತಾದರು ಬಾಧೆ ಇತ್ತಂಡಕೆ ಉಂಟೆ। ವನಜನಾಭನ ಪ್ರೇರಣೆ ಎಂದು ತಿಳಿದು। ಆತನಿಗೆ ಸಮರ್ಪಣೆ ಮಾಡಿದ ಕವನವು। ಜನರಿಗೆ ಲೇಶವಾದರು ವಿಮುಖವಾಗಿ। ಹನನ ಮಾಡುವದೇನು ಎಲೊ ಮನವೆ ಕೇಳೊ। ಘನವಾಗಿ ಪದವ ಮಾಡುವ ವಿದ್ಯವೆಲ್ಲ ರ। ತುನ ಮಾಲೆಯಂತೆ ಕಂಧರದೊಳಗಿಪ್ಪದು।

ತೃಣವಾದರು ಕಷ್ಟವನು ಬರಲೀಸದು। ಅನುಮಾನ ಬಿಡಿಸೋದು ಆದ್ಯಂತಕಾಲದ। ಚಿನುಮಯ ಮೂರುತಿ ವಿಜಯ ವಿಠ್ಠಲಸ್ವಾಮಿ। ತನುವಿನೊಳಗೆ ಇದ್ದು ತವಕದಲಿನ್ನು ಮಾಡಿಸುವ ಮಾಡಿಸುವ ॥೪॥

**ಆದಿತಾಳ**

ಗಿಡಗನ್ನ ಮುಂದೆ ಉಳಿದ ಹಕ್ಕಿಂಯು ಪ್ರತಾಪವೆ। ಪೊಡವಿಯೊಳಗಿದ್ದ ಪ್ರತಿಕೂಲಗಳು ಎಲ್ಲ। ಕಡಲ ಶಯನ ಹರಿಯ ಗುಣ ಕರ್ಮನಾಮಂಗಳ। ನುಡಿನುಡಿ ನುಡಿದವಗೆ ಅಡಗಾಣಿಪವೇನೊ। ಬಡ ಕವನವಾದರು ಆವದಾದರು ಒಂದು। ಎಡಗೆಡಿಸಿ ಮುಂದಕ್ಕೆ ಸಾಗಗೊಡದಿಪ್ಪವು। ಅಡಿಗಡಿಗೆ ಇಂಥ ನರನ ಪ್ರಾರಬ್ಧ ಉಣಿಸುತ್ತ। ಕಡಿಗೆ ಹಾಕುವದು ಸಂಸಾರದಿಂದ ವೇಗ। ಕೆಡಗೊಡದು ಜ್ಞಾನ ಭಕುತಿ ದಿನ ಪ್ರತಿದಿವಸಕ್ಕೆ। ಕಡಲ ತರಂಗಕ್ಕೆ ಅತಿ ಮಿಗಿಲೆನಿಸುವದು। ಕಡಿಯ ಜನ್ಮಕ್ಕೆ ಇಷ್ಟು ಸೌಭಾಗ್ಯ ದೊರಕುವದು। ಜಡಮತಿಯವರನ್ನು ಉದ್ಧಾರ ಮಾಡುವ। ಮೃಢಬಾಂಧವ ನಮ್ಮ ವಿಜಯ ವಿಠ್ಠಲ ಹರಿಯ। ಅಡಿಗಳ ನೆನೆನೆನೆದು ಓಲ್ಯಾಡಿದವ ಮುಕ್ತಾ ॥೫॥

**ಜತೆ**

ಜತುನ ಕಾಗಿದಂತೆ ಕರಿಗಿ ಪೋಪದು ದೋಷ ।
ಜಿತಕರುಣ ವಿಜಯ ವಿಠ್ಠಲನು ಬಲ್ಲಿದ ಕಾಣೊ ॥೬॥



## ಸುಳಾದಿ-೯೩

ಹರಿಭಕ್ತನಾದವಗೆ, ಆವದೂ ಕೊರತೆ ಇಲ್ಲ. ಹರಿಭಕ್ತರ ಯೋಗ್ಯತಾನರಿತು ಫಲವೀವ.

### ರಾಗ- ಕಾಂಬೋದಿ ಧ್ರುವತಾಳ

ಸುಖ ದುಃಖಗಳು ಎರಡು ಅನುಭವಿಸದೆ ಬಿಡದು। ಅಖಿಳ ಕಾಯವ ತೆತ್ತು ಬಂದರಾಗೆ। ಅಖಂಡಿತವಾಗಿ ಸ್ವರ್ಗ ಮೃತ್ಯು ಪಾತಾಳಗಿರಿ। ಶಿಖರ ಕಾನನ ದೇಶ ಸುತ್ತೆ ಪಂಚ। ಮುಖ ಮೊದಲಾವ ನಿರ್ಜರರಿಗೆ ತಪ್ಪುವದೆ। ನಿಖಿಳ ಬಗೆಯಿಂದ ಯೋಚಿಸುತ್ತ। ನಖ ಶಿಖ ಪರಿಯಂತ ನೋಡಿದ ಕಾಲಕ್ಕು। ಲಿಖಿತ ಪುಶಿಂಯಾಗದು ನಿರ್ಮಿಸಿದದ್ದು। ದುಃಖವಾದಿತೆಂಬಿಯಾ ನೋಡಿದರೆನಗಿದು। ಸುಖವಾಗಿ ತೋರುತಿದೆ ವಿಚಾರಿಸೆ। ಸಖನಾಗಿ ಇಪ್ಪೊದೇವ ಬಹು ಜನ್ಮದಲ್ಲಿ ನಾನಾ। ದುಃಖವಿರೆ ಒಂದರಿಂದ ಪೋಗಾಡಿದೆ। ಮುಖಮೌನ ಕರ್ಮಗಳು ಇಲ್ಲದ ಮನುಜಗೀ। ಸುಖ ಬಪ್ಪದೆಂತೊ ಹರಿ ನೀ ನಿತ್ತದೋ। ಮಖಭೋಕ್ತ ನಮ್ಮ ಸಿರಿ ವಿಜಯ ವಿಠ್ಠಲ ನಿತ್ಯ ಮುಖ ದಯಾಪರ ಎನಗಿಂದು ಮಾಡಿಸುವದು॥೧॥

### ಮಟ್ಟತಾಳ

ರಾಶಿಯೊಳಗೆ ಒಂದು ಕಾಳು ಪೋಗಲು ತಿರುಗಿ। ಲೇಶ ಬಿಡದೆ ಬಂದು ಆವಟಿಗನು ಅಳಿಯೆ। ರಾಶಿ ಕಡಿಮೆ ಉಂಟೆ ನೋಡಲು ಕೇಳಲು। ಕ್ಲೇಶವೆ ಎನಗಿಲ್ಲ ಎಂದೆಂದಿಗೆ ದೇವಾ। ತೋಷವಾಗುವದಯ್ಯಾ ಶುದ್ಧ ಮನಸು ಇದೇ। ವಾಸುದೇವ ರಂಗ ವಿಜಯ ವಿಠ್ಠಲ ನಿನ್ನ। ದಾಸ ತನವೆ ಒಂದೇ ಸಂತತಕರೆ(ರಿ) ಸುವದು ॥೨॥

### ತ್ರಿವಿಡಿತಾಳ

ಎನ್ನ ಯೋಗ್ಯತದಿನಿತು ಜ್ಞಾನ ಭಕುತಿ ವೈರಾಗ್ಯ। ಮುನ್ನೆ ದ್ರವ್ಯ ಪೂಜೆ ಮೃಷ್ಠಾನ್ನ ಭೋಜನ। ಮನ್ನಣೆಕೀರ್ತನೆ ಕೀರ್ತಿಸತ್ಪುಣ್ಯಾವಿ। (ಯ್ಪು) ತ್ಪನ್ನ ವಿಶೇಷ ಸ್ವಧರ್ಮ ಉತ್ತಮ ಸೇವೆ। ಘನ್ನ ವ್ರತಗಳು ತೀರ್ಥಯಾತ್ರೆ ವಾಕ್ಸರಣಿ। ಚನ್ನಾಗಿ ಶಿಷ್ಯ ಸಂಪತ್ತ ಸರ್ವಾಭೀಷ್ಟ। ಮನ್ನಿಸಿ ದಯದಿಂದ ನೀನಿತ್ತು ಇರಲಾಗಿ। ಇನ್ನು ಕ್ಲೇಶಗಳುಂಟೆ ಗುಣಿಸಿದರೂ। ಕಣ್ಣು

ಸುಳುವಿನೊಳು ಕಡ್ಡಿ ಕಾಣಿಸಿದರೆ। ಮನುಜ ಕುರುಡನೆ ಧರಣಿಮೇಲೆ ನಿನ್ನ ಕರುಣದಿಂದ ಸಕಲ ಸೌಖ್ಯಗಳಿರೆ। ಗಣ್ಯವೆ ಬರುತಿಪ್ಪ ಮೋಹಕ ಲೀಲೆ। ಚನ್ನ ವಿಜಯ ವಿಠಲ ನಿನ್ನ ನಾಮಸ್ಮರಣೆ। ಚನ್ನಾಗಿ ಇರಲಿ ಎನಗಾನಂದ ಆವಾಗ ॥೩॥

### ಅಟ್ಟತಾಳ

ತರಣಿ ಕಾಂತೆ ನೋಡೆ ನರನ ಎರಡು ಕಣ್ಣು। ತೆರಿಯಗೊಡದೆ ಕುಕ್ಕಲಿರದು ನೋಡಗೊಡದು। ತರಣಿ ಸ್ವಭಾವವಿದೆ। ನಿರುತ ದೋಷವಿಲ್ಲಾ। ನರನ ನೋಟದ ದೋಷ ಸರಿ ಎಂದು ತೋರುತದೆ। ಹರಿ ನಿನ್ನ ಸ್ವಭಾವ ಅರಿದ್ದರೆ ಇದೆ ಸಿದ್ಧ। ಮರಳೆ ದೋಷಂಗಳು ನರನಿಂದಾಗುವದಯ್ಯಾ। ಪರಮಾತ್ಮ ಗುಣನಿಧಿ ವಿಜಯ ವಿಠ್ಠಲ ನಿನ್ನ। ಚರಿತೆ ಒಂದಾದರು ಪರಿಮಿತ ಕಾಣಬಹುದು ॥೪॥

### ಆದಿತಾಳ

ಆನಂದ ಮತ್ತೊಂದುಂಟೆ ನೀನೊಲಿದ ಮೇಲೆ। ನಾನೆಂಬೊ ಮಾತುಗಳು ಮಾಣಿಸೊ ಎಲೊ ದೇವ। ನಾನಾ ಭೋಜನ ನನಗೆ ದೊರಕಿದ ಮೇಲೆ ಕಾಟ। ಕಾಣೆನೆಂದು ಹಲುಬಿ ಪೇಳುವನೆನೊ ತಿರುಗಿ। ಮಾನಸದಲಿ ಪೊಳೆವ ವಿಜಯ ವಿಠ್ಠಲ ನಿನ್ನ। ಧ್ಯಾನವೆ ವೊಂದು ಕೊಡೊ ದುರ್ಗತಿಯಾಗದಂತೆ ॥೫॥

### ಜತೆ

ನಿನ್ನ ಭಕ್ತರ ಯೋಗ್ಯವ ನೀನೆ ಬಲ್ಲೆ ಕಾಣೊ ।
ಅನ್ಯರು ತಿಳಿಯರು ವಿಜಯ ವಿಠ್ಠಲರೇಯಾ ॥೬॥



## ಸುಳಾದಿ-೬೭

ಅಪರೋಕ್ಷ ಜ್ಞಾನಿಗಳಿಗಾದರೂ ಪ್ರಾರಬ್ಧ ಕರ್ಮ ಬಿಡದು ಪ್ರಾರಬ್ಧ ಕರ್ಮ ಹರಿಯ ಹೊರ್ತು ಬಿಡಿಸುವರಿಲ್ಲ. ಇದರಿಂದ ಅವಸಾಧನವಿಲ್ಲ. ಪ್ರಾರಬ್ಧ ಕರ್ಮಬಿಡಿಸುವ ಹರಿ ಇಚ್ಛೆ.

### ರಾಗ- ಮೋಹನ ಕಲ್ಯಾಣ ಧ್ರುವತಾಳ

ಈ ಪ್ರಾರಬ್ಧ ಕರ್ಮವೇಸು ದಿವಸ ಉಂಟೊ। ನೀ ಪ್ರೀತಿಯಿಂದಲಿ ಪೇಳೊ ಜೀಯಾ। ನಾ ಪ್ರಪಂಚದವನಲ್ಲ ನಿರ್ಮಳನಾಗಿ ನುಡಿದೆ। ಹೇ ಪ್ರಾಣನಾಥನೆ ವರದಾಯಕಾ। ಆ ಪ್ರಕೃತಿ ಸಂಬಂಧದಿಂದ ಬಂದ ತ್ರಿಗುಣ। ಸು ಪ್ರಯೋಜನದಲ್ಲಿ ಮಿಳಿತವಯ್ಯಾ। ನಾ ಪ್ರಕೃತಿ ಕೂಲಕಾಣೆ ನಿನ್ನಿಚ್ಛೆಯಲ್ಲದೆ। ಭೂ ಪ್ರಕರಣದಲ್ಲಿ ಚರಿಸಿದರು। ಸ್ವ ಪ್ರವೇಶದಿಂದ ಲೇಶಮಾತುರ ಪೊಂದಿ। ದ ಪ್ರತಿಬಂಧಕ ತೊಲಗುವದೆ। ಶ್ರೀ ಪ್ರೀಯನಾದ ರಂಗ ವಿಜಯ ವಿಠ್ಠಲ ನೀನೆ। ಈ ಪ್ರಕಾರ ಮಾಳ್ಪುದು ಬಿಡಿಸಬಲ್ಲವರಿಲ್ಲಾ॥೧॥

### ಮಟ್ಟತಾಳ

ಸಾಕು ಸಾಕು ಎನಗೆ ಇಹ ಲೋಕದ ಸುಖ। ಬೇಕು ಬೇಕು ನಿನ್ನ ಚರಣ ಕಮಲವನ್ನು। ನೂಕು ನೂಕು ಬಂಧ ಭವ ವಾರುಧಿಯನ್ನು। ಸಾಕು ಸಾಕುವದು ಭಕ್ತರೊಳೆಣಿಸಿ। ಹಾಕು ಹಾಕದಿರು ಗರ್ಭದ ದುಃಖಕ್ಕೆ। ಜೋಕಿ ಜೊಕಿ ಮಾಡು ಜ್ಞಾನ ಭಕುತಿ ಕೊಟ್ಟು। ಕಾಕುಲತಿ ಬಿಡಿಸು ಕಂಡಲ್ಲಿ ಚರಿಸದಂತೆ। ಲೋಕನಾಯಕ ನಮ್ಮ ವಿಜಯ ವಿಠಲಕರು। ಣಾಕರ ಮೂರ್ತಿಯೇ ಈ ವಾಕು ಲಾಲಿಸುವದು ॥೨॥

### ತ್ರಿವಿಡಿತಾಳ

ಇದರಿಂದ ಸಾಧನ ಇಪ್ಪದಿಲ್ಲವೊ ದೇವಾ। ಅದುಭೂತವಾಗಿದೆ ನೋಡಿ ದದಕೋ। ಸದರವಿಲ್ಲದೆ ನಾನು ಅನುಭವಿಸುವ ಕರ್ಮ।

ಮುದದಿಂದ ತಿಳಿದರು ನೆಲೆಗಾಣೆನೊ। ಉದರಗೋಸುಗ ಹರಿ ತಿರುಗುವಂತೆ ಮಾ। ಡಿದನೊ ಎಂಬುದು ಎನಗೆ ತೋರುತಿದೆ। ಇದರ ವಿಚಾರ ವಿಸ್ತಾರವಾಗಿ ನಿನಗೆ। ಮೊದಲಿಂದ ಬಲ್ಲವಿಕೆ ನುಡಿವದೇನು। ಹೆದೆ ಏರಿಸಿ ಬಾಣ ಹೊಡೆದಂತೆ ನಿತ್ಯದೇ। ಶದ ಮೇಲೆ ಚರಿಸುವೆ ನಿನ್ನಿಂದಲಿ। ಮದವುಳ್ಳ ಮನುಜರ ಉನ್ನತ ತಗ್ಗಿಸಿ। ಪದವಿಯ ಕೊಡಿಸುವ ಕೊಡುವವನೆ। ಉದಕ ಓದನವೆಲ್ಲ ಪೂರ್ವೋಕ್ತ ಪ್ರಕಾರ। ಪದೊ ಪದಿಗೆ ನೀನು ಇತ್ತಂತೆವೇ। ಮೆದೆವುತ್ತ ಶಾರೀರ ಧರಣದಲಿ ಬಾಳಿ। ಬದುಕುವೆನಯ್ಯಾ ಬಹು ಮಂದಿಕೂಡ। ಅಧಿಕ ಮತ್ತಾವದು ನಿನ್ನ ಸಂಕಲ್ಪಕ್ಕೆ। ತುದಿಯಷ್ಟು ಬಿಡಿಸಿಕೊಂಬುವನು ಇಲ್ಲಾ। ಬದಿಯಲ್ಲಿ ಇಪ್ಪ ಸಿರಿ ವಿಜಯ ವಿಠಲಸರ್ವ। ನಿಧಿ ನದಿಗಳು ನಿನ್ನ ಪದನಖದಲಿ ಉಂಟು ॥೩॥

### ಅಟ್ಟತಾಳ

ಪುರ ವೈರಿ ಚಂದ್ರಮ ಸುರಪತಿ ಭಾಸ್ಕರ। ಸುರರಾದ್ಯರಿಗೆ। ತಪ್ಪಲರಿಯದು ಪ್ರಾರಬ್ಧ। ನರದೇಹ ತೆತ್ತಮಂದರಿಗೆ ಬಿಡುವದೆ। ಹರಿ ನಿನ್ನ ಇಚ್ಛೆಯ ಪರಿಹರಿಸುವನಾರು। ಪರಧನ ಪರ ಓದನ ಮಿಗಿಲಾದವು। ಪರಿಪರಿಯಿಂದ ಬಂದರೆ ಉಣಲಿಬೇಕು। ಶಿರವನ್ನು ಬೀಸಿ ಕೊಸರಿಕೊಂಡರೇನಯ್ಯಾ। ಬರಿದೆಯಲ್ಲದೆ ಮನುಜರಿಂದಾಗುವದೇನು। ಧರಿ ಮೇಲೆ ಇಪ್ಪ ಪರ್ಯಂತ ನೀನಿಟ್ಟ। ತೆರದಲ್ಲಿ ಇರಬೇಕು ಸ್ಮರಣೆಯ ಮಾಡುತ್ತ। ಗುರುದ್ವಾರದಲಿಂದ ದೊರತದ್ದು ಕೈಕೊಂಡು। ಹರಿಯ ಧ್ಯಾನದೊಳಿರಬೇಕು ಇರಬೇಕು। ಇರವಬಲ್ಲವ ನಮ್ಮ ವಿಜಯ ವಿಠ್ಠಲ ನಿನ್ನ। ಚರಣವೆ ಪ್ರಾಧಾನ ಬಲವಾಗಿ ಇರಲಿ ॥೪॥

### ಆದಿತಾಳ

ಆವಗತಿ ಎನಗೆ ಚಿಂತಿಸಿ ಇದ್ದಿಯಾ। ಶೈವಾದಿ ಮತದವ ನಾನಲ್ಲ ಎಲೊ ನಲ್ಲ। ಲಾವಕರಿಗೊಪ್ಪಿಸಿ ಗತಿಗೆಡಸದಿರು। ಠಾವ ಠಾವಿನಲ್ಲಿ ನಿನ್ನ

ನಿಜವ್ಯಾಪಾರ ಉಂಟು। ಕಾವ ಪ್ರದಾತ ನೀನೆ ಕಂಡವರ ನರಿಯೆ। ನೋವ ನೋವಾದರು ಪೋಗಲಾಡುವೆ ಶುದ್ಧ। ಜೀವಿಗಳಿಗೆ ಪಂಚ ಪ್ರಾಣವಾಗಿ ಇಪ್ಪನೆ। ಗೋವ ಗೋಪೆರಕೂಡ ನಲಿದಾಡಿದ ವಾಸು। ದೇವ ಎನಗೆ ಕೇಳೊ ದೋಷಾ ಎಂಬದು ಪುಸಿ। ಈ ವಾಣಿ ದಯ ಮಾಡಿ ಇತ್ತದದಕ್ಕೆ ಮುನ್ನೆ। ಪಾವನ ಮಾಡುವದು ಏಕ ಮನಸು ಕೊಟ್ಟು। ಕೋವಿದ ರಾಯಾ ನಮ್ಮ ವಿಜಯ ವಿಠಲ ನಿನ್ನ। ಸೇವೆ ಬಂದುಳ್ಳರೆ ಯಾವತ್ತು ಸುಖವುಂಟು॥೫॥

**ಜತೆ**

ನಿನ್ನ ಮನಸು ಬಂದದಲ್ಲದೆ ಜಗದೊಳು ।
ಅನ್ಯಯೋಚನೆಯಿಲ್ಲ ವಿಜಯ ವಿಠಲಧೊರಿಯೆ ॥೬॥

❖ ❖ ❖

## ಸುಳಾದಿ-೯೮

ಪ್ರಾಚುರ್ಯವಾದ ಕರ್ಮದ ದಾರಿ ಬಿಡುವಿಕೆ, ಜ್ಞಾನ ಭಕುತಿ ವೈರಾಗ್ಯ ದ್ವಾರಾ ಶ್ರೀಹರಿ ಪ್ರಸಾದ ಸಂಪಾದನೆಯ ವೈಕುಂಠವಾಗುವದಕ್ಕೆ ಮುಖ್ಯ ಕಾರಣ.

**ರಾಗ- ಕಲ್ಯಾಣಿ ಧ್ರುವತಾಳ**

ವೈಕುಂಠವಾಗುವದಕೆ ಲೌಕಿಕದಿಂದ ಪುಸಿ। ಸಾಕು ಮಾಡು ಧಾವತಿ ಕಾಕುಲಾತಿ ಯಾತಕ್ಕೆ। ನಾಕಧಾರುಣಿ ಸುಖಯಾಕೆ ನಿನಗೆ ವೈದಿಕವೆ ಲಾಭವೆನ್ನು। ವಾಕಾಂತ ದೈವವನ್ನು ಲೋಕ ಸಂಸಾರನಾಗಿ। ಏಕಾಗ್ರಚಿತ್ತದಲ್ಲಿ ಲೋಕಾಂತವಾರ್ತಿ ನೀನಿ। ರಾಕರಿಸಿ ಹೃದಯಾಕಾಶದಲ್ಲಿ ದಿ। ವಾಕರ ವರ್ಣನ ಆಕಾರ ಕಾಂಬುವದಕ್ಕೆ। ನೀ ಕಾಣು ಉಪಾಯವ

ಲೋಕದೊಳಗೆ ಮಾ। ಣೀಕವೆಂಬೊದೆ ಸ್ವಲ್ಪ ತೂಕಾವಾದರಕ। ನೇಕ ಬೆಲೆ ಇಪ್ಪದು ಕಾಕಪ್ಪಿಯಾಗಿ ರ। ತ್ನಾಕರನಂತೆ ಕರ್ಮನೇಕ ಬಗೆಯಿಂದ। ತಾ ಕುಳಿತು ಮಾಡಿದರು ವೈಕುಂಠವಾಗದು। ವಾಕು ನಿಜವೆನ್ನಿ ಬೇಕಾದ ಪದವಿ ವಿ। ವೇಕದಿಂದಲ್ಲದೆ ಈ ಕರ್ಮ ಬಹು ಚರಿಸೆ। ಸಾಕಾರವಾಗದು ಲೋಕನಾಯಕ ನಮ್ಮ ವಿಜಯ ವಿಠಲಹರಿಯು। ಸಾಕುವದಮ್ಮೆ ಪರಾಕು ಜ್ಞಾನದಲ್ಲಿ ಪೇಳೆ ॥೧॥

### ಮಟ್ಟತಾಳ

ಎಲೊ ಮನವೆ ನಿತ್ಯ ಮಲಪ ತೊಳಿಯದಲೆ। ಹಲವು ಕರ್ಮಗಳ ಕಾಲಕಾಲಕೆ ನೀನು ವಲಿದು ಮಾಡಿದರನ್ನ। ಸುಲಭ ಸದ್ಗತಿಗೆ ನೆಲೆಯಾಗುವದೇನೊ। ತಿಳಿದೀಪರಿಯಲ್ಲಿ ಇಳಿಯೊಳಗೆ ಕರ್ಮ। ವಳಿಗಳು ಆಚರಿಸೆ ತೊಳಲಬೇಕಲ್ಲದೆ। ಮಲಿನ ಪೋಗದು ಮನವೆ ಎಳೆಭಕುತಿಯಿಂದ। ವಿಜಯ ವಿಠಲ ಹರಿಯ ಜಲಜ ಪಾದವು ನಂಬಲು ಬಲು ಕರ್ಮವು ಯಾಕೆ ॥೨॥

### ತ್ರಿವಿಡಿತಾಳ

ಮಾರ್ಗ ಪೇಳುವೆ ಕೇಳು ಸ್ವರ್ಗಧಾರುಣಿಯಿಂದ। ನಿರ್ಗತನಾಗಿ ಅಪವರ್ಗ ಸೇರುವದಕ್ಕೆ। ಭಾರ್ಗವಿ ರಮಣನ್ನ ಮಾರ್ಗವರಿದು ವಾಕು। ಮಾರ್ಗಣದಲ್ಲಿ ಪಾಪ ದುರ್ಗವೆಸವರುತ್ತ। ದುರ್ಗಣ ಉಳ್ಳ ಸಂಸರ್ಗಿಯರಲ್ಲಿರದೇ। ದೀರ್ಘವಾದ ಕರ್ಮ ದುರ್ಘಟ ಬಿಡು ಕರ್ಮ। ಭಾರ್ಗವಿಗಾದರು ನಿರ್ಗಮನ ಎಣಿಸಲು। ನಿರ್ಗುಣಿ ಅವಿಕಾರ ವಿಜಯ ವಿಠಲಭೃತ್ಯ। ವರ್ಗದೊಳಿಟ್ಟು ಬಂದ ದುರ್ಗತಿ ಪರಿಹರಿಪಾ ॥೩॥

### ಅಟ್ಟತಾಳ

ಕೃತು ಯಾತ್ರೆ ತೀರಥ ಮಿತಿ ಓದನದಾನ। ವ್ರತ ಜಪ ತಪ ನಾನಾರತುನ ತುಲಾಭಾರ। ಅತಿಶಯವಾದ ಭಾರತ ರಾಮಾಯಣ।

ಸ್ಮೃತಿಪುರಾಣ ಬಹು ಕಥೆ ಕಲ್ಪ ಮಂಗಳಾ। ರುತಿ ಮೊದಲಾದ ವಿಹಿತ ಧರ್ಮಗಳೆಲ್ಲ। ಪ್ರತಿದಿನದಲ್ಲಿ ಉನ್ನತನಾಗಿ ಚರಿಸಲು। ಗತಿಗೆ ಸಾಧನವಲ್ಲ ಕ್ಷಿತಿಯೊಳು ಜ್ಞಾನ ಭ। ಕುತಿ ವೈರಾಗ್ಯ ಮುಕುತಿಗೆ ಎರಡೊಂದು। ಸತತವಾಗಿ ಮಾರುತಿ ಮತದ ಸ। ಮ್ಮತದಲಿ ತಿಳಿದು ಶಾಶ್ವತವೆನ್ನು ಮನವೆ। ಯತಿ ವಂದ್ಯ ವಿಜಯ ವಿಠಲರೇಯ ಶಾಂತ ಮೂರುತಿಯ ಪಾದಕ್ಕೆ ನಮಿತನಾಗು ಬಿಡದೇ ॥೪॥

### ಆದಿತಾಳ

ನೀರಡಿಸಿ ಬಂದು ಭಾವಿ ನೀರು ಮೇಲಕ್ಕೆ ಉಗ್ಗಿ। ತಾರಿ ಬಂದ ಮಾನವನು ನೀರು ಕುಡಿವೆನೆಂದು। ಕೋರಿ ಉದಯ ದಿನಾಂತ ಪರಿಯಂತ। ಪಾರುಗಾಣದೆ ಸೊರಗಿ ಗಾರು ಗೆಟ್ಟವನಂತೆ। ಆರಾದರೇನು ನಿತ್ಯ ಪೂರ್ೈಸಿ ಕರ್ಮದಿಂದ। ಸಾರವಾದ ಮುಕುತಿ ದಾರಿ ಪಿಡಿದವನಿಲ್ಲ। ಸಾರುದೇ (ವೆ)ನು ಕೇಳು ದ್ರವ ಆರಿ ದಣಿದು ಬಂದು। ವಾರಿಯನ್ನು ಕುಡಿವ ತನ್ನ ನೀರಡಕಿ ಪೋಗುವಂತೆ। ಹಾರೈಸಿದರು ಉಳ್ಳ ಪಾರಕರ್ಮವ ಮುಗಿಸಿ। ಪಾರು ಗಂಡವರಿಲ್ಲ ಈರೇಳು ಭುವನದೊಳು। ಮಾರಾರಿಗಳಿಗರಿದು ವಾರವಾರಕೆ ಮನವೆ ಹಾರವಾಗಿ ಕರ್ಮ ತೀರಿದಷ್ಟು ಮಾಡಿ। ವಾರಣದಲಿ ಇದ್ದು ವೈರಾಗ್ಯಜ್ಞಾನ ಭಕುತಿ। ಮೂರು ಸಂಪಾದಿಸಿ ನಾರಾಯಣನ್ನ ಮಂ। ದೀರವ ಸೇರು ಮನವೆ ಚಾರು ಚರಿತ ನಮ್ಮ ವಿಜಯ ವಿಠಲರೇಯ। ಸಾರಿ ಸಾರಿಗೆ ರೂಪ ತೋರುವ ಬಗೆ ತಿಳಿ ॥೫॥

### ಜತೆ

ಕರ್ಮದಾರಿಯ ಬಿಡು ಕಡೆಬಿದ್ದವರ ಕಾಣೆ ।
ನಿರ್ಮಳಾತ್ಮ ವಿಜಯ ವಿಠಲನ್ನ ತಿಳಿ ತಿಳಿ ॥೬॥



# ಸುಳಾದಿ-೯೯

## ಪ್ರಾಣಾಗ್ನಿ ಹೋತ್ರ ಸುಳಾದಿಗಳು

ಕರ್ಮದ ಮರ್ಮವನ್ನರಿತು ಹರಿಗೆ ಸಮರ್ಪಿಸುತ್ತ ಆತ್ಮಯಜ್ಞ ರೂಪವಾದ ಪ್ರಾಣಾಗ್ನಿ ಹೋತ್ರವನ್ನು ಮಾಡು. ಶುದ್ಧಾನ್ನ ಭೋಜನ ವಿಚಾರ ಪೂರ್ವಕ ಭುಂಜಿಸೆ. ಸದ್ಬುದ್ಧಿ, ದ್ವಾರಾಜ್ಞಾನ ಭಕುತಿ ವಿರಕುತಿ ಮುಕುತಿ

### ರಾಗ- ತೋಡಿ ಧ್ರುವತಾಳ

ನಿತ್ಯ ಸಂತೃಪ್ತ ಸರ್ವಸಾರ ಭೋಕ್ತಪುರು। ಷೋತ್ತಮ ಅಚಿಂತ್ಯ ಮಹಿಮ ಭಕ್ತವತ್ಸಲ। ಸತ್ಯ ಸಂಕಲ್ಪ ಹರಿಗೆ ನಾನೋಪಚಾರದಿಂದ। ಭಕ್ತಿ ವೆಗ್ಗಳನಾಗಿ ಮಜ್ಜನಾದಿಯ ಮಾಡಿ। ಚಿತ್ತ ನಿರ್ಮಳದಿಂದ ನಾನಾ ಸೌಖ್ಯವಾಗಿದ್ದ। ಉತ್ತಮ ಪದಾರ್ಥ ಸ್ವಪಕ್ವೈಯಿಸಿ। ಆತ್ಮನ ಮುಂಭಾಗದಲ್ಲಿ ಇಡಿಸಿ ಸ್ತೋತ್ರಗಳಿಂದ। ತುತ್ತು ಸಮರ್ಪಿಸಿ ಧ್ಯಾನಮಾಡಿ। ತೆತ್ತಿಗ ನಾನೆಂದು ಅಡಿಗಡಿದೆ ಹಿಗ್ಗಿ ತನ್ನ ಸತ್ವ ಪ್ರವೃತ್ತಿಗಳಿಗೆ ಹರಿ ಎಂದು। ವಿಸ್ತಾರವಾಗಿ ತಿಳಿದು ನಿಜವಾಗಿ ಶ್ರೀಬ್ರಹ್ಮ ದೇ। ವತ್ತಿಗಳಿಗೆ ಸನಕಾದಿಗಳಿಗೆ। ಮತ್ತೆ ಶುಕ ಮೊದಲಾದ ಅವತಾರ ಜನಕ್ಕೆ ತಾ। ರತ್ತಮ್ಯದಿಂದ ಕೊಡಲಿಬೇಕು ಮನುಜಾ। ಇತ್ತರೆ ನಿನ್ನಿಂದ ಅವರವರು ಕೈಕೊಂಡು ಮಾ। ಡುತ್ತ ಪರಿಂಯಂತ ಒಪ್ಪಿಸಿ ಕೊಡುವರು। ಅತ್ತಣ ಕಾರ್ಯ ಕೇಳಿ ಲಕುಮಿದ್ವಾರದಿಂದ। ಉತ್ತಮ ಶ್ಲೋಕ ಕೈಕೊಂಬನಯ್ಯಾ। ಪುತ್ತೀಕಾದಲ್ಲಿ ಮನಸು ಅಗ್ನಿಯಲ್ಲಿ ವಾಕು। ಆತ್ಮದಲ್ಲಿ ಗಾತ್ರ ಧ್ಯಾನ ಅವಧಾನಭುಕ್ತಿ ಚಿತ್ರವಿಚಿತ್ರವುಂಟು ಇದರೊಳಗನುಭವ। ಪುತ್ರಜನಕರೊಬ್ಬ ಸುಂದರ ನಾರಿಯ। ಹತ್ತಿಲಿಯಿದ್ದವಳ ಸ್ಪರ್ಶ ಮಾಡಿದರಾಗೆ। ಇತ್ತಂಡ ಮಾನವರ ಮನಸಿನ ಪ್ರೇಮ ಬೇರೆ। ಮಾತೃ ಭಾವನೊಬ್ಬನಿಗೆ ಪತ್ನಿಭಾವನೊಬ್ಬನಿಗೆ। ಅತ್ಯಂತವಾಗಿಪ್ಪುದು ವಿವೇಕರಿಗೆ। ತತ್ವೇಶ ಜೀವಿಗೆಲ್ಲಾ ಸಮಸ್ತ ರಸದಜ್ಞಾನ। ಪ್ರತ್ಯೇಕ ಪ್ರತ್ಯೇಕ ಇಪ್ಪದಯ್ಯಾ। ಚಿತ್ತದಲ್ಲಿ ನೋಡು ನೋಡುವದನು ಭಾವ।

ಮಾತ್ರ ಬೇರೆ ಉಂಟು ವಿರೋಧವಿಲ್ಲಾ। ಹೊತ್ತು ಹೊತ್ತಿಗೆ ಇದನೆ ಸ್ಮರಿಸಿ ವೇಗದಿಂದಲಿ। ತೀರ್ಥದಾನವ ಮಾಡಿ ಜ್ಞಾನಿಗಳೊಡನೆ। ಸುತ್ತು ಬಳಗದ ಕೂಡ ಕುಳಿತು ಭಗ। ವತ್ಪದಿಯ ಪೆತ್ತದೇವನ್ನ ಸ್ಮರಣೆ ಮಾಡಿಕೊಳುತ। ಆತ್ಮ ಯಜ್ಞವು ಮಾಡು ತುಲಸಿ ಮಿಶ್ರಿತದಲ್ಲಿ। ಹತ್ತೆಂಟುದಳ ನಿನಗೆಸತತಬೇಕು। ಹತ್ತದೆನ್ನಸಲ್ಲಾ ಕ್ಲೇಶಾದಿ ದೋಷಗಳಿಂದ। ಮೃತ್ಯು ಬರುತಿರಲು ನಿವಾರಣ। ಸತ್ತಮಾನವನೆನ್ನಿ ತುಲಸಿ ಮಿಶ್ರಿತರಹಿತ। ತುತ್ತು ತೆಗೆದುಕೊಂಡರೆ ವಮನ ಸರಿಯೋ। ಯತ್ತಲಾದರೇನು ತುಲಸಿ ಕರ್ನಂಗಳಲ್ಲಿ। ನಿತ್ಯ ಧರಿಸಿದ್ದರು ಆ ಮನುಜ। ಉತ್ತಮನೆ ಸರಿ ಚಂಡಾಲಸ್ಪರಶವಾಗೆ। ಶತ್ತಳಗೊಲಿಸುವದು ಪವಿತ್ರ ಕಾಣೊ। ಅರ್ಥಿ ಪುರುಷ ನಮ್ಮ ವಿಜಯ ವಿಠಲರೇಯನು। ಮುಕ್ತಿಯ ಕೊಡುವನು ಈ ಪರಿ ಚಿಂತಿಸಿದರೆ ॥೧॥

**ಮಟ್ಟತಾಳ**

ಭೋಜನ ಪಾತ್ರೆಯ ಮಂಡಿಸಿ ಅದರೊಳಗೆ ರಾಜಿಸುವ ಅನ್ನ ಶಾಖಾದಿಗಳಿಡಲು। ತೇಜದ ತರುವಾಯ ಪುಟ್ಟಿದ ಭೂತವನ್ನು। ಭ್ರಾಜಿಸುವ ಕರತಳದಲ್ಲಿ ಇಟ್ಟು। ಭೀಜ ಭೂರಾದಿ ತ್ರಿಚತುರ ವಿಂಶತಿವರ್ಣಾದಿ। ರಾಜೀವ ನೇತ್ರನ್ನ ನೆನೆದು ಅಭಿಮಂತ್ರಿಸಿ। ತೇಜ ಮೊದಲಾದ ಪದಾರ್ಥಗಳ ಮೇಲೆ ಮಾಜದೆ ಪ್ರೋಕ್ಷಿಸಿ ಮೌನ ಮಾನಸದಲ್ಲಿ। ವಾಜಿವದನ ಭಾರ್ಗವ ಕೃಷ್ಣದೇವರನೆನದು। ಮೂಜಗದೊಳಗೆ ಚೇತನ ಜಡದ ವ್ಯಾಪ್ತಿಯತಿಳಿದು। ಸೋಜಿಗ ಸೋಜಿಗವೊ ಭಗವಂತನ ಮಹಿಮೆ। ವಾಜಿಪೇಯ ಯಜ್ಞ ಮಾಡಿದ ಫಲ ಬರುವದು ಜನಕೆ। ಭೋಜಕುಲಾಧೀಶ ವಿಜಯ ವಿಠಲ ಮೆಚ್ಚುವ ಭೋಜನ ವಿಧಿಯನ್ನು ತಿಳಿದರೆ ಇಹಪರದಿ ॥೨॥

**ತ್ರಿವಿಡಿತಾಳ**

ಸಾರ ಹೃದಯನಾಗಿ ಶುದ್ಧ ಸಾಲಿಗ್ರಾಮದ। ವಾರಿಯ ಹಸ್ತದೊಳಗೆ ಧರಿಸಿ। ನಾರಾಯಣ ಮಂತ್ರದಿಂದ ಅನ್ನಕ್ಕೆ ಹಾಕಿ। ಆರೆರಡಾವರ್ತಿಯಲ್ಲಿ

ಜಪಿಸಿ। ನೀರು ತೆಗೆದುಕೊಂಡು ಸುತ್ತು ತಿರುಹಿ ಮನೋ। ಹರದಿಂದಲಿ ಮೂರು ಲೋಕದ ಶಬ್ದ। ತಾರಕ ಮಂತ್ರದಿಂದ ತ್ರಿಪಾದದೇವಿಯ। ಹಾರೈಸು ಪಾತ್ರಿಗೆ ಚತುರಾಂಗುಲಿ ಬಿಟ್ಟು। ಬೇರೆ ಬೇರೆ ಇದ್ದ ಸಂಪ್ರದಾಯಕ ತಿಳಿದು ಪೂರೈಸು ಚಿತ್ರಗುಪ್ತಾದ್ಯರಿಗೆ ಆಹಾರಾ। ಬೋರೆ ಫಲದನಿತು ಕೊಟ್ಟು ನೀರೆರೆದು ವಿ। ಚಾರವಗಯ್ಯೊ ಆಹುತಿಕೊಂಬೊ ದಿಕ್ಕುಗಳು। ಆರಂಭದಲ್ಲಿ ತಕ್ಕೊ ಅಂಗುಟಕಾ ತರ್ಜನಿ ಮಧ್ಯಮಾ। ಮೂರು ಬೆರಳಿನಿಂದ ಪೂರ್ವಭಾಗದ ಅನ್ನಾ। ಸಾರಿದೆ ಮಧ್ಯಮಾ ಅನಾಮಿಕಾ ಅಂಗುಟದಿಂದ। ಧೀರ ದಕ್ಷಿಣ ದಿಕ್ಕಿನಲ್ಲಿ ಗ್ರಾಹ್ಯವೋ। ಮೀರದಲೆ ಅನಾಮಿಕಾ ಅಂಗುಟದಿಂದ। ನೀರೇಶ ದೇವನ್ನ ದಿಕ್ಕಿಲಿ ಸಾಧಿಸಿರೊ। ತೋರುವ ಕನಿಷ್ಟ ತರ್ಜ್ಯನ್ನಾಂಗುಟದಿಂದ ಮಾರಾರಿ ಸಖನ ದಿಕ್ಕಿಲಿ ಕೊಳ್ಳಿರೋ। ಈ ರೀತಿ ಆದಮೇಲೆ ಪಂಚಾಂಗುಲಿಯಿಂದ। ಸೇರಿಸಿರೊ ಊರ್ಧ್ವಭಾಗದ ಓದನ। ಮಾರುತ ಐವರು ಪ್ರಾಣಾಪಾನಾದ್ಯರ। ಶಾರೀರದೊಳು ಸ್ಥಾನ ಭೇದ ತಿಳಿದು। ಮೋರೆ ಹೃದಯನಾಭಿ ದಕ್ಷಿಣೋತ್ತರದಲ್ಲಿ। ಮಾರುತ ಸಖನೊಳಗೆ ಹೋಮಿಸುವದು। ಸಾರಿರಯ್ಯಾ ಶಾಂತಿ ಕೃತಿ ಜಯಾ ಮಾಯಾ ಲಕ್ಷ್ಮೀ ಮನೋ। ಹರ ಮೂರ್ತಿಗಳು ಅನಿರುದ್ಧಾದಿಯು। ಮೂರೆರಡು ರೂಪಗಳು ಸ್ಮರಿಸಿ ಪ್ರಾಣಾಹುತಿ। ದ್ವಾರದಿಂದಲಿ ತತ್ವ ಜನ ಸಮೇತದಲ್ಲಿ। ವಾರ ವಾರಕ್ಕೆ ವೈಶ್ವಾನರ ನಾಮದಿಂದಲಿ ಬೇರೆ ಬೇರೆ ಪೆಸರುಗೊಂಡು ಸುಖಿಸು। ಆರಾಧನೆಯೆಂದು ತಿಳಿದು ರೇಚಕ ಕ್ರಮದಿ। ವಾರಿಜಭವ ವಿಷ್ಣು ಮಹಾದೇವರ। ಮೂರು ನಾಡಿಯಲ್ಲಿನೋಡು ಪಿಂಗಳ ಇಡಾ। ಧಾರಳ ಸುಷುಮ್ನ ನಾಡಿ ಮಧ್ಯದಲ್ಲಿ। ಮಾರುತನ್ನ ಬಿಗಿದು ನಿಲ್ಲಿಸಿ ಮಾತಾಡದೆ। ನಾರಾಯಣ ಕೃಷ್ಣ ಎಂದು (ಎನದೆ) ಯುನಿರೊ। ನೀರು ಕುಡಿದು ಶಿಖಿಗ್ರಂಥಿಯನ್ನು ಬಿಟ್ಟು ವಿ। ಸ್ತಾರವಾಗಿ ಮಧ್ವಾಂತರ್ಯಾಮಿಯ। ಸಾರೆ ದೂರದಲ್ಲಿದ್ದ ಲೋಕ ಕೇಳುವಂತೆ। ವೈರಾಗ್ಯದಿಂದಲಿ ಉಣಲಿಬೇಕು। ಕಾರುಣ್ಯವಂತರಾಗಿದ್ದ ಅಭಿಮಾನಿಗಳ। ಭಾರಿ ಭಾರಿಗೆ ಅನ್ನಗಳಲ್ಲಿ ನೆನಿಯೋ। ನೀರು ಕಣ್ಣಿಗೆ

ತೊಡಿಯೊ ಶೂದ್ರಾದಿ ಪ್ರತಿಗ್ರಹ। ಪಾತ ದೋಷಗಳೆಲ್ಲ ಪೋಗುವಂತೆ। ಶರೀರ ಬಲು ಸ್ಥೂಲವಾಗಬೇಕೆಂದು ಆ। ಹಾರ ಮೆಲ್ಲದಿರೂ ಮೂಢ ಮನುಜಾ। ಧಾರುಣಿಯೊಳಗೆ ಶ್ರೀಹರಿ ಸೇವೆ ಗೋಸುಗ। ಆರು ಬಗೆಯ ರಸ ಸವಿಯೊ ಹರಿ ಪ್ರೇರಣೆ। ಆರಿಗೆ ದೊರಕದು ವಿಜಯ ವಿಠ್ಠಲರೇಯನ। ಕಾರುಣ್ಯ ಪಡೆದರೆ ಬಲು ಸುಲಭ ಸುಜನಕ್ಕೆ ॥೩॥

**ಅಟ್ಟತಾಳ**

ಹೊತ್ತು ತಿಳಿದು ಎದ್ದು ಜಗ ಎಚ್ಚರಿಸುವ ಜೀವ। ತತ್ತಿಯ ಪ್ರಮಾಣ ಕವಳನ್ನು ಮಾಡಿ। ಆತ್ಮ ಈಶ್ವರನೆಂದು ಧ್ಯಾನಂಗತನಾಗಿ। ಚಿತ್ತ ನಿರ್ಮಳದಿಂದ ಚತುರ್ವಿಧ ಅನ್ನಮೂವ। ತ್ತೆರಡು ತುತ್ತು ಅನು ಸಂಧಾನದಿಂದ। ಎತ್ತಿ ಕ್ರಮಾನುಸಾರ ಒಂದೊಂದು ಕವಳ ನುಂ। ಗುತ್ತ ಶ್ರೀನಾರಾಯಣ ಹರಿನಾಮ ಗೋವಿಂದ। ಸತ್ಯ ವಲ್ಲಭ ಸರ್ವಸ್ವತಂತ್ರ ಚಿನುಮಯ ಮೂರ್ತಿ ತ್ರಿಲೋಕೇಶ ನಾನಾವತಾರ ದೇ। ವೋತ್ತಮನೆ ಬಿಂಬ ತದಾಕಾರ ಅಖಂಡ ವ್ಯಾಪ್ತರೂಪನೆಂದು ತನ್ನ ಮೊದಲು ಮಾಡಿ। ಸತ್ವಾದಿ ಚೇತನರಲ್ಲಿ ತಿಳಿಯಬೇಕು। ಆತ್ಮ ಯಜ್ಞವಿದು ಒಂದೊಂದು ತುತ್ತು ಮೂ। ವತ್ತೆರಡು ಕಕ್ಷ ತಾರತಮ್ಯದಿಂದ। ಇತ್ತರಾದಡೆ ಒಬ್ಬ ಒಬ್ಬ ಭಗವಂತ। ತೃಪ್ತನಾಹನು ಕಾಣೊ ವಿಶ್ವಾದಿನಾಮದಲ್ಲಿ। ಆಪ್ತಕಾಮನು ನಮ್ಮ ಭಕ್ತಿಗೆ ವಶವಾಗಿ। ಭುಕ್ತಿಯ ಕೈಕೊಂಬ ಅಚಿಂತ ಮಹಿಮನೊ। ಸತ್ಯವೊ ಇದೆ ಸರಿಯೆ ಪ್ರಣವ ಸಹಿತ ಗಾ। ಯಿತ್ರಿ ಮಂತ್ರದ ಪ್ರತಿಪಾದ್ಯ ವರಣದಿಷ್ಟಾನ। ಮೂರ್ತಿಗಳುಂಟು ದ್ವಾತ್ರಿಂ ಶತಿಗಣನೆ। ಎತ್ತಲಾದರೇನು ಹರಿ ಸ್ಮರಣೆ ಪೂರ್ವಕ। ತುತ್ತು ತೆಗೆದುಕೊಂಡು ಧನ್ಯನಾಗೆಲೊ ಜೀವಾ। ಉತ್ತುಮೋತ್ತಮ ನಮ್ಮ ವಿಜಯ ವಿಠಲನ್ನ। ಭೃತ್ಯನಾಗಿ ಬಾಳೊ ಜನ್ಮ ಜನ್ಮಾಂತರದಿ ॥೪॥

## ಆದಿತಾಳ

ಗುಣ ಕರ್ಮ ಕಾಲಕ್ರೀಯ ಅಣು ಸ್ಥೂಲ ಪಂಚಭೇದ। ತನುಶುಚಿ ತರತಮ್ಯ ತಾತ್ಪರ್ಯ ವೇದಶಾಸ್ತ್ರ। ಅನುಕೂಲ ವಿಹಿತಾಚಾರ ವಿಚಾರ ಧರ್ಮಾಧರ್ಮಾ। ಅನುಭವ ಪಾಪ ಪುಣ್ಯವ್ರತ ಸಂಪ್ರದಾಯಕ। ಅನುಸೂಯ ಗುರುಪದೇಶ ಜ್ಞಾನಭಕ್ತಿ ವೈರಾಗ್ಯ। ವಿನಯರೂಪ ವರಣಾಶ್ರಮ ಜಾತಿ ಭೇದ ವ್ಯಾಪಾರ। ಅನಿಮಿತ್ಯ ಮೌನ ಅಮಿತ ಧೈರ್ಯ ಏಕಾಂತ ಧ್ಯಾನ। ಜನಲಜ್ಜೆ ಸತ್ಯಾಸತ್ಯ ಭಯಚ್ಛಿನ್ನ ಧೈರ್ಯ ಉದಾ। ಸೀನ 'ಅ' ಸ್ವತಂತ್ರ ವ್ಯಾಪ್ತಸಂಗ ನಿಸ್ಸಂಗ ಸ್ನೇಹ। ಜನನಾದಿ ಭಾವ ಕ್ರೀಯ ಶಬ್ದ ದುಷ್ಟ ಚೇ। ತನ ಜಡಮಾನಿಗಳು ವಿಶೇಷ ಅನಾದಿ ಪುರುಷ। ನೆನಹೋ ಐಶ್ವರ್ಯ ಅಫಲ ರಸ ಸಂಬಂಧ ಪವಿತ್ರ। ಮನಪ್ರಾಣ ಇಂದ್ರಿಯಗಳ ವ್ಯಾಪಾರ ತ್ರಿವಿಧ ಜೀವ। ಧನ ಆಶಾ ಮಮತಾಯುಕ್ತ ಕಾರ್ಯಕಾರಣ ಶಕ್ತಿ। ಅನೈಶ್ವರ್ಯ ವೈದಿಕ ಬಾಹ್ಯಾಂತರ ಖಂಡ। ಅನಪೇಕ್ಷ ಅಲೌಕಿಕ ಸಾದಿ ಅನಾದಿ ಲಕ್ಷ। ಘನ ಜಾಗ್ರತಿ ಸಂತೋಷ ಹರಿಪೂಜಾ ನಿರಾಕೂಲ। ಅನಿತ್ಯ ನಿತ್ಯ ಅಜ್ಞಾನ ಪೂರ್ಣಾಪೂರ್ಣಕರ್ತತ್ವ। ಅನುಕಂಪನ ಅನಾಲಸ್ಯ ಆಲಸ್ಯ ಲಾಭಾಲಾಭ। ಇನಿತು ತಿಳಿಯಬೇಕು ತತ್ವವಿಧ ಸಂಖ್ಯಾನಾ। ಎಣಿಸಿ ಆವಾವ ಕಾಲ ಹರಿ ಸ್ವಾತಂತ್ರ್ಯ ಸಂಪೂರ್ಣ। ಗುಣಗಣ ಸಾಂದ್ರನೆಂದು ಕೊಂಡಾಡಿ ಪ್ರತಿದಿನ। ಉಣತಿದ್ದ ಮನುಜ ನಿತ್ಯ ಉಪವಾಸಿಯೊ। ಹನುಮ ಭೀಮ ಮಧ್ವಾಂತರ್ಯಾಮಿ ಮೆಚ್ಚುವ। ಮುನಿ ವಿಶ್ವಾಮಿತ್ರನು ನಿತ್ಯ ಉಪವಾಸಿ ಎಂದು। ಅನುದಿನದಲ್ಲಿ ಜನರು ಪೊಗಳುತಿಪ್ಪರು ನೋಡೊ। ಗಣನೆ ಮಾಡುವದೇನು ಈ ಪರಿ ಬಲ್ಲವನು। ಜನುಮ ಜನುಮದಲ್ಲಿ ಪವಿತ್ರ ಫಲಪ್ರದನು। ಪ್ರಣವ ಮೂರುತಿ ನಮ್ಮ ವಿಜಯ ವಿಠಲರೇಯನ್ನ। ಮನದಲ್ಲಿ ನಿಲ್ಲಿಸಿ ಭೋಜನ ಮಾಡು ವಿಧಿಯಿಂದ ॥೫॥

## ಜತೆ

ತೃಪ್ತನಾಗೆಲೊ ಮನುಜಾ ಭುಂಜಿಸಿದ ದೋಷ ನಿ ।
ರ್ಲಿಪ್ತನಾಗು ವಿಜಯ ವಿಠ್ಠಲ ವಿಲಕ್ಷಣನೆಂದು ॥೬॥



## ಸುಳಾದಿ-೧೦೦

(ಪಂಚ ಪ್ರಾಣಾಗ್ನಿ ಹೋತ್ರ) ಪಂಚ ಪ್ರಾಣಾಹುತಿ ಕೊಡುವ ಕ್ರಮ ಕ್ರಮದಿಂದ ಬಿಡುಗಡೆ

### ರಾಗ- ಶಂಕರಾಭರಣ ಧ್ರುವತಾಳ

ಆಹುತಿ ಕೊಡುವದು ಪಂಚ ಪ್ರಾಣರಿಗೆ ಸಂ। ದೇಹ ಮಾಡದಲೆ ಮನಸು ಪೂರ್ವಕದಿಂದ। ದೇಹದೊಳಗೆ ಐದು ಸ್ಥಾನಂಗಳು ತಿಳಿದು। ಸ್ವಾಹಲೋಲನ್ನ ಪ್ರೀತಿ ಬಡಿಸಿ ಉಣಿಸು। ಆಹಾರ ಮೆಲುವಾಗ ಮುರಿಯಲಾಗದು ಅತಿ। ಸ್ನೇಹಭಾವದಿಂದ ಸರ್ವದಲ್ಲಿ। ಮಹ ಪುಣ್ಯ ಬಪ್ಪದು ಮಾಡಿದಾಘ ರಣ್ಯ। ದಹನವಾಗುವದು ತಡವಿಲ್ಲದೆ। ಗಹನವಿದು ಕೇಳಿ ಕಂಡವರಿಗಿಲ್ಲಾ। ಇಹ ಲೋಕದಲ್ಲಿ ಸಿದ್ಧಾಂತ ತಿಳಿದು। ಮೋಹಕ ಶಾಸ್ತ್ರ ಜರಿದು ಮದಮತ್ಸರ ಹರಿದು। ಕುಹಕ ಬುದ್ಧಿ ಬಿಟ್ಟು ಉಚಿತದಲ್ಲಿ। ಶ್ರೀಹರಿ ವೈಶ್ವಾನರನೆಂಬೊ ನಾಮ ಚತುರ। ಯೂಹಗಳಿಪ್ಪವೆನ್ನು ಅಲ್ಲಿ ಗಲ್ಲಿ। ಬಾಹಳಾಧಿಷ್ಠಾನದಲ್ಲಿ ಶುಭ (ರಸ) ಸಾರ ಭುಂಜಿಸುವಾ। ದ್ರೋಹಿ ಮಾನವರ ತೊರದು ತಿಳಿಯಗೊಡದೆ। ಅಹಂಕಾರ ಮಮಕಾರ ತೊರೆದು ದೈನ್ಯದಲ್ಲಿ ದಾ। ಸೋಹಂ ಎಂದವಗೆ ಫಲದಾಯಕಾ। ದೇಹಿ ದೇಹಗಳಲ್ಲಿ ಪೂರ್ಣನಾಗಿ ಇಪ್ಪಾವಾರಿ। ರುಹಲೋಚನ ನಮ್ಮ ವಿಜಯ ವಿಠ್ಠಲನು। ಅನುಗ್ರಹ ಮಾಡುವವರ್ಪಿತ ಕೈಕೊಂಡು ॥೧॥

### ಮಟ್ಟತಾಳ

ಮೊಗದಲ್ಲಿ ಆಹವನಿಯ ಎಂದೆಂಬೊ ದೇವಾ। ಮೊಗನುಂಟು ಅಲ್ಲಿ ಓಂ ಪ್ರಾಣಾನೆಂದೂ। ಮಿಗೆ ಹೋಮಿಸುವದು ಸ್ವಹಾ ಕಡೆಯಲ್ಲಿ। ನುಡಿದು ರುಕುಮ ವರ್ನ ಕ್ಷುಧಾಗ್ನಿ ಋಷಿದೇವತ। ಗಗನ ಮಣಿಯನ್ನು ಗಾಯತ್ರಿ ಛಂದಸ್ಸು। ಬಗೆಯನ್ನು ತಿಳಿದು ತಿಳಿದು ಶಿವಪುತ್ರನು ಪವನ।

ಮಗನು ಚಕ್ಷು ಶ್ವಾಸೋಶ್ವಾಸದಭಿಮಾನಿಗ ರವಿ ಅ। ಹಿ ಗರುಡ ಪ್ರಣವಾಚ್ಯರಿವರು। ದ್ಯುಗನಾಮಕಳು ಭಾರತಿದೇವಿ ಆ ಮೇಲೆ। ಜಗ ಜೀವನತನಕ ಅಧಿಷ್ಠಾನವ ಗ್ರಹಿಸಿ। ನಿಗಮಾಭಿಮಾನಿ ಶ್ರೀ ಲಕುಮಿಯ ಹೃದಯದೊ। ಳಗೆ ಪ್ರಾಣನಾಮಕ ನಿರುದ್ಧಾತ್ಮಕಾ। ಅಗಣಿತ ಗುಣಸಾರ ವೈಶ್ವಾನರನಿಗೇ। ಸೊಗಸಾಗಿ ಕೊಟ್ಟು ತೃಪ್ತಿಯ ಬಡಿಸಿರೋ। ಪೊಗಳಿದವರ ಪ್ರಾಣ ವಿಜಯ ವಿಠ್ಠಲ ದೈವಾ। ದಿಗಳ ಕೈಯ್ಯಾ ವಾಲಗ ಕೊಳುತಿಪ್ಪಾ॥೨॥

### ರೂಪಕ ತಾಳ

ವಕ್ಷ ಪ್ರದೇಶದಲ್ಲಿ ಗಾರ್ಹಸ್ಪತ್ಯ ಚತು। ರಾಕ್ಷನಲ್ಲಿ ಅಪಾನ ನೆಂಬಾಹುತಿ। ತೀಕ್ಷಣವಾಗಿ ಹೋಮಿಸುವದು ಮೊದಲಂತೆ। ಲಕ್ಷಣ ಕಡೆ ಮೊದಲು ನೋಡಿ ಪ್ರಣವ ಸ್ವಹಾ। ಗೋಕ್ಷೀರ ವರ್ನ ಶ್ರದ್ಧಾಗ್ನಿಋಷಿ ದೇವಾದಿ। 'ನಕ್ಷತ್ರ ಪತಿ ತೃಷ್ಟುಪ' ಛಂದ। ದಕ್ಷಾರಿ ಪಿತನ ಪುತ್ರಮುಖ್ಯಪ್ರಾಣನಮಗ। ದಿಕ್ಷು ಶೋತ್ರಾಭಿಮಾನಿ ಚಂದ್ರ ಮತ್ತೆ ಘಾ। ಲಾಕ್ಷ ಶೇಷಗರುಡ ತನ್ನಾಮಕರಾಗಿ। ನೀಕ್ಷಿಸುತ ತಮ್ಮ ತಮ್ಮಧಿಷ್ಠಾನದಲಿ। ಸೂಕ್ಷ್ಮರೂಪದಲ್ಲಿ ಇಪ್ಪರು ಇವರೊಳಗೆ। ಈ ಕ್ಷಿತಿ ನಾಮಕ ಭಾರತಿ ಅಲ್ಲೀಗಾ। ಸಾಕ್ಷಾತ ಪ್ರಾಣದೇವನ ತನ್ನ ಮಧ್ಯದಲ್ಲಿ। ಲಕ್ಷ್ಮೀ ಇಪ್ಪಳು ಅಧಿಷ್ಠಾನದಲ್ಲೀ। ಅಕ್ಷರ ಪುರುಷ ಅಪಾನ ನಾಮಕ ಪ್ರ। ತ್ಯಕ್ಷ ಪ್ರದ್ಯುಮ್ನಾತ್ಮಕ ವೈಶ್ವಾನರಾ। ಪೇಕ್ಷಾರಹಿತ ತಾನೆ ಶುಭರಸ ಕೈಕೊಂಬ। ಮೋಕ್ಷದಾತೃ ಸ್ವಾಮಿ ವಿಜಯ ವಿಠ್ಠಲ ಕಲ್ಪವೃಕ್ಷ ಕಾಣೊ ಕರಮುಗಿದು ಬೇಡುವರಿಗೆ ॥೩॥

### ಝುಂಪೆತಾಳ

ವ್ಯಾನನೆಂಬಾಹುತಿ ನಾಭಿಯಲ್ಲಿ ಇದ್ದ ದ। ಕ್ಷಣ ಪಾವಕನಲ್ಲಿ ಹೋಮಿಸುವದು। ಈ ನುಡಿಗೆ ಪದ್ಮವರ್ನ ಹುತಾಶನ ಋಷಿ ಕ್ರ। ಶಾನು ದೇವತಾ ಅನುಷ್ಟುಪ ಛಂದಸ್ಸು। ಅನಿಟಲ ನೇತ್ರನ ಪುತ್ರನೊಬ್ಬನು ಮುಖ್ಯ। ಪ್ರಾಣ ಪುತ್ರನು ಮುಂದೆ ವಾಗಾಸ್ಪರಿಶಾಭಿಮಾನಿ। ಅಗ್ನಿದೇವತಾ ಪಾರ್ವತಿ

ಪತಿಶೇಷ। ವೈನತೇಯ ಇವರಿವರು ಎಲ್ಲಾ। ವ್ಯಾನ ಶಬ್ದವಾಚಕ ರಾಗೆ ಇವರಧಿಷ್ಠಾನದಲ್ಲಿ। ವಿ। ದ್ಯುನಾಮಕಿ ಭಾರತಿ ಪ್ರಾಣದೇವರು ವ್ಯಾನವಾಮದಲ್ಲಿ ತಾನಿಪ್ಪಾನಾತನೊಳು ಲೋಕಾಮತು ಉಂಟು ವ್ಯಾನ ನಾಮದಲ್ಲಿ ಸಂಕರುಷಣಾತ್ಮಕ ವೈ। ಶ್ವಾನರ ಭುಂಜಿಸುವ ಶುಭರಸವನ್ನು। ಏನು ಗಣಣೆ ಮಾಡಿ ಸಂಖ್ಯ ಪೇಳಲುಂಟೆ। ಆನಂದ ಮೂರುತಿ ವಿಜಯ ವಿಠ್ಠಲರೇಯಾ ಧೇನಿಪರ ಮನಕೆ ಚಿಂತಾಮಣಿ ಸರ್ವದಾ ॥೪॥

## ತ್ರಿವಿಡಿತಾಳ

ಶರಭಿ ಎಂಬೊ ಅಗ್ನಿ ನಾಭಿ ಬಲಭಾಗದಲ್ಲಿ। ಇರುತಿಪ್ಪದು ಉದಾನನೆಂಬಾಹುತಿ। ಸ್ಮರಿಸು ಓಂಕಾರದಲಿ ಸ್ವಾಹಾ ಕಡೆಯಲ್ಲಿ ನುಡಿದು। ಪರಮ ಭಕುತಿಯಿಂದ ಕೊಡಲಿಬೇಕು। ಸ್ವರಿಶಾಗ್ನಿ ಋಷಿವಾಯುರ್ದೇವತಾ ಬೃಹತಿ ಛಂದ। ಹರಿಮಣಿ ವರ್ನ ಎಂಬ ಮಂತ್ರವು। ಹರಪುತ್ರ ಪ್ರಾಣಜ ಅನಿರುದ್ಧ ರುದ್ರಾಹಿ। ಗರುಡ ಇವರಿಗೆ ಉದಾನ ಶಬ್ದಾ। ಕರಿಸಿಕೊಳುತಿಪ್ಪರೊ ಕವಚದಂದಲಿ ಇದ್ದು। ಹಿರಿದಾಗಿ ಭಾರತಿ (ವಾಜ್‌ನಾಮ) ದೇವಿಮುಖ್ಯ। ಮರುತ ದೇವ ಉದಾನನೆಂಬೊ ನಾಮದಲಿ। ಇರಲು ರಮ್ಮೆದೇವಿ ಅವರೊಳಗೆ। ಸ್ಥಿರವಾಗಿ ಇಪ್ಪಳು ಅಧಿಷ್ಠಾನದಲ್ಲಿ। ಹರಿ ಉದಾನ ವಾಸುದೇವಾತ್ಮಕಾ ವೈಶ್ವಾ। ನರನೆಂಬೊ ಪೆಸರಿಲಿ ಕರಿಸಿಕೊಂಡು ಸ್ವೀ। ಕರಿಸುವ ದಿವ್ಯನ್ನ ಕರುಣಾ ರಸದಿಂದ। ಪರಮ ಪುರುಷ ನಮ್ಮ ವಿಜಯ ವಿಠ್ಠಲರೇಯ। ಸುರಧೇನು ಕರದುಂಬ ಭಕ್ತರಾಕುಲಕೆ ॥೫॥

## ಧ್ರುವತಾಳ

ಮತ್ತೆ ಸಮಾನವೆಂಬಾಹುತಿ ನಾಭಿ। ಉತ್ತರದಿಕ್ಕಲಿ ಆವ ಶರಭಿಲಿ। ಹೋತ್ರನಲ್ಲಿ ಹೋಮಿಸು ವಿದ್ಯುದ್ವರ್ನ। ಉತ್ತಮ ವಿರುಪಾಗ್ನಿ ಋಷಿಪರ್ಜನ್ಯೋದೇವತಾ। ಪಂಕ್ತಿ ಛಂದ ಇದೆ ನಾಮಕರಾಗಿ। ಕೃತ್ಯವಾಸನ

ಮಗ ಮರುತದೇವನ। ಪುತ್ರನು ವೃಷ್ಟಿಪರ್ಜನ್ಯನು ಅಭಿಮಾನಿ। ವೃತ್ರಾರಿ ರುದ್ರ ಗರುಡ ವಿದ್ಯುನಾಮಕ ಪ್ರಾಣಸಮಾನ ನಾಮದಿ। ತತ್ತಳಿಸುತಿರೆ ಸಮಾನ ನಾರಾಯ। ಣಾತ್ಮಕ ವೈಶ್ವಾನರನೆಂಬೊ ನಾಮದಿ। ತುತ್ತು ತೆಗೆದುಕೊಂಬ ಪರಮ ಪ್ರೀತಿಯಿಂದ। ಹತ್ತಾದ ಮನುಜಗೆ ಹತ್ತಿಲಿದ್ದರೇನು। ಉತ್ತಮ ಶ್ಲೋಕ ಶ್ರೀವಿಜಯ ವಿಠ್ಠಲರೇಯ। ಚಿತ್ತ ಶುದ್ಧವಾದ ಭಾರತಿ ಇವರೊಳು ಸೂತ್ರನಾಮಕಾ। ಎತ್ತಿದವರ ಕೈಯ್ಯಾ ಅಮೃತಕಲಶವೊ ॥೬॥

### ಝುಂಪಿತಾಳ

ಜಠರಾಗ್ನಿ ಬ್ರಹ್ಮಣೆ ಎಂಬಾಹುತಿ। ಸಠೆಯಲ್ಲ ಹೋಮಿಸು ಬ್ರಹ್ಮಋಷಿ ಅ। ಚ್ಚಟ ಅಗ್ನಿರ್ದೇವತಾ ದೈವಿ ತ್ರಿಪದಿ ಛಂದ। ಘಟದೊಳಗೆ ಇಪ್ಪ ಚೇತನಾನಂತರ್ಗತ। ಧಟರಮಾ ದಿಷ್ಠಾನದಲಿ ವಾಸಾ ನಿ। ಚ್ಚಟ ಆತ್ಮ ವೈಶ್ವಾನರ ಕೇವಲ ಸಾರಭೋಕ್ತಾ। ತಟಿತ್ಕೋಟ ಸಮಪ್ರಭ ವಿಜಯ ವಿಠ್ಠಲರೇಯ। ಪಠಿಸಿದವರ ಮನದ ಕುಮುದ ಚಂದ್ರಾ ॥೭॥

### ತ್ರಿವಿಡಿತಾಳ

ಅನಿರುದ್ಧಾತ್ಮಕ ವಿಶ್ವಾ ಅಂತರಾತುಮ ತೈಜ। ಸನು ಪ್ರದ್ಯುಮ್ನ ಪರಮಾತ್ಮ ಪ್ರಾಜ್ಞಾ। ನನು ಸಂಕರುಷಣ ಮೂರು ಯ್ಯೂವ್ಯಹರಾಗಿ। ಅನುದಿನ ಮಧ್ಯದಲಿ ಸೂಕ್ಷ್ಮ ಸ್ಥೂಲ। ವನು ಬಿಡದಲೆ ಇದೆ ಉಕ್ತ ಪ್ರಕಾರದಲಿ। ಎಣಿಸಿ ತಿಳಿದು ವೈಶಾನರನ ಉಪಾ। ಸನ ಮಾಡಲಾಗಿತ್ತ ನಾಡ್ಯಾಂತರ್ಗತರೂಪ। ಅನಿರುದ್ಧಾದಿ ವಿಶ್ವಾದೆಂಟು ಮೂರ್ತಿ। ಮಿನುಗುವ ಶತ ಚತುರ್ವಿಂಶತಿ ಮೂರ್ತಿಗಳು। ಅನ್ನಮಯಾದಿ ಕೃದ್ದೋಲ್ಕಾದಿಪಂಚಾ। ಸನತ್ಕುಮಾರ ಮೂರ್ತಿಸಾಸಿರ ಮೂರುತಿ। ಮುನಿವೇದ ವ್ಯಾಸ ಶಿಂಶುಮಾರ। ವನಚರಾದಿ ರೂಪ ಪರಾದಿ ಅಜಿತರೂಪಾ। ಣಣೆ ಇಲ್ಲದ ಮೂರುತಿ ಶಕ್ತ್ಯಾದಿ ಹನ್ನೊಂದು। ವನಜಾಂಡಾಕ್ಕಾಧಾರ ತ್ರಿಧಾಮದಲ್ಲಿ ವಾಸಾ। ಅನಿಮಿಷ ಪೆಸರಿನನಂತ ಮೂರುತಿ। ತೃಣಕಾಷ್ಟದಲ್ಲಿದ್ದ ತನ್ನಾಮಕ

ವರ್ನ। ಘನ ಅಣುವಿಲಿ ತತ್ ಪ್ರಮಾಣ ಮೂರುತಿ। ಮನುಜ ದನುಜರಲ್ಲಿ ತದಾಕಾರ ಮೂರುತಿ। ದಿನ ಕಾಲಮೃಗ ಪಕ್ಷಿತರು ಗಿರಿನಭವಾಯು। ಅನಲ ತೇಜ ಉದಕ ಭೂಮಿ ಶರಧಿನದಿ ದ್ವೀಪ। ಮನಸು ನಾನಾವಸ್ತು ಮಿಕ್ಕದಲ್ಲಿ। ಗುಣ ಪೂರ್ಣ ಅವಿಕಾರ ಅಖಂಡ ವ್ಯಾಪ್ತ। ಇನಿತು ತಿಳಿದು ಪಂಚರೂಪಾತ್ಮಕನಲ್ಲಿ। ನೆನೆದು ಚಿಂತನೆ ಮಾಡೀ ಏಕೀಭೂತಾ। ಮುನಿಗಳ ಸಮ್ಮತವಾಹದು ದೇವತೃಪ್ತನಾಹ। ಅನುಮಾನಗೊಳದಿರ ಮನದೊಳಗೆ। ಜನನ ದೂರ ನಮ್ಮ ವಿಜಯ ವಿಠ್ಠಲರೇಯಾ। ಘನದೋಷ ತಿಮಿರಕ್ಕೆ ಮಾರ್ತಂಡನು ಕಾಣೊ ॥೮॥

### ಧ್ರುವತಾಳ

ಇಂತು ಭೋಜನ ಮಾಡೆ ಅನ್ನದೋಷದಿಂದ। ಸಂತೋಷವಾಗುವರೊ ಆ ಚಂದ್ರ ಸೂರ್ಯರು। ಮಂತ್ರಿದಕ್ಷ ಕಾಮ ಇಂದ್ರ ಉಮಾದೇವಿ। ಕಂತು ಹರ ಶೇಷ ಗರುಡ ಇವರ ಸತಿಯರು। ಮುಂತೆ ಭಾರತಿ ವಾರುಣಿ ವಾಯು ವಾರಿಜಭವ। ಕಂತು ಜನನಿ ಲಕುಮಿ ಈ ಸುಜನರು ನಿ। ರಂತರ ಅನ್ನದಲ್ಲಿ ಅಭಿಮಾನಿಗಳು ಅಂತರ ಸಂಪ್ರದ ನೇಮಕ ವಿಷ್ಣು ಭಗ। ವಂತನು ಇರುತಿಪ್ಪ ಇದರ ವಿನವಾಗಿ। ಚಿಂತಿಸು ಭೋಕ್ತರಲ್ಲಿ ಸಂಕರುಷಣ ಪ್ರದ್ಯುಮ್ನ। ಶಾಂತಿರಮಣ ಅನಿರುದ್ಧ ನಾರಾಯಣ ಭೋಜ್ಯದ್ರವ್ಯದಲ್ಲಿ। ಇಂತಿವರ ಮಧ್ಯ ಅವಕಾಶ ಪ್ರದ ವಾಸುದೇವ। ತ್ಯಂತ ಭಯಂಕರ ನಾರಸಿಂಹ ಸರ್ವರಿಗೆ। ನಿಂತು ಆಪ್ಯಯನ ಜಲಸಮೂಹದಿಂದ। ಸಂತಸ ಕೊಡುವನು ಹೀಗೆಂದು ತಿಳಿದರೆ। ಯಂತ್ರವಾಹಕ ದೇವ ವಿಜಯ ವಿಠ್ಠಲರೇಯಾ। ಅಂತರಂಗದಲ್ಲಿ ಪೊಳೆವ ದುರಿತ ಕಳೆವ ॥೯॥

### ಅಟ್ಟತಾಳ

ಈ ತೆರದಲಿ ಭುಂಜಿಸಿದ ಮಾನವ ತನ್ನ। ಜಾತಿಯೊಳಗೆ ಅಧಿಕನಾಹನು। ತಾತೃಪ್ತಿಯಾಗಿ ಉಂಡ ಮಿಕ್ಕ ಎಂಜಲು। ದೂತ

ವರ್ನ। ಘನ ಅಣುವಿಲಿ ತತ್ ಪ್ರಮಾಣ ಮೂರುತಿ। ಮನುಜ ದನುಜರಲ್ಲಿ ತದಾಕಾರ ಮೂರುತಿ। ದಿನ ಕಾಲಮೃಗ ಪಕ್ಷಿತರು ಗಿರಿನಭವಾಯು। ಅನಲ ತೇಜ ಉದಕ ಭೂಮಿ ಶರಧಿನದಿ ದ್ವೀಪ। ಮನಸು ನಾನಾವಸ್ತು ಮಿಕ್ಕದಲ್ಲಿ। ಗುಣ ಪೂರ್ಣ ಅವಿಕಾರ ಅಖಂಡ ವ್ಯಾಪ್ತ। ಇನಿತು ತಿಳಿದು ಪಂಚರೂಪಾತ್ಮಕನಲ್ಲಿ। ನೆನೆದು ಚಿಂತನೆ ಮಾಡೀ ಏಕೀಭೂತಾ। ಮುನಿಗಳ ಸಮ್ಮತವಾಹದು ದೇವತೃಪ್ತನಾಹ। ಅನುಮಾನಗೊಳದಿರ ಮನದೊಳಗೆ। ಜನನ ದೂರ ನಮ್ಮ ವಿಜಯ ವಿಠ್ಠಲರೇಯಾ। ಘನದೋಷ ತಿಮಿರಕ್ಕೆ ಮಾರ್ತಾಂಡನು ಕಾಣೊ ॥೮॥

### ಧ್ರುವತಾಳ

ಇಂತು ಭೋಜನ ಮಾಡೆ ಅನ್ನದೋಷದಿಂದ। ಸಂತೋಷವಾಗುವರೊ ಆ ಚಂದ್ರ ಸೂರ್ಯರು। ಮಂತ್ರಿದಕ್ಷ ಕಾಮ ಇಂದ್ರ ಉಮಾದೇವಿ। ಕಂತು ಹರ ಶೇಷ ಗರುಡ ಇವರ ಸತಿಯರು। ಮುಂತೆ ಭಾರತಿ ವಾರುಣಿ ವಾಯು ವಾರಿಜಭವ। ಕಂತು ಜನನಿ ಲಕುಮಿ ಈ ಸುಜನರು ನಿ। ರಂತರ ಅನ್ನದಲ್ಲಿ ಅಭಿಮಾನಿಗಳು ಅಂತರ ಸಂಪ್ರದ ನೇಮಕ ವಿಷ್ಣು ಭಗ। ವಂತನು ಇರುತಿಪ್ಪ ಇದರ ವಿನವಾಗಿ। ಚಿಂತಿಸು ಭೋಕ್ತರಲ್ಲಿ ಸಂಕರುಷಣ ಪ್ರದ್ಯುಮ್ನ। ಶಾಂತಿರಮಣ ಅನಿರುದ್ಧ ನಾರಾಯಣ ಭೋಜ್ಯದ್ರವ್ಯದಲ್ಲಿ। ಇಂತಿವರ ಮಧ್ಯ ಅವಕಾಶ ಪ್ರದ ವಾಸುದೇವ। ತ್ವಂತ ಭಯಂಕರ ನಾರಸಿಂಹ ಸರ್ವರಿಗೆ। ನಿಂತು ಆಪ್ಯಯನ ಜಲಸಮೂಹದಿಂದ। ಸಂತಸ ಕೊಡುವನು ಹೀಗೆಂದು ತಿಳಿದರೆ। ಯಂತ್ರವಾಹಕ ದೇವ ವಿಜಯ ವಿಠ್ಠಲರೇಯಾ। ಅಂತರಂಗದಲ್ಲಿ ಪೊಳೆವ ದುರಿತ ಕಳೆವ ॥೯॥

### ಅಟ್ಟತಾಳ

ಈ ತೆರದಲಿ ಭುಂಜಿಸಿದ ಮಾನವ ತನ್ನ। ಜಾತಿಯೊಳಗೆ ಅಧಿಕನಾಹನು। ತಾತೃಪ್ತಿಯಾಗಿ ಉಂಡ ಮಿಕ್ಕ ಎಂಜಲು। ದೂತ

ಚಾಂಡಾಲ ಶ್ವಾನ ನಾನಾಯೋನಿ। ಜಾತರಿಗೆ ಕೊಡೆ ಅವರಲ್ಲಿ ಇದ್ದ। ಜಾತವೇದಸನು ತೃಪ್ತಿಯಾಗುವನಯ್ಯಾ। ಭೂತಳದೊಳಗೆ ತಿಳಿದವನೆ ಧನ್ಯನೊ। ಪಾತಕದವನಲ್ಲ ಯಾತನಿಗೆ ಸಲ್ಲಾ। ವಾತದೇವನ ದಯ ಪಡೆದು ಮಹಾ ಕೀ। ರುತಿವಂತ ನಾಹ ಜ್ಞಾನವಂತನಾಹ। ಪೂತುರೆ ಮುಕ್ತಿಲಿ ಸುಖ ಸಾಂದ್ರದೊಳಗಿಪ್ಪ। ಮಾತಿಗೆ ಗತಿ ಈವ ವಿಜಯ ವಿಠ್ಠಲರೇಯಾ। ನೂತನ ನೂತನ ಮಹಿಮೆ ತೋರುವಾ ॥೧೦॥

**ಆದಿತಾಳ**

ಕೇಳುವ ದುಂಡನ್ನ ಮೂರು ಭಾಗವಾಗಿ। ಸ್ಥೂಲಭಾಗ ಪೂರಿಷ ಮಧ್ಯಭಾಗವೇ ಮಾಂಸ। ಮೇಲು ಸೂಕ್ಷ್ಮ ಭಾಗ ಮನಸಿಗೆ ಉಪಾದಾನಾ। ವಾಲಯ ಉಂಟು ಮತ್ತೆ ಉದಕ ಮೂರು ಭಾಗ। ಸ್ಥೂಲ ಭಾಗವೆ ಮೂತ್ರ ರಕ್ತ ಮಧ್ಯಮಭಾಗವೆ। ಮೇಲು ಸೂಕ್ಷ್ಮಭಾಗ ವಾಕ್ಯಕ್ಕೆ ಉಪಾದಾನ। ಆಲಸವಿಲ್ಲದೆ ಘೃತ ಮೂರುಭಾಗವಾಗಿ। ಸ್ಥೂಲಭಾಗವೆ ಅಸ್ಥಿ ಮಧ್ಯಭಾಗವೆ ರೇತಸ್ಸು। ಮೇಲು ಸೂಕ್ಷ್ಮಭಾಗವೆ ಶ್ವಾಸೋಚ್ವಾಸಕ್ಕೆ ಕಾರಣಾ। ಏಳಲ ಮಾಡದೆ ಒಲಿಸಿ ಒಲಿಮೆಯಲ್ಲಿ। ಭೂಲೋಕದೊಳಗಿಂತು ತಿಳಿಯದೆ ಭೂಮಿಸುರನು। ಹೋಳಿಗೆ ಪರಮಾನ್ನ ಉಂಡರೆ ಫಲವಿಲ್ಲಾ। ಕೋಳಿ ಶೂಕರ ಕತ್ತೆ ನಾಯಿ ನರಿಗಳು। ಕಾಲವೆ ಕಳಿವವೆ ಜಾತಿ ಆಹರವ ತಿಂದು। ಪೇಳುವದೇನು ಇವನು ಅವಕ್ಕಿಂತ ಕನಿಷ್ಟ। ಕಾಲನ ಪಟ್ಟಣಕ್ಕೆ ಮೊದಲು ವೀಳ್ಯದವನು। ವೇಳಿ ವೇಳ್ಯಗೆ ಉಣಲು ಉಂಡವನಲ್ಲಾ। ಮೌಳಿಯ ತೂಗುತ್ತ ಸುರ ಸಮುದಾಯನೆರದು। ಪಾಲಿಸುತಿಪ್ಪರು ಪ್ರತಿದಿನದಲಿ ಬಂದು। ಪಾಲ ಸಾಗರ ಶಾಯಿ ವಿಜಯ ವಿಠ್ಠಲರೇಯ। ಆಳುವ ಜ್ಞಾನ ಭಕುತಿ ವೈರಾಗ್ಯವ ಕೊಟ್ಟು ॥೧೧॥

**ಜತೆ**

ಈ ಪರಿಯ ತಿಳಿದು ಯಾಗವ ಮಾಡಿದವರಿಗೆ ।
ತಾಪತ್ರಯಗಳಿಲ್ಲಾ ವಿಜಯ ವಿಠ್ಠಲ ಬಲ್ಲಾ ॥೧೨॥



## ಸುಳಾದಿ-೧೦೧

(ಪಂಚ ಪ್ರಾಣಾಗ್ನಿ ಹೋತ್ರ)

### ರಾಗ- ಭೈರವಿ ಧ್ರುವತಾಳ

ಶ್ರೀಗುರುವಿನ ನೆನದು ನಿರ್ಮಳನಾಗಿ ಸರ್ವ। ಯಾಗ ಭೋಕ್ತನಾದ ನಾರಾಯಣಗೆ। ಬಾಗಿ ಭಕುತಿಯಿಂದ ಚಿಂತಿಸಿ ಹೃದಯದಲ್ಲಿ। ಆಗಮ ಸ್ತುತಿಯಿಂದ ವಿಹಿತ ತಿಳಿದೂ। ಭೋಗಗಳೆಲ್ಲ ಸರ್ವಯಾಗಗಳೆಂದು ಲೇ। ಸಾಗಿ ಸಂಚರಿಪದು ಸತತವಾಗಿ। ಈ ಗಾತ್ರದಲ್ಲಿ ಪಂಚ ಪ್ರಾಣ ಯಜ್ಞಸ್ಥಳಗಳು। ಭಾಗಂಗಳುಂಟು ಒಂದೊಂದು ಕಡೆ। ಮೊಗದಲ್ಲಿ ಪ್ರಾಣನೆಂಬೊ ಹೋತ್ರನುವಾಸ। ವಾಗಿಪ್ಪಪಾನ ದೇಶೆಯಿಂದ ಉದ್ಗಾತ್ರ। ನಾಗಿಪ್ಪ ಯಜಮಾನ। ನಾಗಿಪ್ಪ ವ್ಯಾನನೆಂಬುವನು ನಾಭಿಯಲ್ಲಿ। ವೇಗ ಕಂಠದಲ್ಲಿ ಉದಾನನೆಂಬೋಧ್ವರಿಯ। ಪೂಗರ್ಭನಾಮಕ ಸಮಾನ ಸರ್ವಾಂಗದಲ್ಲಿ। ಈ ಗಣಿತ ದೈವರು ಪ್ರಾಣರೂಪಗಳಿಂದ। ಯಾಗದಧಿಕಾರಿಗಳ ದೇಹದೊಳಗೆ। ಯೋಗಿ ಜನನುತ ವಿಜಯ ವಿಠ್ಠಲರೇಯ। ಭಾಗಮಾಡಿಕೊಡುವ ಉಂಡ ಪದಾರ್ಥವ ॥೧॥

### ಮಟ್ಟತಾಳ

ವದನದಲ್ಲಿ ಆಹವನೀಯು ಎಂಬಾಗ್ನಿ। ಹೃದಯದಲ್ಲಿ ಅಗ್ನಿಗಾರ್ಹಸ್ಪತ್ಯನು। ಇದೆ ದಕ್ಷಿಣಾಗ್ನಿ ನಾಭಿಸ್ಥಾನದಲ್ಲಿ। ಮುದದಿ ಶರಭಿ ಅಗ್ನಿನಾಭಿ ದಕ್ಷಿಣಭಾಗ। ಅದರ ತರುವಾಯ ಅವ ಶರಭಿ ಎಂ। ಬುದು ಕಾಣೊ ನಾಭಿ ಉತ್ತರ ದಿಕ್ಕಿಲಿ। ಇದೆ ಇದೆ ಪಂಚಾಗ್ನಿ ಎನಿಸುವದು ಸಿದ್ಧಾ। ಪದುಮ ಲೋಚನ ನಮ್ಮ ವಿಜಯ ವಿಠಲಹರಿಯು। ಪದಗಳ ಭಜನೆಯಲೀ ಬಗೆಯನು ಮಾಡುವದು ॥೨॥

## ತ್ರಿವಿಡಿತಾಳ

ಶರೀರ ಎಂಬೊದೆ ಅರಣಿ ಎನಿಪ ತಾ ಹಂ। ಕಾರವೆಂಬೋ ಪಶುಯೂಪಸ್ತಂಭ ಪ್ರಣವ। ಈ ರೀತಿಯೆ ಉಂಟು ಯಜ್ಞ ಪತ್ನಿಯೆ ಬುದ್ಧಿ। ತೋರುವದು ಬೆನ್ನು ವೇದಿಕವು। ಈ ರೋಮ ರೋಮಗಳು ದರ್ಭೆ ಎಂದದಿ ಕಾಣೊ। ಸಾರಿ ಸಾರಿಗೆ ಮೆಲುವ ಜಿಹ್ವೆ ಸ್ರುಕ್‌ಶ್ರುವಗಳು। ಚಾರುಮನಸು ಯಜ್ಞ ಮಧ್ಯದಲಿ ಸಂಚಾರ। ಸಾರಿರೈ ಸುಜನರು ಇನಿತು ನೋಡಿ। ಕಾರಣ ಕರ್ತನು ವಿಜಯ ವಿಠ್ಠಲರೇಯ। ಸಾರ ಭೋಕ್ತನು ಪ್ರಾಣಯಜ್ಞದೊಳಗೆ ಇಪ್ಪಾ ॥೩॥

## ಅಟ್ಟತಾಳ

ಭೋಕ್ತ ಪುರುಷನ ಲಕ್ಷಣವನ್ನು ಕೇಳೊದು। ರಕ್ತ ಹರಿದ್ರಾ ವರ್ಣ ಕೂಡಿದ ಕಣ್ಣು। ಶಕ್ತ ಸರ್ವಕಾಲ ಜನನಾದಿ ವಿದೂರ। ಮುಕ್ತಿ ಪ್ರದಾತ ಪಾವಕ ಸದೃಶರೂಪ। ಭಕ್ತರು ಭಕ್ತಿಲಿ ಕೊಟ್ಟ ಪದಾರ್ಥವ। ವ್ಯಕ್ತದಲಿ ಕೈಕೊಂಡು ಮನ್ನಿಸುವನು। ಉಕ್ತ ಕ್ರಮದಿಂದ ಗುಣ ತೋರಿಸಿಕೊಂಬ ಭಕ್ತವತ್ಸಲ ಸಿರಿ ವಿಜಯ ವಿಠ್ಠಲರೇಯು। ಭುಕ್ತಿಯವನಲ್ಲ ಬಲು ಲೀಲೆಗಾರನು ॥೪॥

## ಆದಿತಾಳ

ಉತ್ತಮ ಜ್ಞಾನಿ ತಾನು ಹೋತ್ರಾದಿಗಳ ತಿಳಿದು। ಮತ್ತೆ ಪಂಚಾಗ್ನಿ ಉಳ್ಳ ಸ್ಥಾನವೆ ಪತಿಕರಿಸಿ। ತುತ್ತು ತುತ್ತಿಗೆ ಆತ್ಮ ಅಂತರಾತ್ಮ ರೂಪಗಳು ತುತ್ತಿಸಿ ಭೋಜನ ಮಾಡಲು ಬಲು ಪುಣ್ಯ। ಚಿತ್ತ ನಿರ್ಮಲ ಸರ್ವದೇವತಿಗಳು ಸ। ಮ್ಮತ ಮಾಡಿಕೊಂಬರು ಇವನ ಕುಲಕೋಟಿ ಉದ್ಧಾರ। ಚಿತ್ತದೊಡಿಯರಂಗ ವಿಜಯ ವಿಠ್ಠಲರೇಯ। ಅತ್ಯಂತ ಕೃಪೆಯಲ್ಲಿ ತೃಪ್ತಿಯ ಬಡಿಸುವ ॥೫॥

**ಜತೆ**

ಪ್ರಾಣಯಾಗವ ತಿಳಿದು ನಡೆದ ಜನರಿಗೆಲ್ಲ ।
ಪ್ರಾಣನಾಗಿಪ್ಪ ವಿಜಯ ವಿಠ್ಠಲ ನಿತ್ಯ ॥೬॥

❖ ❖ ❖

## ಸುಳಾದಿ-೧೦೨

(ಆತ್ಮ ಯಜ್ಞ)

**ರಾಗ- ಕಾಂಬೋದಿ ಧ್ರುವತಾಳ**

ಆತ್ಮ ಯಜ್ಞವ ಮಾಡು ಅನಾದಿಯಿಂದ ನಿನ್ನ। ಗಾತ್ರ ಪಾಲಣೆ ಎಂಬೊ ಗರ್ವವಳಿದೂ। ಚಿತ್ರ ಗುಣಗಳಿಂದ ವಿಭುಕ್ತವನ್ನೆ ತಿಳಿದು। ತತ್ತದಭಿಮಾನಿಗಳ ನೆನಿಸಿ ತುತಿಸೀ। ನಿತ್ಯದಲ್ಲಿ ನೆಸಗು। ಜ್ಞಾನ ಕರ್ಮೇಂದ್ರಿಯದಿಂದ। ಉತ್ತಮೋತ್ತಮ ಗ್ರಹಿಸು ರಸ ಪ್ರಭೇದಾ। ಸತ್ಯ ಅನಿತ್ಯವೆಂದು ಸಾರುತ ಸರ್ವತ್ರದಲ್ಲಿ। ಸತ್ವಾದಿ ಭಾಗವಿಡಿದು ಪ್ರಾಣಹೋತ್ರ। ಪ್ರತ್ಯೇಕಾಹುತಿಯಿಂದ ಪ್ರತಿ ಪ್ರತಿ ವಾರದಲ್ಲಿ। ತುತ್ತು ತುತ್ತುಗಳಲ್ಲಿ ಗೋವಿಂದ ಗೋವಿಂದ। ಚಿತ್ತಜನಯ್ಯ ಚಿನ್ಮಯ ಮೂರುತಿ। ಹತ್ತಾವತಾರ ಹರಿಯ ಮಗುಳೆ ಮಗುಳಿ ನಿನ್ನ ಚಿತ್ತದಲ್ಲಿ ಸ್ಮರಿಸು ಜ್ಞಾನದಿಂದ। ಹೃತ್ತಾಪ ಪರಿಹಾರ ಮುಖ್ಯ ಪ್ರಾಣಾಂತರ್ಗತ। ಸತ್ಯಭಾಮಾ ಪತಿಗೆ ಸಮರ್ಪಿಸೂ। ಇತ್ತ ಪ್ರಮಾಣಸಿದ್ಧ ವಿನಾ ಪ್ರಾಣ ಪ್ರತಿಕಾಂತು। ಉತ್ತರ ತೋರಿದರೆ ನೀರಜ ಸಂಭವ। ಸತ್ಯ ಸಂಕಲ್ಪ ಹರಿಪ್ರಾಣಿಗೆ ಅವಿರುದ್ಧ। ಮತ್ತೆ ಪ್ರಾಣನು ಶ್ರೀಶಗೆ ಅನಿರುದ್ಧಾ। ಅವಿರುದ್ಧ ಇತ್ತಂಡವಾಗಿ ಕಾರ್ಯಮಾಡಿ ಮಾಡಿಸುವರು। ಹತ್ತುನಾಲ್ಕು ಭವನ ಬಾಹ್ಯಾಂತರ। ಮೃತ್ಯು ನಾನಾ ವಾನಗೆ ಶ್ರೀಬ್ರಹ್ಮರುದ್ರಾದ್ಯರ। ಉತ್ತಮರೆಂದು ಇವರೆ ಸ್ವಾತಂತ್ರರೊ। ಈ ತೆರದಲ್ಲಿ ತಿಳಿದು ಇವರಧಿಷ್ಠಾನದಲ್ಲಿ। ಉತ್ತಮ ಶ್ಲೋಕ ಹರಿಯ ಚಿಂತಿಸಾದೆ। ಭಕ್ತಿಯ

ಮಾಡಿ ಭಜಿಸಿ ನೈವೇದ್ಯ ಇಟ್ಟು ಅದೆ। ತುತ್ತು ತೆಗೆದುಕೊಂಡರೆ ವ್ಯರ್ಥಾ ಅನರ್ಥಾ ಮೊತ್ತವಲ್ಲದೆ ಲೇಶ ಸುಖವಿಲ್ಲ ಎಂದಿಗೂ। ಉಕ್ತಿ ಉಂಟು ಶ್ರೀಬ್ರಹ್ಮ ರುದ್ರೇಂದ್ರಾದಿ ಚಂಡಿಕಾ। ಶಕ್ತ್ಯಾದಿ ಕಾಮ ಮಹಾಕ್ಲೇಶಕ್ಕೆ ಬೀಜಾ। ವರ್ತಮಾನ ಕಾಲ ಇಂತು ತಿಳಿದು ಸರು। ವೋತ್ತಮ ಜಾರಚೋರ ಶ್ರೀಕೃಷ್ಣನ್ನ। ಹೊತ್ತು ಹೊತ್ತಿಗೆ ಸರ್ವ ಜಡಜೀವರಲ್ಲಿ ನೆನದು। ಮುಕ್ತಿ ಸೂರೇಗೊಳ್ಳೊ ಭೋಗದಿಂದ। ಭೃತ್ಯವತ್ಸಲ ನಮ್ಮ ವಿಜಯ ವಿಠ್ಠಲ ಪೂರ್ಣ। ಆತ್ಮಾದಿ ಗುಣೋಪಾಸಾ ರಸನಾಗ್ರದಲ್ಲಿ ಸವಿವಾ ॥೧॥

## ಮಟ್ಟತಾಳ

ಪ್ರತಿಮೆ ಸಾಲಿಗ್ರಾಮ ಪಾವಕ ಬಲಿ ಹರಣ। ಕ್ಷಿತಿಸುರ ಮೊದಲಾದ ಚೇತನದಲಿ ಸಂ। ಗತಿಯನು ಬಿಡದೆ ದೇವತೆಗಳ ಸಹವಾಗಿ। ಮತಿಯಲ್ಲಿ ಪೊಗಳಿ ಒಂದೊಂದದಧಿಷ್ಠಾನ। ಮತದವರೊಳಗಿಪ್ಪ ಹರಿರೂಪ ನೆನದು। ಹಿತ ಪದಾರ್ಥಗಳು ಓರಿದಾಗಿ ಸವು। ರ್ಪಿತವೆಂದು ಕೊಟ್ಟು ತೃಪ್ತಿಯಾಗಲಿಬೇಕು। ಕೃತ ಭುಜಗಣದವರ ಬಹು ರೂಪಗಳಿಂದ। ತತು ಸ್ಥಾನದಲಿ ವಾಸವಾಗಿಪ್ಪರಯ್ಯಾ। ಅತಿಶಯವೇ ಕೇಳಿ ಅಂಶಿ ಅಂಶಕೆ ಪರಿ। ಮಿತ ಉಂಟು ಶಕ್ತಿ ಗುಣ ಕರ್ಮಗಳಿಂದು। ಪ್ರತಿಮೆಯಲ್ಲಿ ಇದ್ದ ಸುರರಿಗೆ ಭಿನ್ನರಸ। ಇತರ ಸ್ಥಾನದಲ್ಲಿ ತೆಗದುಕೊಂಬ ಶಕ್ತಿ। ಸತತ ಸಲ್ಲದು ಕಾಣೊ ಅಂಶಿ ಒಂದಾದರು। ಪ್ರಥಕು ಪಥುಕು ಇಪ್ಪ ಅಂಶಾಂಶವುಭೇದ। ಶತಮೋದ ವಾಯುವಾಣಿ ದೇವಿ ಭಾ। ರತಿ ಈ ನಾಲ್ಕು ಜನ ಅಂಶಿ ಅಂಶಕ್ಕೆ ಸಮ। ಪತಿತ ಪಾವನ ಲಕುಮಿ ನಾರಾಯಣನು ವ್ಯಾ। ಪುತನಾಗಿಇಪ್ಪ ಎಲ್ಲರೊಳಗೆನಿಂದು। ತತುರೂಪದಲ್ಲಿ ತತು ರಸ ಭೇದ। ಕೃತಿಯನು ಕೈಕೊಂಬ ಸರ್ವ ರೂಪಾತ್ಮಕನೋ। ಅತುಳ ಪರಾಕ್ರಮನೊ ಅದಿಷ್ಠಾನ ಭೇದದಿಂದ। ಪ್ರತಿಕೂಲವಾಗದಂತೆ ಆರೋಗಣೆಕೊಂಬಾ। ಚ್ಯುತ ದೂರ ಹರಿ ನಿಜ ಸಂಕಲ್ಪ ಇ। ನಿತು ಮಾಡಿಪ್ಪ ಗಡಾ ಭೇದಕಾರ್ಯವೆಂದು। ಚತುರಾತ್ಮಕ ನಮ್ಮ ವಿಜಯ ವಿಠ್ಠಲರೇಯಾ। ಯತಿಗಳ ಕೈಯಿಂದ ಇಂತು ಪೂಜಿಯಗೊಂಬಾ ॥೨॥

## ರೂಪಕತಾಳ

ಸಾಲಿಗ್ರಾಮಗಳಲ್ಲಿ ಪರ್ವತ ತನುಗಳು। ಶಿಲಾ ಪ್ರತಿಮೆಯಲ್ಲಿ ಪ್ರತೀಕಾದಿ ಮಾನಿಗಳು। ಲೀಲೆಯಿಂದ ವೈಶ್ವದೇವಾಹುತಿಯಲ್ಲಿ। ಕಾಲ ಕಾಲ ಕಾಲಕ್ಕೆ ಯಾಗಾಭಿಮಾನಿಗಳುಂಟು। ವಾಲಯಾ ಬಲಿಹರಣದಲ್ಲಿ। ದಿಙ್ಮಾನಿಗಳು। ಅಲ್ಲಿ ಸೂ ಭೂದೇವ ಮಿಕ್ಕಾದವರಲ್ಲಿ। ಮೇಲಾಗಿ ತತ್ತ ದೇಹಾಭಿಮತದವರೆನ್ನು। ಗಾಲಾ ಹಾಕಿದಂತೆ ಮನಸನು ಹರಹೀ। ವಿಶಾಲ ಮತಿಯಿಂದ ಎಲ್ಲರನ ಕೂಡಿಟ್ಟು। ವಾಲಗ ಮಾಳ್ಪದು ವಿಶಿಷ್ಠಾಮಾನಿಗಳು। ಜಾಲಾ ಪೂರ್ವೋತ್ತರ ಅಧಿಕರಧಿಕರವೆಂದು। ಸಾಲಿಗ್ರಾಮವೆ ವಿಡಿದು ಭೂಸುರ ಪರಿಯಂತ। ಏಳಲವಲ್ಲವೊ ನಯನ ಘ್ರಾಣವಾಕು। ನಾಲಿಗಿಯಿಂದಲಿ ಭುಂಜಿಸುವ ಕಪಿಲ ಶುಂ। ಡಾಲಾರಿಪುವದನಾ ಭಾರ್ಗವ ಕೂರ್ಮನಾಮದಲಿ। ಕೇಳಿ ಪ್ರಾಕೃತ ರಸದೊಳಗೆ ವಿವರ ಭಾಗಾ। ಸ್ಥೂಲ ಸೂಕ್ಷ್ಮ ರೂಪದಲ್ಲಿ ಪೊಂದಿಪ್ಪವೊ। ಮೂಲ ಪ್ರಕೃತಿ ಕೂಡ ಸಿದ್ಧವಾಗಿದೆ ಹಿ। ಯಾಳಿ ಭೋಗ ದ್ರವ್ಯ ಚಿಂತನೆ ಅವಧಾರಾ। ಬೀಳುಕೊಡುವ ಕಷ್ಟಾ ಕವಳ ಎತ್ತುವಾ ಇಂತು। ನಾಲಕು ಬಗೆ ರೂಪ ಭೋಜನವೆನಿಪದು। ಪಾಲಸಾಗರ ಶಾಯಿ ದೇವಾಂಶರ ಸಹಿತ। ಬಾಲಕ್ರೀಡೆಯಾಡುವ ಉಂಬಾ ಉಣಿಸಿಕೊಳುತಾ। ಶ್ರೀಲೋಲ ವಿಜಯ ವಿಠ್ಠಲರೇಯ ನವನೀತ। ಪಾಲು ಮೊಸರು ಮೆದ್ದಾ ಭಕ್ತರಿಗೊಲಿದೂ ॥೩॥

## ಝಂಪಿತಾಳ

ಚರವು ಶುಚಿ ರುಚಿ ಮೃದು ರಸ ಶುಭ್ರಶುದ್ಧ ಮನೋ। ಹರ ಮದಜಾತಿ ಕ್ರೀಯಾಭಾವ ಸಂಸರ್ಗಗುಣ। ಪರಿಕಾಲ ದೃಷ್ಟ ವರ್ಜಿತ ಸು ಪಕ್ವ। ಪರಮ ಸೂಕ್ಷ್ಮ ಸುಗಂಧ ನೂತನ ವಿಚಾರ ದ್ರವ। ಪರಿಮಿತ ಒಂದೊಂದೆ ಶಿತ ಸಂಭಾರ ಚಿ। ತ್ತರವಾಗಿಯಿದ್ದ ಹಿತ ಕ್ರಯ ಶುದ್ಧಿ ಅವಿಲಂಬ। ತರತಮ್ಯದಿಂದಲಿ ದೇಶಾದಿ ಭೇದ ಪ್ರ ಕರಣವನೆ ತಿಳಿದು ಸಮಸ್ತ ಪದಾರ್ಥವನು। ಶರಣ ನಾನೆಂದು ಮಹಾ ಭಕ್ತಿರಸದಿಂದ ಶ್ರೀ।

ಹರಿ ದೇವತಿಗಳಿಗೆ ಅರ್ಪಿಸಬೇಕು। ವರಗಂಡಿಕಿ ಶಿಲಿ ಅಗ್ನಿಮುಖ ಬಲಿಹರಣ। ಧರಣಿ ಸುರರಿಗೆ ಉಣಿಸಿದ ಪುಣ್ಯಾದಿ। ನಿರುತ ಸತ್ಕರ್ಮ ಪಥ ಸ್ವರ್ಗದಲ್ಲಿ ಸುಖಭೋಗ। ಮರೆಯದಲೆ ಲೋಕಪಾಲರ ಪಾಲಣೆ। ಪರಿಶುದ್ಧಿ ದೇಹೇಂದ್ರಿಯಂಗಳು ಮನಸು ವಿ। ಸ್ತರ ಜ್ಞಾನ ಪುಟ್ಟುವದು ಇದರಿಂದಲೀ। ಗುರು ಹಿರಿಯರ ಸೇವೆ ದೇವತಾ ಪೂಜೆ ನಿಂ। ದಿರದೆ ಪ್ರಾವರ್ತಕವು ಪರಮಾ। ಸರಸ ಜಿಜ್ಞಾಸ ಯೋಗ್ಯತ ಸಾಧನ ವೃತ್ತಿ। ಗುರು ಮುಖದಿಂದ ಅಪರೋಕ್ಷ್ಯ ವ್ಯಕ್ತಿ। ಚರಮ ಶರೀರ ಲಬ್ದವಾಗಿ ಸನ್ಮೂರ್ತಿಯಾ। ಕರುಣವಾಗುವದು ಭವ ನಿವಾರಕಾ। ಭರದಿಂದಲೀಪರಿ ಭಗವದ್ಧಾರಧನೆ। ಪರಿಚಿಂತಿಸು ಅಧಿಷ್ಠಾನ ಮುಖದಿಂ। ಎರಡು ಬಗೆ ಉಂಟು ವಾಸನಮಯಾ ಪ್ರತ್ಯಕ್ಷ। ಅರಿದು ಕೊಡಲಿಬೇಕು ಅನ್ನೋದಕಾ॥೪॥



## ಸುಳಾದಿ-೧೦೩

(ಸರ್ವಸಾರ ಭೋಕ್ತ)

### ರಾಗ-ಪಂತರಾವಳಿ ಧ್ರುವತಾಳ

ಪುಣ್ಯವೆ ಪೋಯಿತೆಂಬಾ ನುಡಿಸಲ್ಲಾ ಎಲೊನಲ್ಲಾ। ಪುಣ್ಯವೆಂಬೊದೊ ಎಂತೊ ತಿಳಿಯಾದಯ್ಯಾ। ಪುಣ್ಯ ಪೋಗುವದೆಂತೊ ಆವಾಗ। ಕಣ್ಣಿಗೆ ಕಾಣಿಸದು ಶಬ್ದ ಮಾತ್ರ। ಇನ್ನಿತು ಪುಣ್ಯವೆಲ್ಲ ಜ್ಞಾನ ಕಾರ್ಯವು ಮತ್ತೆ। ಘನ್ನ ಪಾಪಗಳು ಅಜ್ಞಾನ ಕಾಯಾ। ಅನಂತ ಕಾಲಕ್ಕೆ ದ್ವಿವಿಧ ರೂಪಕೆ ನೋಡೆ। ಉನ್ನತವಾಗಿ ನೀನೆ ಸರ್ವದಲ್ಲಿ। ಬನ್ನ ಬಡಿಸುವ ಅಜ್ಞಾನ ಜ್ಞಾನಕ್ಕೆ ಸಂ। ಪನ್ನಾ ನಿರ್ದೋಷ ಮೂರ್ತಿ ನೀನೆ ವಿಷಯಾ। ಇನ್ನಿತಾಗಿರಲಿಕ್ಕೆ ಮಾಡಿದಾ ಪುಣ್ಯ। ಮುನ್ನೆ ಪೋಯಿತೆಂಬ ವಿನೋದವೆ। ಇನ್ನು ನಾನೆ ನೆಂಬೆ ಈ ಮಾತಿಗೆ ಪ್ರಾ। ಸನ್ನ ವದನಾಂಭೋಜ ವಿಮಲ

ನಯನಾ। ಅನ್ಯ ಜನರ ಯಿಂದ (ರಿಂದ) ಪಾಪ ಪುಣ್ಯವೆ ತಂದು। ಉಣ್ಣಿಪದಾಗುವದೆ ವಿಚಾರಿಸೆ। ಜನ್ಮಾದಿಗಳು ನಿನ್ನ ಅಧೀನವಾಗಿರಲೂ। ಇನ್ನೇನೊ ಇನ್ನೇನೊ ಮುಂದಣ ವಾರ್ತಿ। ಎನ್ನ ಮೊದಲು ಮಾಡಿ ಸರ್ವ ಜೀವರ ಮಧ್ಯ। ಚಿನ್ಮಯ ರೂಪದಿಂದ ಪ್ರವೇಶಿಸಿ। ಚನ್ನಾಗಿ ಅವರವರ ಸ್ವಭಾವದಂತೆ ಕಾ। ರುಣ್ಯ ದಿಂದಲಿ ನೀನೆ ಚೇಷ್ಟಿಗಳ। ಬಣ್ಣ ಬಣ್ಣದಲಿಂದ ಮಾಡಿಸುವನೆಂದು। ಅನಂತ ವೇದಗಳು ತುತಿಪವಲ್ಲೊ। ಬಿನ್ನಣದಲಿ ಅಂದು ಭೀಷ್ಮನಿಂದಾದಲಿ ಧರ್ಮರಾಯಾ। ಎನ್ನ ಒಡಂಬಡಿಸಿದೆ ಪ್ರಶ್ನೋತ್ತರಾ। ಬಣ್ಣಿಸ ಬಲ್ಲೆನೆ ನಿನ್ನ ಲೀಲೆಗೆ ಕೆಲವ। ರನ್ನ ಗೆಲಿಸುವೆ ಕೆಲವರ ಸೋಲಿಸಿ। ನಿನ್ನೊಳು ನೀನೆ ಕ್ರಿಡೆಯಾಡುವೆ ಎಲ್ಲ ಕಾಲ। ಮನುಜ ನಾನಾ ವಿಧರೂಪ ಧರಿಸೀ। ಅನ್ನ ಗೋಸುಗ ತಿರುಗಬೇಕಾದರೆ ರಾ। ಜನ ತನಕ ಪೋಗಿ ಕೇಳಲ್ಯಾಕೆ। ಮನೆ ಮನೆ ಬೇಡಿಕೊಂಡು ಪೊಟ್ಟಿಯ ಪೊರೆದು। ಧನ್ಯನಾದೆನೆಂದು ಇರಬಾರದೆ। ನಿನ್ನ ಸ್ಮರಣೆ ಮಾಡಿ ನಿನ್ನಾಧೀನವೆಂದೂ। ಬಿನ್ನಾಹ ಮಾಡಿಕೊಳಲ್ಯಾಕೆ ಜೀಯಾ। ಪುಣ್ಯ ಶ್ಲೋಕ ಮೂರ್ತಿ ವಿಜಯ ವಿಠ್ಠಲರೇಯಾ। ಮನ್ನಿಸು ಮುದದಿಂದ ಅಪರಾಧವೆಣಿಸಾದೆ ॥೧॥

### ಮಟ್ಟತಾಳ

ತೃಣ ಔಷಧ ಗುಲ್ಮ ವನಸ್ಪತಿ ಮೊದಲಾದ। ಇನಿತು ಪದಾರ್ಥದಲ್ಲಿ ತತ್ವೇಶ್ವರ ಒಡನೆ। ವನಿತೆ ಸಂಗಡ ಬಿಡದೆ ವಾಸವಾಗಿ ಇದ್ದು। ದಿನ ದಿನಕೆ ಅದರ ಕಾರ್ಯ ನಡಿಸಿ ಕೊಡುವಾ। ಗುಣ ನಿಯಾಮಕ ಸದ್ಗುಣಗಣ ಸಂಪೂರ್ಣ। ವನಧಿ ಪಾಲಕ ಹರಿ ವಿಜಯ ವಿಠ್ಠಲರೇಯಾ। ಜನರ ಕುಣಿಸಿ ಜಗವ ಜೋಕೆ ಮಾಡುವಾ ದೈವಾ ॥೨॥

### ತ್ರಿವಿಡಿತಾಳ

ನೀನುಂಡು ಮಿಕ್ಕದ್ದು ನಿನ್ನೊಡನೆ ಉಣುತಿಪ್ಪ। ಮಾನವ ವೈಷ್ಣವಗೆ ವಿಕಾರವೆ। ಮಾನುಷ್ಯನ್ನ ದೋಷವೆಂದಿಗಾದರು ಇಲ್ಲಾ। ಜ್ಞಾನಕ್ಕೆ ತಿರೋ

ಹಿತವಾಗದಿದಕೋ। ಆನಂದ ಚಿತ್ತಕೆ ಆವಾಗ ಯಿದ್ದ ಅ। ಜ್ಞಾನ ಓಡುವ ದಯ್ಯಾ ಸಾರೆ ಇರದೂ। ಧ್ಯಾದ ಪುಟ್ಟಿಸಿಕೊಟ್ಟು ಹರಿಯ ಪೂಜಿಸುವ ವಿ। ಜ್ಞಾನ ತಂದೀವದೂ ಕೊಂಡಾಡಲೂ। ಪ್ರಾಣೇಂದ್ರಿಯಂಗಳ ತೃಪ್ತಿ ಸಂತೋಷ ಮನಸಿಗೆ। ಕಾಣಬಾರದ ಫಲವು ಪ್ರಾಪ್ತಿಯುಂಟು। ಇನಿತು ಇರಲಿಕ್ಕೆ ಜಡದಿಂದ ತೃಪ್ತಿಯಿಂದು। ನಾನಾಭವಣಿ ಬಡುವ ಮೂರ್ಖನವನೋ। ದೀನ ವೃತ್ತಿಯಿಂದ ಇಂತು ಭೋಜನ ಗೈಯೆ। ಹಾನಿ ಎಂಬೊದೆಲ್ಲೊ ಪುಣ್ಯಗತಿಗೆ। ಮಾಣದೆ ಬಿನ್ನೈಪೆ ತನ್ನ ಸಹಿತ ಸರ್ವ। ಪ್ರಾಣಿಗಳು ಉಂಬವಿಹಿತವೆಲ್ಲಾ। ನೀನೆ ಇತ್ತದ್ದು ಎಂದು ನೀನೆ ಉಂಡವನೆಂದು। ಮಾನವ ನೀಪರಿ ತಿಳಿದನಾಗೆ। ಏನೆಂಬೆ ಸಂಸ್ಕಾರ ಪುಟ್ಟಿದ ಮಾತುರದಿಂದ। ಮೇಣು ಸತ್ಪುಣ್ಯವು ಬರುವದೂ। ಭಾನು ವಂದೆಸೆಯಲ್ಲಿ ಉದಯವಾದ ಮೇಲೆ। ನಾನಾ ಠಾವಿಗೆ ರವಿಯ ಉದಿಯವ್ಯಾಕೆ। ಜ್ಞಾನಿಯಾದವ ನೋಡು ನಿಶ್ಚಯದಲಿ ತನ್ನ। ಮಾನಸದಲಿ ತಿಳಿದು ಜಪಿಸಬೇಕೂ। ಈ ನುಡಿಯಂತೆ ಸಮಸ್ಥರಲ್ಲಿ ಸಿದ್ಧಾ। ಏಣಿಸಿ ತನ್ನಂತೆ ಗುಣಿಸುವರೂ। ದಾನವಾಂತಕ ರಂಗ ನಾನುಂಡ ಅನ್ನಕೆ। ಹೀನಾಯಾವಾಹದೇನೊ ಸೋಜಿಗವೊ। ದಾನಿಗಳರಸ ಕಿರಿ ವಿಜಯವಿಠ್ಠಲ ನಿ। ದಾನಿಸಲು ವಸ್ತ ನೀನಿಲ್ಲದೊಂದಿಲ್ಲಾ ॥೩॥

**ಅಟ್ಟತಾಳ**

ಮೊದಲು ನಮ್ಮವರಿಗೆ ಬಾಲಕನಾಗಿ ಪೋಗಿ। ಉದರಿಸಿದ ಮಾತಿಗೆ ನಗುತಲಿ ಅಂದೂ। ಪದವಿಯ ಒಲಿದಿತ್ತೆ ನಾನಾ ಪ್ರಕಾರದಿ। ಅದು ಅಂಗಿ ಕರಿಸದೆ ತಿರುಗಿ ಬಿಡಲು ನೀನೆ। ಮುದದಿಂದ ಇತ್ತದ್ದು ವೊದಗಿ ಭೋಗಿ। ಸದೆ ಪೋಗದು ಎಂಬೊ ಕಥೆಯಿಂದ। ವಿಧೆಯನ್ನೆ ತಿಳಿದು ಮತ್ತಾ ಭಾಗ್ಯ ಉಣಿಪನೆ। ಪದೊ ಪದಿಗೆ ಎನ್ನ ಪುಣ್ಯದಿಂದಾಗೊದೆ। ಪದುಮ ನಾಭ ನಿನ್ನ ಸಂಕಲ್ಪಕೆ ಎಂದು। ಎದುರಿಲ್ಲ ಮಹಾ ಜ್ಞಾನಿಗಳ ನಿಷ್ಠಾ ಪುಣ್ಯ। ನಿಧಿಯಾಗಿ ಬಂದು। ಸಾಹಾಯವಾಗಿದೆ

ಕೃಪಾ। ನಿಧಿಯೆ ನಿನ್ನ ಭಕ್ತರ ದಯದಿಂದ। ಬದಿಯಲ್ಲಿಪ್ಪದು ಕೆಲಸಾರದೆ ಇದಕ್ಕೆ। ತ್ರಿದಶರಭಿಮಾನಿಗಳಾಗಿ ಇಪ್ಪರು। ಕ್ಷುದದಿ ಗೋಸುಗ ತುತ್ತುಮೆದ್ದ ಒಂದರಲಿ। ತದತದ ರಸಗಳು ಏಸಕ್ಕು ಮೇಲುವಾಗ। ವದನದೊಳಗೆ ವದನ ಪೊಂದಿಕೊಂಡಿಪ್ಪದೂ। ಮಧು ರನ್ನದಲಿ ನಾರಾಯಣನಿರುದ್ಧ। ಇದರಂತೆ ನಿನ್ನ ಮೂರ್ತಿಗಳು ಸರ್ವವು ಉಂಟು। ಉದಯಾರ್ಕ ಸನ್ನಿಭ ವಿಜಯ ವಿಠ್ಠಲ ನೀನೆ। ಅಧಿಷ್ಠಾನದಲಿ ನಿಂದು ಮಾಡಿಸಲು ದೋಷವಾಹದೆ ॥೪॥

**ಆದಿತಾಳ**

ಸ್ವ ಮೂರ್ತಿಗಣ ಮಧ್ಯಗವೆಂಬೊ ವಾಕ್ಯ ತಿಳಿದು। ಅಮರ ಸಂತತಿ ಎಲ್ಲ ಪರಿವಾರ ಎಂದು ತಿಳಿದು। ಸಮ ಬುದ್ಧಿಯಲಿ ತಾನು ತರತಮ್ಯವನುಸರಿಸಿ। ಕ್ರಮದಿಂದ ನೋಡುತ್ತ ಆಧ್ಯಾತ್ಮ ನಿಷ್ಠನಾಗಿ। ಶಮೆ ದಮೆ ಗುಣದಲಿ ಆವಾಗಲಿದ್ದು ಅಜ್ಞ। ಮಮತೆಯ ತೊರೆದು ಮಹಾಭಕುತಿಯಿಂದ ನಲಿದು। ಅಮಿತ ಪದಾರ್ಥಂಗಳ ಭುಂಜಿಸಿದ ಮನುಜಂಗೆ। ಅಮೃತವಾಗಿಪ್ಪದು ಅಪೇಕ್ಷಾರಹಿತನೊ। ಅಮೃತ ಸಿದ್ಧಿಸುವದು ಇದಕೆ ಸಂಶಯ ಸಲ್ಲಾ। ಕ್ಷಮಾ ಸಂಬಂಧವೊಂದು ಸಾಕ್ಷಾದ್ಭೂತವೊಂದೂ। ರಮಣೀಯವಾಗಿದ್ದ ನಾಲ್ಕು ವಿಧ ರಸಂಗಳು। ಸುಮನೋಹರದಿಂದ ಬಗೆ ಬಗೆಯಲಿ ನಿನಗೆ। ಸಮರ್ಪಣೆ ಮಾಡುವಲ್ಲಿ ಚಾತುರ್ಯವಂತನಾಗಿ। ಕುಮತಿಯ ವದ್ದು ಕಳದು ಸೇವಿಸಿ ದವ ಧನ್ಯ। ಯಮನ ಬಾಧೆಯೆ ಇಲ್ಲ ಪುಣ್ಯವೆ ಅಭಿವೃದ್ಧಿ। ಪ್ರಮೇಯ ತಿಳಿದ ನರಗೆ ಆವದೊ ದುಷ್ಕರ್ಮ। ರಮೆಯರಸನೆ ಕೇಳು ಮನೊ ವಾಚಕಾಯದಲ್ಲಿ। ನಮಿಸುವೆ ಇಂಥಾದೆ ಬಯಸಿ ಇದ್ದರೆ ಎನಗೆ। ಭ್ರಮೆಗೊಳಿಸುವ ಪಾಪ ಪ್ರಾಪ್ತವಾಗೊದೆ ನಿಜವು। ಉಮೆಯರಸನ್ನ ಪ್ರೀಯ ನೀನೆ ಅನುಗ್ರಹ ಮಾಡಿ। ಅಮರಿಸಿ ಕೊಟ್ಟದ್ದು ಭುಂಜಿಸುತಿಪ್ಪೆನೊ। ಬುಧ ವಂದ್ಯ ವಿಜಯ ವಿಠ್ಠಲರೇಯಾ ನೀ ಎನ್ನ। ಹೃದಯದೊಳಗೆ ಇದ್ದು ಸರ್ವ ವ್ಯಾಪಾರ ಮಾಳ್ಪೆ ॥೫॥

**ಜತೆ**

ಸತ್ಯ ಸಂಕಲ್ಪ ನೀನೆ ಮಾಡಿದ ಮರಿಯಾದೆ ।
ನಿತ್ಯ ಅನುಭವಿಪೆನೊ ವಿಜಯ ವಿಠ್ಠಲ ತಂದೆ ॥೬॥

❖ ❖ ❖

## ಸುಳಾದಿ-೧೦೪

(ಸಪ್ತಾನ್ನ ಉಪಾಸನೆ)

**ರಾಗ- ಮಾರವಾ ಧ್ರುವತಾಳ**

ಅಪ್ರತಿಹತ ದ್ರವ್ಯಗತವಾಗುವದಕ್ಕೆ ಬಾ। ಲ ಪ್ರಾಯ ವೃದ್ಧನಾಗಿ ಬಲು ಜನ್ಮವ। ವಿಪ್ರವಾಸನಾಗಿ ಯಾತ್ರಿ ತೀರ್ಥವಾಚರಿಸಿ। ಕ್ಷಿಪ್ತ ಗತಿಯಿಂದ ನಾನಾಯಾಗ ಯೋಗ। ವಿಪ್ರರೊಡನೆ ರಚಿಸಿ ಅನೇಕ ದಾನಂಗಳ। ದ್ಯುಪೃಥಿವಿ ಪೊಗಳುವಂತೆ ಮಾಡಿದರೂ। ಅಪ್ರಧಾನವಲ್ಲದೆ ಕರ್ಮದ ಸ್ವಾತಂತ್ರ। ಅಪ್ರಭುದ್ಧರಿಗೆ ಇದು ಮೆಚ್ಚು ಕಾಣೊ। ಅಪ್ರೀಯವಾಗುವದು ತಾತ್ವಿಕರಿಂದ ಹರಿಗೆ। ಅಪ್ರೀಯನಾಗುವ ಅಲ್ಪಪುಣ್ಯ। ಅಪ್ರಮೋದದಿಂದ ಉಂಡು ತೀರಿಸಿ ನಾ। ನಾ ಪ್ರಕಾರ ಧೇಹವ ಧರಿಸುವರು। ಈ ಪ್ರಕರಣ ಬಿಟ್ಟು ಜ್ಞಾನವ ಸಂಪಾದಿಸಿ। ಅಪ್ರಮೇಯ ಹರಿಯ ರೂಪಂಗಳ। ಸಪ್ರಮಾಣದಲ್ಲಿ ತಿಳಿದು ಕೊಂಡಾಡಿ ನಿತ್ಯ। ಸ್ವಪ್ರಕಾಶ ಗುಣದಿಂದ ಧ್ಯಾನಗೈದು। ಅಪ್ರಯಾಸ ಚಿತ್ತದಲಿ। ಅನಂತ ಕಲ್ಪಕ್ಕೆ ನೀ। ಸು ಪ್ರೀತಿ ಬಡಿಸು ಲಕುಮಿ ನಾರಾಯಣ। ಸುಪ್ರಸನ್ನನಾಗುವ ಪ್ರಸಾದತ್ರಯವಿತ್ತು। ಕ್ಷಿಪ್ರದಿಂದಲಿ ಅನುಗ್ರಹವ ಮಾಡುವ। ಶ್ರೀ ಪ್ರಕೃತಿನಾಥಾ ವಿಜಯ ವಿಠ್ಠಲರೇಯ। ನೀ ಪ್ರೇರಕ ನೆನೆ ಭವಸಾಗರ ದಾಟಿಸುವಾ ॥೧॥

**ಮಟ್ಟತಾಳ**

ತಿರೋಹಿತ ಅತಿ ರೋಹಿತ ವಿಭೂತಿ ರೂಪಗಳು। ಪರಿಪರಿ ವಿಧ ಉಂಟು ಒಂದನಂತವಾಗಿ। ಸುರ ನರೋರುಗಳುಳಿದ ತರು ಮಿಗಿಲಾದ

ಜೀ। ವರ ಮಧ್ಯದಲ್ಲಿ ಅನಾದಿ ಅವಾಂತರದಿ। ಇರುತಿಪ್ಪವು ಕೇಳಿ ಅವರವರ ತಕ್ಕಾ ಚರಣೆಯ ಮಾಡಿಸುತ ಮೂಲವತಾರದಲ್ಲಿ। ಹಿರಿದಾಗಿ ಚಿಂತಿಸಿ ಜ್ಞಾನ ಪ್ರಬಲನಾಗು। ಪರಮ ಮಂಗಳ ಮೂರ್ತಿ ವಿಜಯ ವಿಠ್ಠಲನ್ನ। ನೆರೆನಂಬಿ ಸಾರಿ ಗುಣರೂಪ ಕ್ರೀಯಾ ॥೨॥

**ತ್ರಿವಿಡಿತಾಳ**

ವಿಶೇಷವಾಗಿ ತಿಳಿವ ಪ್ರಮೇಯ ಉಂಟು। ವಿಶೇಷದೊಳಗೆ ಭೂಸುರ ಜಾತಿಯಲಿ ಪುಟ್ಟಿ। ಶ್ವಸನ ಮತವನುಸರಿಸಿ ನಡದ ಮಾನವ ಬಿಡದೆ ವಶಮಾಡಿಕೊಳ್ಳಬೇಕು ತತ್ವ ಗುಣಿಸಿ। ಬಿಸಿಜನಾಭನ ಎರಡು ಬಗೆ ವಿಭೂತಿರೂಪ। ಕುಶಲಮತಿಯಿಂದ ಧ್ಯಾನಿಸಲು ಬೇಕು। ಋಷಭ ಕಪಿಲ ಯಜ್ಞ ಹಯಗ್ರೀವ ಹಂಸ ತಾ। ಪಸ ಧರ್ಮ ಶ್ವೇತು ವೈಕುಂಠ ದತ್ತ। ಪ್ರಸನಿ ಗರ್ಭ ಸಾರ್ವಭೌಮ ನರನಾರಾಯಣ। ಶಶಿವರ್ಣ ವೈಕುಂಠ ಹರಿ ಕೃಷ್ಣ ಧನ್ವಂತ್ರಿ ಋಷಿ ಸನತ್ಕುಮಾರ ಕುಮಾರ ಅಜಿತಾ ರಂ। ಜಿಸುವ ನಾರಾಯಣ ಯೋಗೇಶ್ವರ। ಬಿಸಜಾಪ್ತರೊಳಗಿಪ್ಪ ಉರುಕ್ರಮ ಬೃಹದ್ಭಾನು। ಬೆಸಗುವೆ ಸಧಾಮ ಶಿಂಶುಮಾರ। ಮಿಸುಣಿಪ ವಾಸವಿನಂದನ ಮಹಿದಾಸ। ದಶರಥರಾಮ ಜಮದಗ್ನಿ ರಾಮ। ವಾಸುದೇವ ಕೃಷ್ಣ ಮತ್ಸ್ಯಕೂರ್ಮವ ರಹಾ। ಮಾನಿಸ ಸಿಂಹ ವಾಮನ ಬುದ್ಧ ಕಲ್ಕಿ। ವಸುಮತಿಯೊಳಗಿವೆ ಸಾಕ್ಷಾದ್ವಿಭೂತಿಗಳು। ಪೆಸರಾಗಿ ಅತಿರೋಹಿತ ಎನಿಸೋವು। ಹಸನಾಗಿ ಕೊಂಡಾಡಿ ಈ ತ್ರಿಮೂರ್ತಿಗಳು ಧ್ವ। ವಿಸಿದ ಕಾಲಕರ್ಮ ಪೆತ್ತ ಜನರ। ಬೆಸಸೆ ಸ್ತೋತ್ರ ಮಾಡಿ ಮಹಿಮೆ ನಿತ್ಯ ವಿ। ಚಾರಿಸಿದ ಮಾನವನವನೆ ಮಹಾತ್ಮನೋ। ಪಶುಪ್ರಾಯನಾದರು ಜ್ಞಾನವಂತನಾಗಿ। ದಶದಿಕ್ಕಿನೊಳಗೆ ಶೋಭಿಸುತಿಹನೂ। ಶಶಿಕೋಟಿ ಲಾವಣ್ಯ ವಿಜಯ ವಿಠಲರೇಯ। ವಿಷಯಂಗಳಿಗೆ ದೂರ ಜಗದೊಳಗಾಡಿದಾ ॥೩॥

### ಅಟ್ಟತಾಳ

ಮನು ತ್ರಯೋದಶರಲ್ಲಿ ಸರ್ವರಾಜರಲ್ಲಿ। ಮಿನಗುವ ರಾಜ ರಾಜೇಶ್ವರ ವಿಭೂತಿ। ಇನಿತಾದರೊಳಗೆ ವಿಶೇಷವಾಗಿ ಮೊದಲಿಂದ। ಅನಿರುದ್ಧ ಪ್ರದ್ಯುಮ್ನ ನರ ಪಾರ್ಥಬಲ ವೈನ್ಯಾ। ಎಣಿಕೆ ಮಾಡುವದು ಅವತಾರದಲ್ಲಿ ಇಂತು। ಮನದಲ್ಲಿ ವಾಲಿ ಯುಧ್ಧಿಷ್ಟರ ಸಾಂಬಾದಿ। ಜನರಲ್ಲಿ ಆವಿಷ್ಟ ಅಲ್ಪ ಮಾತ್ರ ಉಂಟು। ಚನುಮಯ ಮೂರುತಿ ಕಾಲಾನುಸಾರದಿ। ಗಣನೆ ಪೇಳುವದೇನು ಪಾತಾಳವಿಡಿದು। ತ್ರಿಗುಣ ತತ್ವ ಪರ್ಯಂತ ಸರ್ವವು. ಸರ್ವದೀ। ಅನಿಮೇಷ ಮೊದಲಾದ ಚೇತನ ಶರೀರ। ತನುವು ಧರಿಸಿದ ತೃಣಾದಿಗಳಲ್ಲಿ। ವನಜ ನಾಭನರೂಪ ತತ್ತದಾಕಾರ। ಕ್ಷಣ ಬಿಡದೆ ಅಕ್ಕು ತಿರೋಹಿತ ಅತಿರೋಹಿತ। ಘನವಾಗಿ ಇಪ್ಪವು ವ್ಯಕ್ತ ಅವ್ಯಕ್ತದಲ್ಲಿ। ಫಣಿಶಾಯಿ ವಿಜಯ ವಿಠ್ಠಲರೇಯ ಅವರವರ। ತನುವು ತನುವುಗಳಂತೆ ರೂಪಗಳಾಹಾ ॥೪॥

### ಆದಿತಾಳ

ಶ್ರೀಹರಿ ಜಗತ್ತಿನೊಳು ಏಕಾಂಶದಲ್ಲಿ ಪೊಕ್ಕು। ಸ್ನೇಹ ಭಾವವೆ ಇತ್ತು ವ್ಯಾಪಾರ ಮಾಡಿಸುವ। ದೇಹ ಧಾರಿ ಮನುಜಂಗೆ ಸಾಧನ ನಿರ್ಮಿಸಿದನು। ಮಹಾ ಸುಲಭವಾಗಿ ತೋರುತಿದೆ ನೋಡಿರೊ। ಗ್ರಹ ಮೇಧಿಗೆ ಇದೆ ಪರಮ ಮುಖ್ಯವಾಹುದು। ಸಪ್ತಾನ್ನ ಬಗಿಯ ತಿಳಿಯಬೇಕು। ಸ್ವಾಹಾ ಸ್ವಧಾಕಾರ ಪ್ರಕರಣ ಹಂತಾನ್ನ। ಮಹಿರುಹ ತೃಣವಂದೆ ನಾಲ್ಕು ಬಗೆಯ ಅನ್ನ। ದೇಹವಾಚ ಮನಸು ಕೂಡಲಾಗಿ ಸಂ। ದೇಹವಿಲ್ಲದೆ ಸಪ್ತಾನ್ನಾಯಿತುಕೇಳಿ। ಸ್ವಾಹಾ ಸ್ವಧಾ ಅನ್ನದೇವ ಪಿತೃಗಳಿಗೆ। ಅಹಂತ ಅನ್ನ ಅತಿಥಿ ಅಭ್ಯಾಗತ ಸರ್ವರಿಗೆ। ತಾಹ ತೃಣಾದಿಗಳು ಪಶ್ವಜಾತಿಗೆ ಇತ್ತು। ಆಹಾರದಿಂದಲಿ ಸುಖ ಬಡಿಸಲುಬೇಕು। ದೇಹಿ ಒಬ್ಬಗೆ ಸಪ್ತಾನ್ನ ದಾನದ ಪುಣ್ಯ। ಮಹತ್ತಾಗಿ ಬರುವದು ಅಲ್ಪ ಮಾಡಿದರಾಗೆ। ಗಹನ ಇದೆ ಇದೆ ಸಮಸ್ತ ಜನರಿಂದ। ಆಹದೆಂದರೆ ಪುಣ್ಯ ಅವಗೆ ಸಿಧ್ಧಿಸುವದು। ಶ್ರೀಹರಿ

ತನಗೆ ಮೂರು ಲೋಕಕ್ಕೆ ನಾಲ್ಕು ನೇಮಿಸಿ। ಬಹಳ ದಯದಿಂದ ಭಕುತರನ ಪಾಲಿಸುವಾ। ರಹಸ್ಯ ಇನ್ನು ಉಂಟು ಪ್ರವಿಷ್ಟ ಅಪ್ರವಿಷ್ಟ। ವಿಹಾರ ರೂಪದಿಂದ ಹರಿ ಕ್ರಿಡೆಯಾಡುವ। ಮೋಹಕ ಜನರಿಗೆ ತಿಳಿಯಗೊಡದೆ ದಾ। ಸೋಹಂ ಎಂದವರಿಗೆ ಕರತಳಾಮಲಕವೆನ್ನು। ಗುಹಾಶಯನ ನಮ್ಮ ವಿಜಯ ವಿಠ್ಠಲ ತಾನೆ। ದೇಹಿ ದೇಹಾದಲ್ಲಿ ನಿಂದು ತೃಪ್ತಿಯಾಗುವಾ ॥೫॥

**ಜತೆ**

ಪ್ರೀತಿಯಿಂದಲಿ ಇನಿತು ಸಪ್ತಾನ ಊಪಾಸ್ತಿ ।
ನೀತಿಯಿಂದಲಿ ಮಾಡೆ ವಿಜಯ ವಿಠ್ಠಲವೊಲಿವಾ ॥೬॥

❖ ❖ ❖

## ಸುಳಾದಿ-೧೦೫

(ಅನ್ನದಾನ ಪ್ರಾಣಾಗ್ನಿ ಹೋತ್ರ)

**ರಾಗ- ಭೈರವಿ ಧ್ರುವತಾಳ**

ಅನ್ನದಾನ ಪ್ರಧಾನ ನಿಧಾನಿಸಿ ನೋಡಲು। ಅನಂತ ಕಲ್ಪದಲ್ಲಿ ವಿಚಾರಿಸೇ। ಹೊನ್ನು ಮಿಕ್ಕಾದ ದ್ರವ್ಯ ಇತ್ತಡಾದರೆ ಮನುಜ। ಪೂರ್ಣನಾಗನು ಕಾಣೊ ಗುಣಿಸಿ ಕೇಳೂ। ಮುನ್ನೆ ಅಧ್ಯಾತ್ಮ ಅಧಿಭೂತ ಅಧಿದೈವ। ಚೆನ್ನಾಗಿ ತ್ರಿವಿಧ ತೃಪ್ತಿಕರವೊ ನಿತ್ಯ। ಭಿನ್ನ ಭಿನ್ನ ಜೀವರಲ್ಲಿ ತ್ರಯ ವಿಕಾರ ಉಂಟು ಇವೆ। ಇನ್ನು ಲಾಲಿಸುವದು ಸ್ಥೂಲ ಸೂಕ್ಷ್ಮ। ತನ್ನ ಮೊದಲು ಮಾಡಿ ಅಧ್ಯಾತ್ಮವೆನಿಸುವದು। ಅನ್ಯ ಜನರೆಲ್ಲ ಅಧಿ ಭೌತಿಕಾ। ಧನ್ಯ ದೇವತೆಗಳ ಅಧಿ ದೈವರೆನಿಸುವರು। ಉಣಿಸಬೇಕು ಈ ಪರಿ ತಿಳಿದೂ। ಘನ್ನ ತಾಪತ್ರಯಗಳು ಹಿಂದಾಗಿ ಪೊಪವು ಪಾ। ವನ್ನನಾಗುವ

ಜ್ಞಾನಭಕುತಿಯಿಂದ। ತನ್ನ ಮನಸು ಅಧ್ಯಾತ್ಮ ಇಂದ್ರಿಯಗಳೆ ಅಧಿದೈವ ಚೆನ್ನ ಶರೀರವೆ ಅಧಿಭೂತವೊ। ಸನ್ನುಮತ ನೋಡಿದರು ಸಕಲಾದಿ ಸಂ। ಪನ್ನನಾಗುವ ಸಕಲಾಭೀಷ್ಟೆಯಲ್ಲಿ। ಅನ್ನದಾನವೆ ದಾನ ತ್ರಿಕೋಟಿಗೇ। ಪುಣ್ಯಮಾತುರ ತತ್ತತ್ರ ಭೇದವಾಗಿಪ್ಪದು। ಇನಿತರೊಳು ನಾನಾವಿಧ ಓದನ। ಬಣ್ಣಿಸಲರಿದು ಅನ್ನವಿತ್ತವನ ಕುಲಕೋಟಿ ಸು। ವರ್ನಗಾತುರಾಗಿ ಸಂಚರಿಪರು। ಪನ್ನಗಶಯನ ನಮ್ಮ ವಿಜಯ ವಿಠ್ಠಲರೇಯನ। ಉಣಿಸುವದು ಬಹು ಅಧಿಷ್ಠಾನವನ್ನೆ ಚಿಂತಿಸಿ ॥೧॥

### ಮಟ್ಟತಾಳ

ಏಳು ಪರಿ ಅನ್ನ ಜಗದೊಳು ತುಂಬಿದೆ। ಏಳಲ ಮಾಡದೆ ಎಥಾರ್ಥ ತಿಳಿವದು। ಕಾಲಕಾಲಕೆ ಇದನೆ ಹರಿಗರ್ಪಿತವೆಂದು। ಊಳಿಗದವನಾಗು ಉತ್ತಮರ ಸಹಿತ। ಬಾಲ್ಯ ಯೌವನ ವೃದ್ಧಾ ಪರಿಯಂತ ನೆನದು। ಕಾಲ ಕಾಲದಲ್ಲಿ ಕೊಡುವ ವಿಚಾರ ತಿಳಿ। ಶೀಲಗುಣ ಸಾಂದ್ರ ವಿಜಯ ವಿಠ್ಠಲರೇಯನ। ನಾಲಿಗೆಯಿಂದಲಿ ಪೊಗಳುವವನ ಮೆಚ್ಚೂ ॥೨॥

### ತ್ರಿವಿಡಿತಾಳ

ತುತ್ತನ್ನ ಜ್ಞಾನಿಗೆ ಕರದು ಮನ್ನಿಸಿ ತಾನು। ಚಿತ್ತಶುದ್ಧನಾಗಿ ವೈಷ್ಣವ ಭಕುತಿಲಿ। ಯಿತ್ತು ತೃಪ್ತಿಯ ಬಡಿಸಿದನಾದಡೆ ಅವನಲ್ಲಿ। ತತ್ವ ತತ್ವೇಶರು ನಾಲ್ವತ್ತಾರು ಸಂಖ್ಯೆ। ನಿತ್ಯದಲ್ಲಿ ಒಲಿದು ಶೋಭಿಸುವರು। ಗಾತ್ರದಲ್ಲಿ ಇದ್ದ ತತು ತತುಮಾನಿಗಳು। ಪೂರ್ತರಾಗುವರು ಅನುಭವಕೆ ಮೆಚ್ಚೀ। ಮತ್ತೆ ಪೇಳುವೆನಯ್ಯಾ ಒಬ್ಬೊಬ್ಬ ತಾತ್ವಿಕರ। ಗಾತ್ರದಲ್ಲಿ ಉಂಟು ಸಮಸ್ತರೂ। ಅತ್ತ ಅತ್ತಲಿ ಗುಣಿಸು ಅವರವರ ಅವರೊಳಗೆ। ಅತ್ಯಂತವಾಗಿ ಮನಸಿಗೆ ನಿಲಕಾದೋ। ಸತ್ಯವೆಂಬೊದೆ ಸಿದ್ಧ ಶೃತಿ ಪುರಾಣಗಳಲ್ಲಿ ಸ್ತೋತ್ರ ಮಾಡುವದಕ್ಕೆ ಅಪರಮಿತವೋ। ಚಿತ್ತಜ ನಯ್ಯನ ಮೂರ್ತಿಗಳು ಅನೇಕ।

ಮೊತ್ತವಾಗಿವೆ ನೋಡು ಒಂದಾನಂತಾ। ತುತಿಸಿ ಕೊಂಡಾಡಿ ಇದರಾನಂದ ಜ್ಞಾನ। ವಾರ್ತಿಯ ವಿಶೇಷ ಮಹಿಮೆಯನ್ನು। ಇತ್ತ ಎಣಿಸು ಮುಂದೆ ದಕ್ಷಣೋತ್ತರ। ಎಪ್ಪತ್ತುಸಾವಿರ ಮೇಲೆ ಎರಡು ಲೆಖ್ಖಾ। ಸುತ್ತಿಕೊಂಡಿಪ್ಪವು ನಾಡಿ ತದ್ಗತವಾಗಿ। ತತ್ವಾಭಿಮಾನಿಗಳು ನಾರಿಯರೊಡನೆ। ಭೃತ್ಯವತ್ಸಲ ಹರಿ ಇಂದಿರಾ ಸಮೇತ। ತತ್ತಳಿಸುತಲಿಹಾ ಅಪ್ರಾಕೃತನೂ। ಇತ್ತಂಡ ಭಾಗ್ಯದಲ್ಲಿ ಸ್ತ್ರೀ ಪೂಂಸನಾಗಿ ಮು। ವತ್ತಾರುಸಾವಿರ ರೂಪ ದ್ವಯದಿ। ವಿಸ್ತರಿಸುವೆ ಬ್ರಹ್ಮಾದಿಗಳು ಈ ಪ್ರಕಾರ। ಪ್ರತ್ಯೇಕ ಪ್ರತ್ಯೇಕ ರೂಪ ಧರಿಸೀ। ಆತ್ಮ ಕ್ರೀಡೆ ಮಾಡುತಿಪ್ಪರು ತಮಗೆ ತಾವೆ। ಹತ್ತಿಲಿ ಸತಿಗಳು ನೋಡುತಿರೆ। ಉತ್ತಮ ಶ್ಲೋಕನು ಇದರಂತೆ ಕ್ರೀಡಿಸುವಾ। ಪ್ರತ್ಯಕ್ಷ ರೂಪಾಧಿಷ್ಠಾನದಲ್ಲಿ। ತುತ್ತು ತೆಗಿದುಕೊಂಬ ಜ್ಞಾನಿ ಈ ಪರಿಯಲ್ಲಿ। ಮುತ್ತೈದಿ ಬ್ರಾಹ್ಮರನ ಇವರನೇ ಮಾಡಿ। ಚಿತ್ತದಲ್ಲಿ ಸ್ಮರಿಸಿ ಕವಳ ಮೆಲುವ ಮೆಚ್ಚಿ। ಸುತ್ತ ತಾತ್ವಿಕ ಜನರ ಸರ್ವೇಶನಾ। ನಿತ್ಯಾಯು ಉಳ್ಳವಕಾ ಒಂದೊಂದು ದಿವಸಕ್ಕೆ। ಎತ್ತ ನೋಡಿದರತ್ತ ನೋಡಿದಷ್ಟು। ಹತ್ತು ದಿಕ್ಕಿನಲ್ಲಿ ಪಂಕ್ತಿ ಪಂಕ್ತಿ ಸಾಗಿ ಕು। ಳಿತು ಭೋಜನ ಮಾಡಿದಧಿಕವಾಗಿ। ಗಾತ್ರದೊಳಗೆ ಇನಿತು ಕುಟುಂಬಿಗಳಿಗೆ ಸ। ರ್ವತ್ರದೊಳಗೆ ಇವನೆ ತುತ್ತು ಕೊಡುವ। ಮರ್ತ್ಯನಾದರು ಇವನ ನಡತಿ ನುಡತಿ ಬೇರೆ। ಚಿತ್ತವೆ ಹರಿಯಲ್ಲಿ ನಿಲಿಸಿಹನೋ। ಅತ್ಮ ಭೋಗದಲ್ಲಿ ತಾನು ಸುಖ ಪಡುವನು। ರಾತ್ರಿ ಹಗಲು ಪುಣ್ಯ ಸಂಪಾದಿಪಾ। ಎತ್ತಲಾದರು ಕೇಳೆ ಅವನಾದರು ಇಷ್ಟು। ಮಾತ್ರ ಗ್ರಹಿಸಿದರು ಜೀವನ್ಮುಕ್ತಾ। ಭಕ್ತಿ ಮಾತುರಬೇಕು ಕೊಡುವ ಕೊಂಬುವನಲ್ಲಿ। ಹತ್ತು ಕೋಟಿ ಹಣಾ ವೆಚ್ಚಿಸಲಾಗದು। ಕೀರ್ತಿ ಬರಬೇಕೆಂದು ನೂರಾರು ಸಾವಿರಕ್ಕೆ। ಉತ್ತಮನ್ನ ಉಣಿಸೇ ಬರಿದೆ ಕಾಣೋ। ಬತ್ತಲೆ ಪುರುಷನ್ನ ಇಂಥ ಮಾನವ ಪೋಗಿ। ಕತ್ತಲೆಯೊಳು ಪೋಗಿ ಅಪ್ಪಿದಂತೆ। ಸತ್ವ ಮೂರುತಿ ನಮ್ಮ ವಿಜಯ ವಿಠ್ಠಲರೇಯ। ತುತ್ತು ತೆಗಿದುಕೊಂಬಾಅಗ್ನಿ, ಭೂಸುರರಲ್ಲಿ ॥೩॥

## ಅಟ್ಟತಾಳ

ಇದು ಕರ್ಮಾಸಕ್ತ ಮಾನವರಿಗೆ ಕೇವಲ। ಇದಕಿಂದಧಿಕವಾಗಿ ಶುಲಭವಿಪ್ಪದು ಕೇಳಿ। ಮಧುರನ್ನ ಉಣಿಸಿ ನಾನಾ ಬಗೆ ಪೂಜಿಸಿ। ವದನದಿಂದಲಿ ಒಳ್ಳೆ ಮಾತಾಡದಿದ್ದರೆ। ಇದರೊಳಗಾವದು ಮುಖ್ಯಾನ್ನವು ವೇಳೊ। ಒದಗಿ ಬಂದವರಿಗೆ ಆದರವಾದಡೆ। ಹೃದಯ ಸಂತಾಪವು ಪರಿಹಾರವು ವಾಗೋದು। ಇದೆ ಇದೆ ಮುಖ್ಯವೊ ಬಲ್ಲವರಿಗೆ ಪ್ರೀತಿ। ಪದುನಾಭಗೆ ಪ್ರಸಿದ್ಧ ಅನ್ನದಿಂದ। ಉದರ ತೃಪ್ತಿ ಏನೊ ಸುರರಿಗೆ ಬೇಕೇನೊ। ಹದುಳ ಬೇಕಾದಡೆ ಜ್ಞಾನ ಸಂಪಾದಿಸಿ। ಪದೊ ಪದಿಗೆ ಎರಡೊಂದು ಅನ್ನದಿಂದ। ಸದಮಲನಾಗಿ ತಾರತಮ್ಯಾನುಸಾರ। ವಿಧಿ ತಪ್ಪದಲೆ ಮಹಾ ಪ್ರೀತಿ ಗೈಸುವದು। ಇದರ ತರುವಾಯ ಮಿಗಿಲಾದ ಉಪಚಾರ। ಉದಕದಿಂದಲೆ ಸರ್ವ ಸಾಧನವಿದ್ದಂತೆ। ಉದಭವಿಸದು ಕಾಣೋ ಜ್ಞಾನವಧಿಕವಾಗಿ। ಇದನೆ ತೊರಿಯದಿರೂ ಧ್ಯಾನಂಗತನಾಗು। ಪದವಿಗೆ ಸೋಪಾನ ಹರಿ ಅನುಕಂಪನು ಮುದದಿಂದ ಕಡಿಮೆ ಅನ್ನಗಳ ಇದರಂತೆ। ಪದುಮ ಸಂಭವನಯ್ಯಾ ಪ್ರೀತಿಯಾಗದು ಕಾಣೊ। ಯದುಕುಲೋತ್ತಮ ಕೃಷ್ಣ ವಿಜಯ ವಿಠ್ಠಲರೇಯಾ। ಬದಿಯಲ್ಲಿ ವಾಸವಾಗಿಪ್ಪ ಭಯನಾಶಾ ॥೪॥

## ಆದಿತಾಳ

ದಾನದೊಳಗೆ ದಾನ ಮಾನಸದಲಿ ಹರಿಯ। ಧ್ಯಾನ ಮಾಡಿ ಮೆಚ್ಚಿಸುವದು ಇದೆ ಮಹಾ। ದಾನ ಕಾಣೊ ಏನೇನು ಮಾಡಿದರು ಇದಕೆ ಸರಿಯಿಲ್ಲ। ಅನಂತ ಕಾಲಕ್ಕೂ ಎಣಿ ಎಣಿಕೆ ಮಾಡಿದರೆ। ಕಾಣೆ ಮೊದಲಾದ ದ್ರವ್ಯ ಧಾವತಿ ಇಲ್ಲಾ। ಸಾನುಕೂಲಕೆ ಪರರ ಆರ್ಜನೆ ಮಾಡಸಲ್ಲಾ। ದೀನನಾಗಿ ದೇಶ ಸಂಚರಿಸುವದಲ್ಲಾ। ಸ್ನಾನಾದಿಗಳು ಮಾಡಿ ಬೈಲಿಗೆ ತರುವದಲ್ಲಾ (ತೋರುವದಲ್ಲ)। ಮಾನವಾ ಕೇಳೆಲೊ ಮಾನಸನ್ನದ ದಾನ। ಶ್ರೀನಾಥಗಿಂತ ಇನ್ನು ಸತ್ಪಾತ್ರ ಆವಾವನೊ। ಕ್ಷೋಣಿಯೊಳಗೆ ಇದನೆ

ನಂಬುನೆರೆನಂಬು ಮನುಜ। ಮಾಣಾದೆ ಷಡ್ವಿಧ ಅನ್ನ ಇದರ ತರುವಾಯ। ದಾನಿಗಳರಸ ನಮ್ಮ ವಿಜಯ ವಿಠ್ಠಲರೇಯಾ। ಜ್ಞಾನವಂತರ ಶುದ್ಧ ಮಾನಸದಲಿ ನಲಿವಾ ॥೫॥

**ಜತೆ**

ಅನ್ನ ದಾನವನು ಮಾಡು ಜ್ಞಾನಪೂರ್ವಕದಿಂದ ।
ಚಿನ್ಮಯ ವಿಜಯ ವಿಠ್ಠಲನ್ನ ಮೆಚ್ಚಿಸು ನಿತ್ಯ ॥೬॥

❖ ❖ ❖

## ಗುರಗೋಪಾಲ ವಿಠ್ಠಲರ ಪದ

ವೈಶ್ವಾನರ ಪರಮಾತ್ಮನ ಲಕ್ಷಣ
ಪ್ರಾಣಾಗ್ನಿ ಹೋತ್ರದಲ್ಲಿ ಅನುಸಂಧಾನ ಕ್ರಮ ಪದ (೧)

**ರಾಗ- ಸೌರಾಷ್ಟ್ರ ಝಂಪಿತಾಳ**

ನಮೊ ನಮೋ ಸ್ಥೂಲ ಭುಗ್ವಿಶ್ವ ವೈಶ್ವಾನರನೆ। ನಮೊನಮೋ ಭೂತ ಭಾವನನೆ। ನಮೊ ನಮೊ ಅಖಿಳಭುವನ ಬಹಿರಂತರದಿ ವಿತತನೆ। ನಮೊನಮೊ ಪರಮ ಪಾವನನೆ ॥ಪಲ್ಲ॥ ಉಪಮನ್ಯುವರದ ವೈಶ್ವಾನರ ಮೌಳಿಎನಿಸುದ ದೇವ। ವಿಮುಳ ಮತಿಕೊಡು ಎನಗ ವಿತತ ಮೂರ್ತೆ॥೧॥ ಜ್ಞಾನಮಯ ಆದಿತ್ಯಸ್ಥಿತನೆ ವೈಶ್ವಾನರನೆ। ಆನಂದಮಯ ವಿಶ್ವರೂಪನಾಮಾ॥ ನೀನು ವೈಶ್ವಾನರಗೆ ಅಕ್ಷಿ ಎನಿಸುವ ದೇವ। ಮೌನಿ ಸತ್ಯಾ ಯಜ್ಞ ಋಷಿಪಾಲಕ ॥೨॥ ವಾಯುಸ್ಥ ವಾಯು ನಾಮಕ ವೈಶ್ವಾನರನೆ। ಶ್ರೀಯರಸ **ಪ್ರಥುಗ್ವರ್ತನಾಮ ಪ್ರಾಣ** ॥ ಶ್ರೀಯಪ್ರದ ಬೋಲ್ವೇಯ ಮುನಿವರದ ಭೂಮಜಯ। ಕಾಯಯ್ಯ ಕರುಣದಿಂದೆಮ್ಮ ಸತತ ॥೩॥ ಇಂದಿರೇಶನೆ ನಭಸ್ಥಿತ ನಭೋ ನಾಮಕನೆ। ಸಂದೋಹರೂಪಿ **ಬಹುಳಾಖ್ಯನಾಮಾ** ॥ ಎಂದೆಂದು ಶರ್ಕರಾಕ್ಷನಬಿಡದೆ ಪೊರೆವ ಸುಖಿ। ಸಾಂದ್ರ ವೈಶ್ವಾನರಾ

ಮೂರ್ತಿಜಯತು ॥೪॥ ನಮೊ ನಮೊ ಬುಡಿಲವರದ **ರೈನಾಮ** ವೈಶ್ವಾನರನೆ ಸುಮಹಿಮ ಅಪ್ಪುಗತ ತನ್ನಾಮಕ॥ ವಿಮಲ ವೈಶ್ವಾನರಗೆ ಕಟಿಯೆನಿಪ ಬಹುರೂಪ। ನಮೊನಮೋ ಸುಮಹಿಮನೆ ಅಮೃತ ಫಲದಾಯಕ ॥೫॥ ಮೇದಿನೀಸ್ಥಿತನೆ ತನ್ನಾಮ ವೈಶ್ವಾನರನೆ। ಪಾದವೆನಿಸುವ **ಪ್ರತಿಷ್ಠಾಖ್ಯನಾಮ**॥ ಮೋದದಿಂದುದ್ದಾಲಕನ ಪೊರೆದ ಕರುಣ ನಿಧಿ। ಆದಿಮೂರುತಿ ವಿಷ್ಣು ಸಲಹೊ ಎಮ್ಮ ॥೬॥ ಮೊದಲು ಋಷಿಗಳು ಒಂದೊಂದು ಅವಯವವನು। ಸದಮಲ ಭಜನೆಯನು ಮಾಡಿ ಸತತ॥ ಸದನನ್ನ ಜ್ಞಾನ ಧನ ಸಕಲ ಸಂಪದ ಪಡೆದು। ಮುದದಿಂದ ಭೂಮನ್ನ ಪೂಜಿಸುವರೊ ॥೭॥ ಆರು ಈ ಅವಯವ ನಾಮಮೂರ್ತಿ ಹೃ। ದ್ವಾರಿಜದಲಿಹ ಪ್ರಾದೇಶ ಮಾತ್ರ॥ ಮೂರುತಿಯಿಂದೈಕ್ಯ ಆರಾಧನೆಯು ಮಾಡೆ। ಸೇರುವರು ಅವರು ಕೈವಲ್ಯಪಥವ ॥೮॥ ಈ ವಿದ್ಯ ಬಲ್ಲವನು ಶ್ವಾನ ಚಾಂಡಾಲಾದಿ। ಜೀವಜಾತಿಗೆ ತಾನು ಅನ್ನ ಕೊಡಲು॥ ಶ್ರೀ ವೈಶ್ವಾನರನೆ ಭುಂಜಿಸುವನೆಂದರುವ (ರಿವ) ಆವಪಾಪಗಳವನ ಮುಟ್ಟವಲ್ಲ ॥೯॥ ವೆಂಕಟ ನೃಸಿಂಹಾರ್ಯ ಅಚ್ಚರಿಂಯ ನಿಧಿಚಂದ್ರ। ವೆಂಕಟಾರಾಮಾರ್ಯ ಗುರು ಹೃದಯ॥ ಪಂಕಜದಲಿಹ ಪ್ರಾಣಪತಿ ಶ್ರೀಹಯಾಸ್ಯ ಪದ। ಪಂಕಜಕರ್ಪಿಸುವೆ ಈ ಕೃತಿಯನು ॥೧೦॥ ಈ ವಿದ್ಯ ಅತಿಗೌಪ್ಯ ಇದು ಅರಿದ್ರ ಭುಜಿಸುವವ। ಕೋವಿದರ ಸರ್ವ ಪುರುಷಾರ್ಥಗಳನು॥ ದೇವಗುರು ಗೋಪಾಲ ವಿಠಲ ವೊಲಿದೀವ। ಕಾವನು ಸರ್ವತ್ರ ತಾನು ಬಿಡದೆ ॥೧೧॥

## ಶ್ರೀಗುರು ಮಧ್ವೇಶಾರ್ಪಿತವು

ವೈಶ್ವಾನರನ ೧೧ ಅಂಗಗಳಲ್ಲಿರುವ ರೂಪಗಳು (೧) ಸುತೇಜ =ಶಿರಸ್ಸು (೨) ವಿಶ್ವ = ವೈಶ್ವಾನರನ ಚಕ್ಷು, (೩) ಪೃಥಗ್ವರ್ತ = ಪ್ರಾಣ, (೪) ಬಹುಳಾಖ್ಯ = ಸಂದೋಹ [ಮಧ್ಯದೇಹ] (೫) ರೈ = ಕಟಿ, (೬) ಆಹವನೀಯಾಗ್ನಿಗೆ ಆಧಾರ = ಮುಖ (೭) ದಕ್ಷಿಣಾಗ್ನಿಗೆ ಆಧಾರ =

ಮನಸ್ಸು, (೮) ಗ್ರಾರ್ಹಸ್ಪತ್ಯಾಗ್ನಿಗೆ = ಹೃದಯ, (೯) ವೇದಿಗೆ ಆಧಾರ = ಉರು, (೧೦) ಧರ್ಭಕ್ಕೆ ಆಧಾರ= ರೋಮ (೧೧) ಮೇದಿನೀಸ್ಥಿತ ಪ್ರತಿಷ್ಠಾ = ಪಾದ ಎಂದು ವೈಶ್ವಾನರನ ಲಕ್ಷಣ (೧೨) ಅಂಗಗಳನ್ನು ಧ್ಯಾನಿಸತಕ್ಕದ್ದು.

**ಹರಿದಾಸ ಸಾಹಿತ್ಯ ಮಾಲೆ ಕುಸುಮ**

(೧) ಸದಾಚಾರ ಪಟ ೮೫ರಲ್ಲಿ ವಿವರ ಕೊಟ್ಟಿದೆ. ಇದಕ್ಕೆ 'ಷೋಡಶಿ' ಗ್ರಂಥ ಆಧಾರ, ಉಪನಿಷತ್‌ವೇದ್ಯ.



## ಸುಳಾದಿ-೧೦೬

**(ಪಿತೃಗಳ ಶ್ರಾದ್ಧ ವಿಚಾರಾಂಶ)**

ಪಿತೃಋಣಮೋಚನ ಕರ್ಮದಿಂದ ಬಿಡುಗಡೆ, ಜೀವ ಜೀವ ಭೇದ ಜ್ಞಾನ ದ್ವಾರಾ-ಮುಕ್ತಿ

**ರಾಗ- ಶಂಕರಾಭರಣ ಧ್ರುವತಾಳ**

ಪೈತೃಕ ವಾರದಲ್ಲಿ ದೇವಾಂಶಿ ಅಂಶಿಗಳ। ಸ್ತೋತ್ರವ ನಾಲಕು ಯುಗದವರ ಸೇವಾ। ಸೂತ್ರನಾಮಕ ಪ್ರಾಣ ಮೊದಲಾದ ದೇವತಿಗಳ। ಚಿತ್ರ ವಿಚಿತ್ರ ಮಹಿಮೆ ತಿಳಿದು ತಿಳಿದು। ಪುತ್ರ ಪೌತ್ರ ಪ್ರಪೌತ್ರ ವಂಶಾಭಿವೃದ್ಧಿಯಿಂದ। ಗಾತ್ರ ನಿರ್ಮಳರಾಗಿ ಬಾಳುವರೋ। ಗೋತ್ರಾನೂರೊಂದು ನಾನಾ ಜನುಮಧರಿಸಿದ ವಿ। ಹೋತ್ರಾದಿ ಲೋಕದಲ್ಲಿ ಇದ್ದ ಜನರು। ಪಾತ್ರ ಸತ್ಪಾತ್ರರಾಗಿ ತೃಪ್ತಿಯಾಗುವರು ಕಾ। ಲತ್ರಯ ಬಿಡದಲೆ ಊರ್ಧ್ವಗತಿಗೆ। ನೇತ್ರುತ್ಸಹದಿಂದ ಸಾಗಿ ಸಾರುವರು

ಸ। ಗೋತ್ರದೊಡನೆ ಹರಿಯ ಕೊಂಡಾಡುತ। ಶೋತ್ರದಿಂದಲಿ ಇದು ಕೇಳಿದವನ ವಂಶ। ಕ್ಷೇತ್ರಾದಿಯಲ್ಲೀ ಇರಲು ಗತಿಗಭಿಮುಖ। ಧಾತ್ರಿಯೊಳಗೋರ್ವ ಜ್ಞಾನಿಪುಟ್ಟಲು ಮೇರು। ಗೋತ್ರಸಮ ತುಲ್ಯ ಪುಣ್ಯ ತಂದು ಕೊಡುವ। ವಾತ್ರಕಾಲವಾದರು ನೆನಿಸಿ ನೆನಿಸಿ ಸುಹೃ। ನ್ಮಿತ್ರನಾಗೆಲೋ ನಿನ್ನ ಬಾಂಧವರಿಗೆ। ಛತ್ರ ಚಾಮರ ನಾನಾ ಭೋಗದಿಂದಲಿ ಸ। ರ್ವತ್ರ ಬಾಳುತಲಿಪ್ಪ ಜ್ಞಾನಿಯಾಗಿ। ರಾತ್ರಿಚಾರರು ಇವನ ಮುಟ್ಟಲಂಜುವರು ಇದ್ದ। ಪಾತ್ರಿಪಾತ್ರ ಪದಾರ್ಥ ಮೊದಲಾದವು। ಸೂತ್ರ ಮೀಟಿದಂತೆ ಸತ್ಪಥವಾಗುವದು। ಪೌತ್ರಾ ಭವಾಂಬುಧಿಗೆ ದಿವಿಜವ್ರಾತಾ। ನೇತ್ರತ್ರಯನ್ನ ಅವತಾರ ಆರಂಭಿಸಿ। ಮಾತ್ರಾಭೂತ ಕರ್ಮಜ್ಞಾನ ಲಿಂಗ। ಗಾತ್ರ ಶೋಡಶಕಳಾ ಕಾಲ ವೇದ ಶಾಸ್ತ್ರಪ। ವಿತ್ರ ವಸ್ತು ಸಮಸ್ತ ಲೋಕಾವರಣಾ। ಈತ್ರಿಧಾಮಾ ಸಹಾಯದಲ್ಲಿದ್ದ ದೇವಾದಿಗಳ। ನಿತ್ರಾಣನಾಗಿ ಎಣಿಸಿ ಕೂಡಿಸು। ಯಾತ್ರ ಮಿಕ್ಕಾದ ಚೇಷ್ಟೆ ಹರಿಗೆ ಸಮರ್ಪಿಸಿ। ತ್ರಾತಾತ್ಮಾ ಎಂದು ಹಸ್ತ ಮುಗಿದು ಬಾಗಿ। ನೇತ್ರನಾಗಿ ಲೋಕಕ್ಕೆ ಇಪ್ಪನೋರ್ವನು ಸತಿ ಕಾ। ಳತ್ರ ನಾಮಕನೋರ್ವ ವಸುಓರ್ವನೋ। ಈತ್ರಿ ಬಗೆಯವರ ಅಂತರದಲ್ಲಿರೂ। ಪತ್ರಯ ಎನಿಸು ಪ್ರದ್ಯುಮ್ನಾದಿ ಮೂರ್ತಿ। ಅತ್ರಿ ನೇತ್ರೋದ್ಭವ ಕುಲವಿಜಯ ವಿಠಲ। ಕ್ಷೇತ್ರಜ್ಞ ಸ್ತುತಿಗೆ ಮೆಚ್ಚಿ ಕುಲ ಉದ್ಧಾರ ಮಾಡುವಾ ॥೧॥

### ಮಟ್ಟತಾಳ

ಶುಚಿವರ್ಣವ ಸ್ವಾದ ರುಚಿ ಅಮೃತಸಾರಾ। ರಚನೆ ಮನೋಹರಾ। ಅಚಲ ಅವಿರೋಧ ಪಚನ ಶುಭ್ರ ವರ್ನ। ನಿಚಿಯ ಮಿಳಿತ ರಹಿತ ಪ್ರಚುರ ಪ್ರಚುರ ಸಮ। ಸುಚರಿತ ಸರ್ವದಲಿ ಅಚಿರ ಕಾಲ ಪ್ರಾಪ್ತಿ। ಸಚರ ಚರಪಾಲಾ ವಿಜಯ ವಿಠ್ಠಲ ನಾನಾ। ಉಚಿತ ಧರ್ಮಗಳೆಲ್ಲಾ ವುಂಟವಗೆ ಮಾಳ್ಪಾ ॥೨॥

## ತ್ರಿವಿಡಿತಾಳ

ಹನುಮನ್ನ ಭೀಮ ಮಧ್ವಶುಕ ದೂರ್ವಾಸ ಗುರು। ತನುಜ ಅಶ್ವತ್ಥಾಮ ಲಕ್ಷ್ಮಣ ಬಲರಾಮ। ವನಚರ ವಾಲಿ ಅರ್ಜುನ ಭರತ ಪ್ರದ್ಯುಮ್ನ ಷಣ್ಮುಖ ಸಾಂಬ ಶರ್ವೋತ್ತುಂಗ ಶತ್ರುಘ್ನ। ಅನಿರುದ್ಧ ತಾರಾ ಉದ್ಧವ ದ್ರೋಣಾಂಗದ ಸುಗ್ರೀ। ವನು ಕರ್ನ ಜಾಂಬುವಾನ್ನ ಧರ್ಮ ವಿದುರ ಶಂ। ತನು ಸುಷೇಣ ಮಹಾಭಿಷಕ್ ನಾರದ ಭೃಗು। ಗುಣವಂತ ಲವ ನೀಲಾದ್ಯುಷ್ಟದ್ಯುಮ್ನ ಭೀಷ್ಮ। ಕನು ದುರ್ಮುಖ ಘಟೋತ್ಕಚ। ಗಣಪ ಚಾರುದೇಷ್ಣ ಎಣಿಸು ಕ। ತ್ಥನ ಭಗದತ್ತ ವಿವಿಧ ಮೈಂದ। ವನು ನಕುಲ ಸಹದೇವ ಬಬ್ರುವಾ। ಹನ ಮನು ಶುಚಿ ಕೌಶಿಕ ಮಧುರಾಪ। ಟ್ಟಣ ಶಕುನಿ ಜನಕ ಉಗ್ರಶೇನ ಅಕ್ರೂರ। ಘನ ಪರಾಕ್ರಮ ಭೀಷ್ಮ ಸತ್ಯ ಶಮಂತಕ। ಮಣಿಕುಬ್ಜಿ ಕೃತವರ್ಮ ಸತ್ರಾಜಿತು ಪಾಂಡುರು। ಗ್ಮಿಣಿ ಬಲಿ ಭರತ ಯಯಾತಿ ಯದುಸಾತ್ಯಕಿ। ಧನುರ್ಧಾರಿ ಅಭಿಮನ್ಯು ಯುಯುತ್ಸು ಸಂಜಯ। ಮುನಿವ್ಯಾಸ ಯೋಜನಗಂಧಿ ಮಾದ್ರಿ ಕುಂತಿ। ಸನಕಾದಿ ಗಾಂಧಾರಿ ಕೃಪಾ ಕೃಪಿ ಪಾಂಚಾಲಿ। ತನುಜರೈವರು ದ್ರುಪದ ವಿರಾಟ ಮಾದ್ರೇಶ। ಅನಿಮಿಷ ನದಿ ಸರ್ವ ಪ್ರವಾಹ ರೇವತಿ। ವನಧಿ ಸಪುತ ನಾನಾ ದ್ವೀಪ ಖಂಡ ಕ್ಷೇತ್ರ ವನ ಪರ್ವತ ಯಾಗ ವರ್ಣಾಶ್ರಮ ಜಾತಿ। ಇನ ಚಂದ್ರಮ ವಂಶ ಪಾರಂಪರೆ ಗ್ರಹಿಸು। ವನ ಗೋಚರ ವಾನರ ಯದುವಂಶದಲಿ ಬಂದು। ಜನಿಸಿದ ಸ್ತ್ರೀ ಪುರುಷ ಇವರ ಈರ್ವಗೆ ತಿಳಿದು। ತೃಣವೆ ಮೊದಲು ಮಾಡಿ ಮುಕ್ತಿಯೋಗ್ಯರನಾ। ಇನಿತು ಬಿಡದೆ ಪಿತೃಪುಣ್ಯಕಾಲದಲ್ಲಿ ಯೋ। ಚನೆ ಮಾಡಿ ಮತಿಯಿಂದ ಕೊಂಡಾಡಿದ ಭಕ್ತಿ। ಮನುಜನ್ನ ಸುಕೃತಕೆ ಕಡೆಗಾಣೆ ಪಡೆಗಾಣೆ। ಗಣನೆ ಇಲ್ಲದೆ ಮಹಾಕುಲ ಉದ್ಧಾರ। ಧನಧಾನ್ಯ ವಿದ್ಯಾದ ವಿಜಯ ವಿಠಲರೇಯ। ಕುಣಿ ಕುಣಿದಾಡುವ ಪಿತೃ ರೂಪಗಳಿಂದ ॥೩॥

## ಅಟ್ಟತಾಳ

ಮಲಿನ ವಸನ ಮಾತು ಪುಶಿ ಪೇಳುವ ನೀಚ। ಕಲಹ ಕರಿಣೋಕ್ತ ಕಾಮುಕ ಚೋರ ಚಂ। ಚಲ ಬ್ಯಾಡಾ ಜಲ್ಪ ಧರ್ಮಧ್ವಜ ದ್ವಿಜನಿಂದೆ ಜಲವಾಹ ಪಾಚಕಾ ಕಾರ್ಷಿಕಾ ಗಣಿತಜ್ಞ। ಕುಲಭ್ರಷ್ಟ ಅನಾಚಾರಿ ಛುದ್ರ ಜೀವಹಿಂಸ। ಕೊಲೆಗಡಿಗ ನಾನಾ ಧನಧಾನ್ಯ ರಸ ದು। ರ್ಮಲ ಕ್ರಿಯಾ ವಿಕ್ರಯ ಸಾರ್ಥಿಕ ಚಾರ್ವಾಕ। ಕೇವಲ ಹೀನಂಗ ಚೆನ್ನಿಗದರ ಚುಲ್ಲಕಾ। ಹಳಿವಾದಿ ವೃತದೂರ ನಿತ್ಯಕರ್ಮ ಶೂನ್ಯ। ಮಲಗಿಪ್ಪ ವಿಚಂಡ ಊರು ಊರು ಸಂಚಾರಿ। ಬಲುತ್ಕಾರ ಪ್ರತಿಗ್ರಹಾಸ್ತ್ರೇಣ್ಯ ಪ್ರತಿಷ್ಠಿಹ ಶ್ರದ್ಧಾಭೋಕ್ತ ಗೋಳಕ ದೇಶಾಂತರ ಪರಿಚಿತ ರಹಿತ ತ್ವಂ। ಬಲು ಸರ್ವದಧಾರಿ ಆಸ್ನಾಯಿ ರೋಗಿಷ್ಟ। ಅಳಲುವ ಇಂದ್ರಿಲೋಲುಪ್ತ ಮಾರ್ಗ ವಿಶ್ರಾಂತ ಹೊಲೆ ಕೋಪ ಸಂತಪ್ತ ಮದ ಮತ್ಸರ ಲೋಭಿ। ತಳಮಳ ನೆಲೆಗಳ್ಳ ಪರದಾರ ಸಾಲಿಗಾ ದಾಕ್ಷಣ್ಯ। ಹಲಬುವ ಹಂತಕ ಹಸಿವೆಗೆ ತೀವರ। ಸುಳಿದಾಡುವ ಬಹುಜಠರಜರಠ ಬಾಲಾ। ಬಲಿ ವೃಷಳಿ ವಂಧ್ಯಾ ಋತು ವೆಭಿಚಾರಿಪೂ। ಶ್ಚಲಿ ಗರ್ಭಿಣಿ ದ್ವಯ ಭಾರ್ಯಳ ಭರ್ತಾ ವ್ಯಾ। ಕುಲ ಪ್ರತಿಕೂಲ ಪತ್ನಿ ದೂರ ದುಃಸಂಗ। ಮೆಲುವ ಅಯೋಗ್ಯ ಪದಾರ್ಥ ನಪುಂಸಕ। ಘಳಿಗೆ ಪ್ರಾಹಾರಿಕ ಪ್ರಾಪಂಚಾಸಕ್ತ ಸಂ। ಬಳಕಾರಿ ಶಾಲಕ ಮಿಕ್ಕ ಸಗೋತ್ರಜ। ಕಲಿ ಮನದವ ಪಿತೃ ಮಾತ್ರಾದಿ ಗುರುದ್ರೋಹಿ। ಕಲಕಲಾ ಪಗಡಿ ಜೂಜಾಟ ಖಟ್ವಶಯ್ಯಾ। ಗೆಳಿಯರೊಂಚಕ ಅಲ್ಪ ಭೋಕ್ತಾ ದುರ್ಮಧಾಂದ। ಪೊಳೆವ ಶೃತಿ ತಂತ್ರನಾಮ ಬಾಹಿರ ವಿಪ್ರ। ನಲಿವ। ಪ್ರತ್ಯುಪಕಾರಿ ಆತ ತಾಯಿನಾತನ್ನ। ಕುಲದೈವ ಪರಿತ್ಯಾಗಿ ಕುಹಕ ಅಸೂಯಕಾ। ಇಳಿಯೊಳಗೀಪರಿ ಉಂಟು ಅನಾಗ್ನಿಕಾ। ಮಿಳಿತ ಮಾಡಲಾಗಿ ಬಹು ವಿಧ ಜನರನ್ನು। ಕುಳ್ಳಿರಪೇಳತಕ್ಕದಲ್ಲ ಪೈತ್ರಕಾಲದಲ್ಲಿ। ತಿಳಿವದು ಇದರ ವಿರುದ್ಧವಾದವನ್ನ। ಸಲೆ ತಾರತಮ್ಯ ಗುರುಹರಿಭಕ್ತಿ ಸ। ತ್ಕುಲ ಪ್ರಸೂತ ಪಂಚಭೇದ ಮತಿ ನಿತ್ಯ। ಗೆಲವಾಗಿ ಇರಬೇಕು ಹಗಲು

ಇರಳು ಅಲ್ಲ। ತುಲಸಿದಾಮ ಭೂಷಾವಿಜಯ ವಿಠ್ಠಲನಲ್ಲಿ। ನಿಲಿಸು ಮನಸು ನೀನು ಫಲರಹಿತವಾಗೊ ॥೪॥

**ಆದಿತಾಳ**

ಸ್ವರಶ ಶಬ್ದ ಕ್ರೀಯ ಕಾಲ ಭವ ದೃಷ್ಟಾ। ನಿರುತ ಈ ಪರಿ ತಿಳಿದು ತೊರದು ಶುದ್ಧಾತ್ಮಕವಾಗಿ। ಹಿರಿದಾಗಿ ಹಿಂದೆ ಉಚ್ಚರಿಸಿದ ದೇವಾಂಶರ। ಸ್ಮರಿಸಿದರಾಕ್ಷಣ ಮಾಡಿ ನೈವೇದ್ಯ। ವರ ಸುಧೋಪಮವಾಗಿ ಭೋಕ್ತರಿಗೆ ಮಹಾರುಚಿ। ಕರವಾಗಿ ಇಪ್ಪದು ತದ್ದೋಷ ಪರಿಹಾರಾ। ಧರಿ ಮೇಲೆಯಿದ್ದ ದಿವ್ಯ ಶುಭ ರಸಗಳು ಬಂದು। ಭರಿತವಾಗಿವೆ ಇಂದಿನ ದಿನದಲ್ಲಿ ಬಿಡದೆ। ಧರ ಭುವರ್ಲೋಕ ನಾಕ ಭವನದಲ್ಲಿ ಇದ್ದ। ಸರ್ವ ಪಿತೃಗಣದವರು ತೃಪ್ತಿಯಾಗುವರು। ಮರುತಾದಿತ್ಯ ಸಾಧ್ಯ ವಸು ರುದ್ರಾಶ್ವಿನಿ ಋಷಿ। ಎರಡೈದು ಗುಣವರು ಪಿತೃರೆನಿಸುವರು। ತರತಮ್ಯ ಇದರೊಳು ಸಿದ್ಧವಾಗಿದೆ ಇಂತು। ಪರಮಾನಂದದಲ್ಲಿ ಈ ಬಗೆ ಒಪ್ಪುತಿದೆ। ನರನೊಮ್ಮೆ ತುತಿಸಿಕೊಂಡಾಡಿ ಪಾಡಿ ಕೇಳಿ। ಶಿರದೂಗಿ ಅನುವಾದ ಮಾಡಿದಾದಡೆ। ವರ ಶೇತು ಜನಾರ್ದನ ಗೋಕರ್ನ ದ್ವಾರಾವತಿ। ಕುರುಕ್ಷೇತ್ರ ಮಾಯಾ ಕಾಶಿ ಬದರಿ ಪ್ರಯಾಗಯೋಧ್ಯ ಪುರುಷೋತ್ತಮ ಕಾಂಚಿ ಮಧುರಾವಂತಿಕ ಪುರಿ। ತರುಣೇಂದ್ಧು ಉಪರಾಗ ಗಯಸಪ್ತನದಿಯಲ್ಲಿ। ಸುರ ಭೂಸುರರಿಗೆ ಭೋಜನ ಮಾಡಿಸಿದ ಪುಣ್ಯ। ಬರುವದು ಒಂದಾನಂತವಾಗಿ ನಾನಾಫಲ। ಗುರುಸದ್ವಾರಾ ಪ್ರಸನ್ನ ವಿಜಯ ವಿಠ್ಠಲರೇಯ। ಎರಡೈವತ್ತೊಂದು ಗೋತ್ರದವರ ಉದ್ಧರಿಸುವಾ ॥೫॥

**ಜತೆ**

ನರಕೋದ್ಧಾರ ಸತ್ಯ ಇದರಿಂದ ಪಿತೃಗಳಿಗೆ ।
ನರಕಾರಾತಿ ನಮ್ಮ ವಿಜಯ ವಿಠ್ಠಲ ಸುಳಿವಾ ॥೬॥



## ಸುಳಾದಿ-೧೦೭

### ರಾಗ- ಕಾಂಬೋದಿ ಧ್ರುವತಾಳ

ನಿರ್ಗುಣೋಪಾಸ್ಯನಾಗು ನಿತ್ಯ ಸತ್ಯಾನಂದ। ವರ್ಗದಲ್ಲಿ ಇಪ್ಪ ಪರವು ಪುರುಷ ಪೂರ್ಣಗುಣಾಬ್ಧಿ। ಸ್ವರ್ಗದಿಂದಿತ್ತವುಳ್ಳ ಅನುಭವಿಸುವಪುಣ್ಯ। ನಿರ್ಗುಣದಲ್ಲಿ ಬಂದದ್ದೆಲ್ಲವೆನ್ನು। ದುರ್ಗಾಧರಣಿ ಶ್ರೀ ತ್ರಿಗುಣದ ವ್ಯಾಪಾರ। ದುರ್ಗತಿಗೆ ಬೀಳಸಾದು ಕಾಣೊ। ದುರ್ಗೆಯಾದ ಲೋಕಕ್ಕೆ ಸ್ವರಮಣ ಗುಣಕೆ ಮನ। ನಿರ್ಗಮನವಾಗದೇ ದೊರಿಯದೈಯ್ಯಾ। ದುರ್ಗಿಣಾರಾಧನಿಗೆ ಕೇವಲ ಕಷ್ಟಪಡುವ। ದುರ್ಗಂಧ ಪಾದಾದಿ ಮತ್ತಾವಗಾಗೋದು। ಮಾರ್ಗಬೇಕಾದರೆ ಗತಿಗೆ ಲಾಲಿಸು ಪಂಚ। ಮಾರ್ಗಣನೈಯ್ಯನೇ ಸರ್ವರೊಡಿಯ। ಭಾರ್ಗವಿ ಮಾತುರ ನಿತ್ಯ ಮುಕ್ತಳು। ಬೊಮ್ಮ। ದುರ್ಗಾಪತಿಯಾದ ಕೈಲಾಸ ಪತಿದೇವ। ವರ್ಗಾದಿಗಳು ತಾರತಮ್ಯಾನುಸಾರ ತಿಳಿದು। ಕುರ್ಗಣಿಗೆ ರಥ ತುಳಿದ ವಿಜಯ ವಿಠ್ಠಲನಂಘ್ರಿ ದುರ್ಗಾಶ್ರಮವ ಮಾಡಿದವನೆ ಜೀವನ್ಮುಕ್ತ ॥೧॥

### ಮಟ್ಟತಾಳ

ವ್ಯಭಿಚಾರದ ಭಕುತಿ ಏನೇನು ಮಾಡಿದರು। ಶುಭಲೋಕಕೆ ಗತಿಯಾಗದಯ್ಯಾ। ಇಭ ವರದನ ಪಾದಾದ ಬುಜದಳವನ್ನು। ಅಭಯನಾಗಿ ಭಜಿಸಿಕೊಂಡಾಡದಲೆ ಸು। ಲಭ ಜ್ಞಾನ ಬಂದು ಪ್ರಾಪುತವಾಗದು। ಕುಬುಜಿಯ ಪ್ರಿಯನಾದ ವಿಜಯ ವಿಠ್ಠಲರೇಯ। ನಭದಲ್ಲಿ ಪೊಳವನು ಪದುಮ ಕೋಶದಲ್ಲಿ ॥೨॥

### ತ್ರಿವಿಡಿತಾಳ

ಭಗವತ್ಕರ್ತೃತ್ವವ, ತಿಳಿದು ಇರಳು ಹಗಲು। ತ್ರಿಗುಣ ಶೀತನಾಗು ತವಕದಿಂದ। ಹಗೆಗೊಂಬ ನರನಲ್ಲಿ ಸಂಶಯಾದವನಲ್ಲಿ। ಮಗುಳೆ

ಕೊಂಡಾಡುವ ಸುಗುಣನಲ್ಲಿ। ಜಗದತ್ಯಂತ ಭಿನ್ನನಾಗಿದ್ದ ವಸುದೇವ। ಮಗನೆ ಮೂಲ ನಾರಾಯಣದೇವನು। ಬಗೆ ಬಗೆ ವ್ಯಾಪಾರ ಅಂತರ್ಯಾಮಿಯಾಗಿ। ನಗುತಾ ಮಾಡಿಪನೆಂದು ಪ್ರತಿಕ್ಷಣದಲಿ। ಮಿಗೆ ಜ್ಞಾನದಲಿ ನಿತ್ಯ ಸಮವಾಗಿ ನೋಡುತ್ತ। ನಿಗಮ ಶ್ರೀಹರಿಯ ಗುಣಾನುಸಾರ। ಅಗಣಿತದಿಂದಲಿ ಆತನ್ನ ಚರಿತೆಯ। ಬಿಗಹು ತೆಗೆಯದಲೆ ನುಡಿವಾವೆಂದು। ಹಗೆ ಮಿತ್ರರವರಲ್ಲ ಹರಿ ತಾನೆ ಪರಸ್ಪರ। ಝುಗಳಾಡುವನು ಸ್ನೇಹ ಮಾಡುವನು। ಖಗ ಮೃಗ ಉರಗ ಅಂಡಜವು ಮಿಕ್ಕ। ಜೀ। ವಿಗಳಚೇಷ್ಟಾಚೇಷ್ಟಾನಿಬಿಡಿಯಾದ। ತ್ರಿಗುಣಾವನು ಸರಿಸಿ ಮಾಡುವ ಪರಿಕ। ಣ್ಣಿಗೆ ಪೊಳದವು ಪೊಳಿಯದಿದ್ದವು। ಯುಗಳಾಭಾವದಲಿ ಮಾಡುವ ಕಡಿಗೆ ವೊ। ಬಗೆಯಲ್ಲದೆ ಪ್ರತಿ ತಂತ್ರವಿಲ್ಲ। ತಿಗರಿಯೆಂದದಿ ಲೋಕ ತಿರುಗಿಸುವನು ಸಹ। ಸಿಗನು ಪ್ರಳಯಾ ದೂರ ಪ್ರಣವಪಾದ್ಯ। ಸಿಗನು ವೊಳಗಿದ್ದು ತನ್ನ ಕುರುಹ ಅನ್ಯ। ರಿಗೆ ಪ್ರೇರಿಸುವ ನೆಂದೆಂದಿಗೆ ಹೀನಯಾ। ಹೀಗೆ ಎನಲಾಗದು ವಸ್ತಾ ನಿರ್ಧಾರ ಗ। ತಿಗೆ ಮಾರ್ಗ ಮಾಡುವ ಬಲು ಅಂದದಿಂದಲಿ। ನಿಗಮಶಯನ ನಮ್ಮ ವಿಜಯ ವಿಠ್ಠಲನ ಕಾ। ರ್ಯಂಗಳ ಮನೋ ವಾಚ ಕಾಯದಲ್ಲಿ ನೋಡು ॥೩॥

**ಅಟ್ಟತಾಳ**

ತದಾಕಾರ ತದ್ವರ್ನ ತದ್ರೂಪ ತತುಶಬ್ದ। ತದು ವಿಸ್ತೀರ್ಣ ತತು ತತು ಉನ್ನತ। ತದಾಗತ ತನ್ನಿಯಾಮಕ ತನ್ನಾಮಕ। ತದು ವ್ಯಾಪಾರವು ತತು ತತು ತಕ್ಕದು। ವಿಧಿ ನಿಷೇಧಾ ಸರ್ವ ಪ್ರಾಕೃತ ಸ್ವರೂ। ಪಾದ ದೇಹದಲಿ ಹರಿ ತತು ತತು। ಇಂದ್ರಿಯಂಗಳಿ ವಾಸವಾಗಿ। ಪದೋಪದಿಗೆ ವಂದಾನಂತಾ ರೂಪದಲ್ಲಿದ್ದು। ಸುದತಿ ಶ್ರೀಯೊಡನೆ ಅನೇಕ ಬಗೆಯಿಂದ। ಸದಮಲನಾಗಿದ್ದು ನಡಿಸಿ ನುಡಿಸಿ ಕೋ। ವಿದ ರಾಯಾ ಜಗವೆಲ್ಲಾ ವ್ಯಾಪಿಸಿಕೊಂಡಿಪ್ಪಾ। ಉದಕದ ಬಿಂದು ವಸ್ತ್ರದ ಮೇಲೆ ಇಡಲಾಗಿ। ಅದರಂತೆ ಹೊರಗೆ ಒಳಗೆ ಸಾಂದ್ರವಾಗಿ। ಪದರು ಬಿಡದಲೆ

ಪ್ರತಿಬಂಧವೆನಿಸದೆ। ಅದುಭೂತ ಶಕ್ತನು ಸರ್ವರಿಗೆ ಮೀ। ರಿದ ದೈವಾ ಅನಾದಿ ಸಿದ್ಧ ಪ್ರಸಿದ್ಧ। ದಧಿಯೊಳು ನವನೀತಾವಿದ್ದ ತೆರದಿ ಕಾಣೊ। ಸದಲಿಪ್ಪ ಅವ್ಯಕ್ತವಾಗಿ ಪ್ರತಿದಿನ ಮದಗರ್ವ ಬಿಟ್ಟು ಜ್ಞಾನ ದಂಡಾದಿಂದ ಕ। ಡದರೆ ಪರಮಾತ್ಮಾ ವ್ಯಕ್ತನಾಗುವನು। ಹೃದಯದೊಳಗೆ ತಿಳಿಯದೆ ಉಪಾಸನೆ। ಇದನೆ ವೊಳಗೆ ಹರಿ ಪ್ರೇರಿಸಿದನೆಂದೂ। ಮುದದಿಂದ ನಲಿದಾಡು ನಿರ್ವ್ಯಾಜರ ಕೂಡಾ। ಪದುನಾಭ ನಮ್ಮ ವಿಜಯ ವಿಠ್ಠಲನ್ನ। ಮೊದಲು ತುದಿ ಮತ್ತಾವದು ಬಿಡದು ಎಣಿಸೂ ॥೪॥

### ಆದಿತಾಳ

ಪ್ರತಿಮೆ ಜಡಗಳೆನ್ನು ಹಿತ ನುಡಿಗಳು ವೇದ। ತತಿ ಉಕ್ತಾವೆನ್ನು ಸಂತತ ಕುಡಿವಾ ನೀರು। ತೀ। ರಿತಾವೆನ್ನು ನಡುವಾ ಅಮಿತಹೆಜ್ಜೆ ಯಾತ್ರೆಯನ್ನು। ಕಥೆ ಕಲ್ಪ ಇತರು ಆಡುತಲಿಪ್ಪ ಮಾತು ಮಂತ್ರೆಯನ್ನು। ಮಿತಭೋಜನಾ ನೈವೇದ್ಯ ಅಮೃತ ಪ್ರಾಶನವೆನ್ನು। ಸಿತ ವಸ್ತ್ರ ಹೊದುವಾದ ಚ್ಚುತನ ನಡುಮಡಿಯನ್ನು। ಸತು ಪರಿಮಳ ಅಲಂಕೃತ ನಾನಾ ಪುಷ್ಪಾ। ನಿರತು ಧರಿಸಿದವೆಲ್ಲಾರಿತ ಹರಿ ಧರಿಸಿದವೆನ್ನು। ಪಿತಮಾತಾ ಸಹೋದರ ಸತಿಸುತಾ ಉಭಯ। ಸಂತತಿ ಪರಿವಾರ ಭಕುತರೆನ್ನೂ ಧೃಡವಾಗಿ। ಕ್ಷಿತಿಸುರಕಾರಾಧನೆ ಹುತವಹನಿಗೆ ಆ। ಹುತಿ ಹಾಕುವದು ಶ್ರೀಪತಿಗೆ ಕವಳಾವೆನ್ನು। ಗತಿಗೆ ಪೋಗುವದಕ್ಕೆ ಅತಿಶಯವಾದ ಸಂ। ಗತಿಯನು ಪೇಳುವೆ ಚತುರ ಬಗೆ ತಿಳಿ। ಮತಿವಂತನಾಗು ಶ್ರೀ ವಿಜಯ ವಿಠ್ಠಲ ಸರ್ವ। ಗತ ಸರ್ವಭೋಕ್ತಾ ವ್ಯಾಪುತ ವ್ಯಕ್ತಾವ್ಯಕ್ತಾ ॥೫॥

### ಜತೆ

ಎಲ್ಲೆಲ್ಲಿ ಸರಿ ಬಂದಾ ಬಂದಲ್ಲಿ ನೋಡು ಶ್ರೀ ।
ವಲ್ಲಭ ವಿಜಯ ವಿಠ್ಠಲನಾ ನಿರ್ಗುಣದಲ್ಲಿ ॥೬॥



# ಸುಳಾದಿ-೧೦೮

ಸರ್ವ ಸಮರ್ಪಣೆ ವಿಧಾನ

## ರಾಗ- ಭೈರವಿ ಧ್ರುವತಾಳ

ಸರ್ವ ಸಮರ್ಪಣೆ ಮಾಡು ಮುಕ್ತಿಯಾ ಬೇಡು। ಶರ್ವಾಧಿಷ್ಟಾನಾ ತ್ರಿವಿಧಾ ತಿಳಿದು। ಸರ್ವಜ್ಞ ಹರಿ ಎಂದು ತ್ರಿಕರ್ಣಾವಾಗಿ ನುಡಿದು। ಗೀರ್ವಾಣಾರೊಡತೆ ಶ್ರೀ ಲಕುಮಿವಿಡಿದೂ। ಈರ್ವಾಗೆ ಜನರನ್ನು ತಾರತಮ್ಯಾದಿ ಗುಣಿಸಿ। ಊರ್ವಿಯೊಳಗೆ ನಿಃಸಂಗನಾಗೊ। ಸರ್ವದಾ ಮುಖ್ಯ ಭಕ್ತಿಯಲ್ಲಿ ಧೃಡನಾಗು। ಸರ್ವಜ್ಞರಾಯರ ಮತದಲ್ಲಿದ್ದೂ। ದರ್ವಿಯಂದದಿ ಸರ್ವ ವಿಷಯಂಗಳೊಳಗಿರು। ನಿರ್ವಾಹ ಕರ್ತನಿಗೆ ಮನವೊಪ್ಪಿಸೀ। ಗರ್ವಾರಹಿತವಾದ ಸಾಧನದಲ್ಲಿ ನಡದು ಪೂರ್ವೋತ್ತರ ಜ್ಞಾನ ವಿಚಾರಿಸಿ। ಓರ್ವನಿಂದಲೆ ಎಲ್ಲಾ ಸುಖದುಃಖ ಬಪ್ಪೊದೆಂದು। ನಿರ್ವ್ಯಾಜ್ಯ ಗುಣದಲಿ ತಿರುಗೂವದೂ। ನಿರ್ವಾಣ ಬೇಡಸಲ್ಲ ಈ ಪರಿ ಇಪ್ಪವಂಗೆ। ದೂರ್ವಿ ವಿರಿಸೇ ಹರಿ ಒಡನಾಡುವಾ। ಪರ್ವತ ಮೊದಲಾದ ತತ್ವಪದಾರ್ಥದಲ್ಲೀ। ಸರ್ವೇಶ ಅದರಂತೆ ಇಪ್ಪಾನೆಂದೂ। ಸರ್ವೋತ್ಕೃಷ್ಟ ಮೂರುತಿ ವಿಜಯವಿಠಲರೇಯಾ। ದುರ್ವಾದಿಗಳ ಗಂಡಾ ಸತತೋದ್ದಂಡಾ ॥೧॥

## ಮಟ್ಟತಾಳ

ನಾನೆ ಸರ್ವಕರ್ತಾನೆಂದೆಂಬವ ತಮಸಿ। (೧) ನಾನೇ ಹರಿ ಒಡನೇ ಮಾಳ್ಪನೆಂಬವ ಐದ್ಧಾ (೨) ನಾನು ಪಾಪ ಕರ್ತಾ ಪುಣ್ಯಕ್ಕೆ ಹರಿಯೆಂದು ಈ ನುಡಿ ನುಡಿವವನು ಸತ್ವಗುಣದವನು। (೩) ನಾನ್ಯಾತಕ ಸಲ್ಲಾ ಹರಿ ಎನ್ನಿಂದಲೀ। ನಾನಾತ್ಮಗಳಿಂದ ಬಗೆ ಬಗೆ ವೈಷಕ್ಯಾ ಏನೇನೇನು ಮಾಡಿಸುವಾ ಮಾಡುವನದರಂತೆ। ಹೀನ ಲೇಸುಗಳಲ್ಲಿ ಹಿತಾ

ಹಿತದಲ್ಲಿ ಸರ್ವ ಸಮರ್ಪಣೆ। ಸ್ವಾನುಭಾವಕೆ ನಿತ್ಯಾ ತಂದುಕೊಂಬುವ ಮನಕೆ। ಅನಂತ ರವಿತೇಜಾ ವಿಜಯ ವಿಠಲನ್ನಾ। ಕಾಣುತ ತಿರಗೂವಾ ನಿರ್ದೋಷ ಎನುತಾ ॥೨॥

### ತ್ರಿವಿಡಿತಾಳ

ಹಿಟ್ಟು ಘಾಳಿಗೆ ತೂರಿ ಮರಳೆ ಕೂಡಿಸಿಕೊಂಡು। ರೊಟ್ಟಿಯ ಸುಟ್ಟುಕೊಂಡು ಉಂಬೇನೆಂದು। ಅಟ್ಟಹಾಸವ ಮಾಡಿ ದಿನ ಪ್ರತಿದಿನದಲ್ಲಿ। ಕಷ್ಟವ ಬಟ್ಟದರಿಂದ ಫಲವಾಹದೇ। ಸೃಷ್ಟಿಯೊಳಗೆ ಮನುಜಾ ಸರ್ವಬಗೆಯಿಂದ। ಶಿಷ್ಟನಾಗಿ ಇದ್ದು ಆಚರವಾ। ಎಷ್ಟು ಮಾಡಿದರೇನು ನಿರ್ಗುಣನಾಗಿ ಮನ। ಮುಟ್ಟಿ ಸರ್ವಾರ್ಪಿತವೆನ್ನದನಕಾ। ಕೃಷ್ಣಾ ಮೆಚ್ಚನು ಕಾಣೊ ಗತಿಗೆ ಸಾಧನವಲ್ಲಾ। ಇಷ್ಟರೊಳಗೆ ಆವಾ ಸುತ್ತುತಿಪ್ಪಾ। ಕಟ್ಟಕಡಿಗೆ ಇದೆ ಮುಕ್ತಿ ಯೋಗ್ಯಕೆ ಜ್ಞಾನಾ। ಪುಟ್ಟಾದಲೇ ಬಿಂಬಾದರ್ಶನವಾಗದೂ। ಎಟ್ಟಿ ಮಾನವರಿಗೆ ವರದೊರದು ಕೇವಲಾ। ಗುಟ್ಟು ಪೇಳಿದರಿಂದ ಏನಾಹದೂ। ಧಿಟ್ಟಾ ದೈವಗಳ ರಸಾ ವಿಜಯ ವಿಠ್ಠಲ ಜಗ। ಜಟ್ಟಿಗೆ ಪಾಪ ಪುಣ್ಯದ ಲೇಪನವೇನೊ ॥೩॥

### ಅಟ್ಟತಾಳ

ಮೂಜ್ಜಗದೊಳು ಹರಿ ನಿಬಿಡಿ ಕೃತನಾಗಿ। ತಜ್ಜೀವಿಗಳಂತೆ ವ್ಯಾಪಾರಾ ಮಾಡುವಾ। ನಿರ್ಜರರ್ವಿಡಿದು ತೃಣಾಂತ ನೋಡಲಾಗಿ। ಪೂಜ್ಯ ಭಾವವೆ ಪ್ರತ್ಯೇಕಾವಾಗಿಪ್ಪೋದು। ದುರ್ಜನ ಹರ ಹರಿಯಾ ಇನಿತು ಭಜನೆ ಕೆಲವ। ಸಜ್ಜನರಿಂದಲಿ ಕೈಕೊಳತಾಲಿಪ್ಪಾ। ವಜಕ್ಕೆ ಹರಳಿನಾ ವ್ಯಥಿ ಆದೂದೆಂದು ಮ। ನುಜ್ಜರು ಪೇಳಿದಂತಾಗೋದು ಮುಸಿ ಎಲ್ಲ। ಎಜ್ಜಾ ಮಾಡಿದರಾಗೆ ಹರಳಿಗೆ ವೇಧನೆಯುಂಟೆ। ಅಬ್ಬಾ ಮೋಣಿಪದಕ್ಕೆ। ಗಾಢರ ತರಸಲ್ಲಾ। ಅಬ್ಜಾ ಭವನಯ್ಯಾ ವಿಜಯವಿಠಲರೇಯಾ। ಲಜ್ಜೆ ಬಿಡದವಗೆ ಲಂಪಟಾ ಕಟ್ಟುವಾ ॥೪॥

**ಆದಿತಾಳ**

ಬಂದರೆ ಬರುವೆನೆಂದು ಇದೇ ಆರಂಭಿಸಿ। ಒಂದೊಂದು ಮಾತುಗಳು ಯಾವಜ್ಜೀವ ಪರಿಯಂತ। ತಂದುಕೊಳ್ಳಲಿಬೇಕು ತನ್ನ ಮನಸಿಗೆ ಬಿಡದಾನು ಸಂಧಾನ ಆವಲ್ಲಿ ಪೋದಲ್ಲಿ ಇದ್ದಲ್ಲಿ। ನಂದವಾಗಲಿ ಅತಿ ಕ್ಲೇಶವಾಗಲಿ ಆ। ನಂದವಾಗಲಿ ಲಾಭ ನಷ್ಟವಾಗಲಿ ಗೋ। ವಿಂದನೆ ನಿನ್ನ ಪ್ರೀತಿ ಎನಬೇಕು ನಗಬೇಕು। ಹಿಂದೆ ಮುಂದೆ ಸಂಸಾರವೆಂದೆಂಬ। ಸಂದಣಿಯೊಳಗಿರೆ ನಿರ್ಭಯಾದವ ನಿವಾ। ಸಂದೇಹ ಪೋಗಾಡುವ ವಿಜಯ ವಿಠಲರೇಯಾ। ಎಂದೆಂದಿಗೆ ತನ್ನಾ ಭಕ್ತಾರ ಪೊರವಾ ॥೫॥

**ಜತೆ**

ಸಾಧಾರಣಾ ಸಾಧಾರಣ ಹರಿಗೆ ಒಪ್ಪಿಸಿಕೊಟ್ಟ ।<br>
ಮೋದಾದಲ್ಲಿರು ವಿಜಯ ವಿಠ್ಠಲನ್ನ ನೆರೆನಂಬೀ ॥೬॥



**ಶ್ರೀಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು**



## ಸುಳಾದಿ-೧

### (ಬಿಂಬ ಕ್ರಿಯಾ)

ಪರತರ ಸೂಕ್ಷ್ಮಕಾಲಾರಂಭಿಸಿ, ಬ್ರಹ್ಮಕಲ್ಪ ಸಾಧನ ವಿಚಾರ ತಿಳಿದು ಕಾಲಕ್ಕೆ ನಿಯಾಮಕನೇ ಬಿಂಬನಾದ ಹರಿ, ಬಿಂಬಕ್ರಿಯಾವಾನ್‌ನೆಂದು ತಿಳಿದು, ಹರಿಸರ್ವಸ್ವಾತಂತ್ರನು ಸಕಲಕ್ರಿಯಾಮಾಡಿಸಿದ ಕಾಲಕ್ಕೂ ಫಲ ಭೋಕ್ತನಲ್ಲ ಇತ್ಯಾದಿ.

**ರಾಗ- ಭೈರವಿ ಧ್ರುವತಾಳ**

ಪರತರ ಸೂಕ್ಷ್ಮಕಾಲ ಅನುಭವಕೆ ತಂದುಕೊಂಬ। ಪರಿಯ ತಿಳಿಯಬೇಕು ಎಣಿಸಿ ಗುಣಿಸೀ। ಸರಸಿಜ ಯಳೆದಳಗಳು ಜೋಡಿಸಿ ಶತಸಾವಿರ। ತ್ವರಿತದಿಂದಲಿ ಸೂಜಿ ಕೊನೆ ಪೋಣಿಸಿ। ಇರದೆ ಅದೆ ಕಾಲದಲ್ಲಿ ಸಮಸ್ತ ವನಜದಳವು। ಥರ ಥರ ಒಂದೊಂದಕ್ಕೆ ಪ್ರತ್ಯೇಕವು। ಭರದಿಂದ ಛಿದ್ರಗಳು ಬೀಳೊವು ಇದರೊಳಗೆ। ನಿರಿಕ್ಷಿಸು ಆದಿ ಮಧ್ಯಂತವೆಂದೂ। ಕರಿಸಿಕೊಳುತಲಿಪ್ಪವು ಕಾಲ ವ್ಯವಧಾನವಾಗಿ। ಅರಿತು ನೋಡಲೊ ಮನುಜ ಮೊದಲಿಗಿಂತ। ಎರಡನೇ ಛಿದ್ರಕ್ಕೆ ದೇಶ ವ್ಯವಧಾನವೆನ್ನು। ಸ್ಮರಿಸತಕ್ಕದ್ದು ಪೇಳಲ್ಲಿ ಕೂಡದೂ। ಗುರುತು ಮಾತ್ರ ಇದೆ ತೋರಿಸಿಕೊಟ್ಟದ್ದು। ತಿರುಗಿ ಈ ಪ್ರಕಾರದಲ್ಲಿ ಎಣಿಕೆ ಮಾಡೆ।- ಪರಮಾಣುಕಾಲ ಮೀರಿ ಹೋಗುವದು ಸಿದ್ಧ। ಹರಿ ಮಹಿಮೆ ಮಹಾ ಮಹಾ ವೈಚಿತ್ರವೊ। ಧರಣಿಯೊಳಗೆ ಬಂದು ಪುಟ್ಟಿದ ಮಾನವ। ಮರಳೆ ಅನಂತದೋಷ ದೂರ ಮಾಡಿ। ಕರಣ ಶುದ್ಧನಾಗಿ ಸಾಧನಗೈದು

ನಿಂದರದೆ ವೈಕುಂಠ ಸೇರುವ ಮಾರ್ಗವ। ಅರಘಳಿಗೆಂಯೊಳಗೆ ಮಾಡಿಕೊಂಡು ಪೋಗಲಿಬಹುದು। ಸರಸಿಜಭವನಕಲ್ಪ ಪರಿಯಂತರಾ। ನರಗೆ ಸಾಧನಮಾಳ್ಪ ಯೋಗ್ಯತಾವಿರಲು। ಪರಮ ರಹಸ್ಯ ಉಂಟು ಈ ಕಾಲವೆ ಸಾಧಿಸಿ ತರತಮ್ಯ ಗುಣದಿಂದ ಸರ್ವಾ! ಎರಡೊಂದು ವಿಧಿಯುಳ್ಳ ಜೀವರ ವಿವಿಧ ಬಗೆ। ಪರಿ ಪರಿ ಗುಣರೂಪ ಕ್ರೀಂಯಂಗಳು ಚರಿಸುವಾಚರಣೆ ಮಾಳ್ಪ ಅಣು ಮಹತ್ತಕೆ ಸಿರಿ। ಹರಿಮೂರ್ತಿ ಬಿಂಬ ತಿಳಿದು ಪ್ರತಿಬಿಂಬವಾ। ಸುರ ಮೊದಲಾದವರ ನೋಡಿ ತಿಳಿದು ಕೇಳಿ। ನಿರುತ ಈ ಮಾತಿನಂತೆ ಚಿಂತೈಯ್ಯೊ। ಪರಮ ಪುರುಷ ರಂಗಾ ವಿಜಯ ವಿಠ್ಠಲರೇಯನ। ಅರಸುತನಕೆ ನಾನೆಲ್ಲಿ ಎದಿರುಗಾಣೆ ॥೧॥

### ಮಟ್ಟತಾಳ

ಇಂಥ ಕಾಲ ಕ್ಲಿಪ್ತಿ ಪೇಳಿದೆನಿದರೊಳಗೆ। ಅಂತರಂಗದಲ್ಲಿ ಚಿತ್ತ ಶುದ್ಧನಾಗಿ। ಚಿಂತೆಯನು ಮಾಡು ಜ್ಞಾನಪೂರ್ವಕದಿಂದ। ನಿಂತಲ್ಲಿ ತಿರುಗಿ ಬರುತ ಕುಳ್ಳಿರುವಲ್ಲಿ। ಮುಂತೆ ಶಯನದಲ್ಲಿ ಇದರಂತೆ ಸರ್ವ। ಜಂತುಗಳಲ್ಲಿ ಜಡ ವಿಕಾರತನದಲ್ಲಿ। ಎಂತೆಂತು ಎಂತೊ ಎಂದು ಯೋಚನೆ ಮಾಡದೆ। ಸಂತತ ಶ್ರೀ ಲಕುಮೀಕಾಂತನ ವ್ಯಾಪಾರ। ಸಂತರ ಕೂಡಿಕೊಂಡು ಸುಖ ದುಃಖಪ್ರದಾ। ನಂತ ಕಾಲಕೆ ತಾನೆ ನಿಯಾಮಕ ಸರ್ವಸ್ವ ತಂತ್ರ ಪುರುಷ ಹರಿ ಅನಾದಿ ಗುಣಪೂರ್ಣಾ। ನಂತ ಮೂರುತಿ ನಿಃಶೇಷ ದೋಷ ದೂರಾ। ಶಾಂತ ವೈಭವ ಅಖಿಳ ಲೋಕ ವಿಲಕ್ಷಣ। ಕಂತು ಜನಕ ವಿಜಯವಿಠ್ಠಲ ಪರಬೊಮ್ಮ। ಸಂತರಿಸುತಿಪ್ಪ ತನ್ನವರನು ಬಿಡದೆ ॥೨॥

### ತ್ರಿವಿಡಿತಾಳ

ಮುಕ್ತಿ ತಮೊಯೋಗ್ಯರ ಬಿಂಬ ಹರಿಯಾದಡೆ। ಸಕಲ ಕರ್ಮಗಳು ಹರಿ ಉಣಲಿಬೇಕು। ಯುಕುತಿ ಕೈಕೊಳ್ಳದು ಎಂಬ ಮಾತೆ ಸಲ್ಲಾ। ಉಕುತಿಯ ಲಾಲಿಪದು ಉತ್ತಮ ಜನರೂ। ಪ್ರಕಟವಾಗಿದೆ ಕೇಳಿ ಸರ್ವಜನ

ಬಲ್ಲದು। ಮಕ್ಕಳ ಪಡೆದ ತಂದೆ ಅವರಿಗೆ ವೈವಾಹ। ಸುಖದಿಂದ ಮಾಡುವ ಮಡುತಿಪ್ಪ। ಅಕಟ ಉಳಿದವರೆಲ್ಲ ಮದವಣಿಗನ ಸಹಿತ। ವಿಕಟಿತನವಿಲ್ಲದೆ ಮಾಡುತಾನೆ ಎಂದು। ಅಖಿಳ ನ್ಯಾಯದಿಂದ ಆಡುವರೂ। ಮುಕುತಾರ್ಥ ಇವರ್‍ಯಾರು ಭೋಗಿಸುವದೇನು। ಅಕಳಂಕರಾಗಿ ಬಾಳುತಿಪ್ಪರೋ। ಸಕಲ ಭೋಗಂಗಳು ಆ ಸತಿ ಸಂಗಡ। ಸುಖಬಡುವ ಮಾಡಿಕೊಂಡವನೊಬ್ಬನೆ। ಕಕುಲಾತಿ ಮಾಡುವದೆ ಇದಕೆ ಶಂಕಿಸಿ ಮಹ। ಶಕುತ ಅಚಿಂತ್ಯಾದ್ಭುತ ಶಕ್ತಗೆ। ಪ್ರಕೃತಿಬದ್ಧರ ತೆರದಿ ಚರಿಯಾ ಮಾಡಿದರು ಬಾ। ಧಕವಿಲ್ಲ ಕಾಣೊ ತದ್ವ್ಯಾಪಾರದ। ಸುಕುಮಾರ ಇವರ ಗುಣಾದಿಯೊಳಗೆ ತನ್ನ। ಶಕುತಿ ಮಿಕ್ಕಾದ ಸ್ವರೂಪ ಭೂತಾ। ನಿಕರಾನಂತ ಸತ್ಯವಾಗಿದೆ ತದಾಕಾರಾ। ತಕತಕ್ಕದ್ದು ಅಲ್ಲಿ ಪ್ರವೇಶಿಸೀ। ಅಖಂಡವಾಗಿ ನಿಂದು ಮಾಡುವ ಕರುಣಿಗೆ। ದುಃಖರಹಿತನು ಕಾಣೊ ಸರ್ವಕರ್ತಾ। ಮುಖದಿಚ್ಛೆ ಇದೆಯಲ್ಲ ವೇದಶಾಸ್ತ್ರ ದಲಿ ಕ। ರ್ಮಕೆ ಸ್ವಾತಂತ್ರಕಿ(ತೆ) ಉಂಟೆ ಉಭಯದಲ್ಲಿ। ಮುಕುತರಿಗೆ ಹರಿ ಸ್ವಾಮಿ ತಮೋಯೋಗ್ಯರಿಗಲ್ಲವೇ। ಭಕುತಭಕ್ತರಿಗೆ ಪ್ರೇರಕ ನಿಶ್ಚಯ। ಸಖನಾಗಿ ನಮ್ಮ ವಿಜಯ ವಿಠ್ಠಲರೇಯಾ। ಮಖ ಮಿಗಿಲಾದ ಕರ್ಮಕೆ ಶಕ್ತಿಯ ಕೊಡುವಾ ॥೩॥

### ಅಟ್ಟತಾಳ

ಹರಿಬಿಂಬನಾದರೆ ಸಮಸ್ತ ಜೀವಿಗಳಿಗೆ। ನರಕ ಮುಕುತಿ ಎಂಬ ಭೇದವ್ಯಾತಕೆ। ನಿರುತರ ಸುಖವೆ ಅಥವಾ ದುಃಖವಾದರೂ। ತೆರವಿಲ್ಲದೆ ಅನುಭವಿಸಬೇಕಾಹದೂ। ಧರೆಯೊಳಗೀಬಗೆ ಸುಖದುಃಖ ಸಮವ್ಯಾಕೆ! ಹರಿಬಿಂಬವ್ಯಾತಕೆ ತಮತಮ್ಮ ಸ್ವಾತಂತ್ರ। ಪರರಾಗಿ ಕರ್ಮವು ಮಾಳ್ಪರೆಂದೆನಬೇಕು। ಸರಿಯನೆ ಈ ಮಾತು ಸತ್ಯವಾದರೆ ಕೇಳಿ। ಎರಡಾರು ಸ್ತೋತ್ರದಲ್ಲಿ ಮಧ್ವರಾಯರ। ವರವಾಕ್ಯಗಳು ಉಂಟು 'ನಚಕರ್ಮಾದಿಗಳೆಂದು'। ಸುರ ನರೋರಗರೆಲ್ಲ ತಲೆದೂಗುತಲಿದೆ। ಅರಿಯ ಗೊಡದಂತೆ ಅವರವರ ಕರ್ಮವ। ಹರಿತಾನೆ ಪ್ರೇರಿಸಿ ಮಾಡಿಸುವನು

ಇಂಥ ಪರತತ್ವ ಪರತತ್ವ ತಿಳಿದು ಕೊಂಡಾಡಲು। ನಿರಯ ದೂರನಾಗಿ ಸೇರುವ ಸದ್ಗತಿ। ಉರಗಶಾಯಿ ನಮ್ಮ ವಿಜಯ ವಿಠ್ಠಲರೇಯಾ। ಸರ್ವರೊಳಗೆ ಯಿಪ್ಪ ತದ್ಭಿನ್ನತದ್ಗತನೊ ॥೪॥

## ಆದಿತಾಳ

ಎಲ್ಲಿ ಹರಿಬಿಂಬನಾಗಿ ಇದ್ದರೆ ನಿಂದ್ಯ ಕರ್ಮ। ವಿಲ್ಲದೆ ಪೋಯಿತೆಂಬ ವಾರ್ತಿ ಉಂಟಾದುದ್ದೇನೆ। ಬಲ್ಲಿದ ಹರಿಮೂರ್ತಿಯ ಬಿಂಬ ಚೇಷ್ಟಿಗೆ ಮಾತ್ರ ಸಲ್ಲುವದೊ ಮಹಸ್ತೋತ್ರ ವಂದನೆಗಳು। ಇಲ್ಲಿ ಪ್ರಮೇಯ ಕೇಳು ಮುಕ್ತಬ್ರಹ್ಮಾದ್ಯರ ಆ। ಕಲ್ಯಾದಿಗಳು ತಮೊ ಯೋಗ್ಯರೆಂಬೊದು ನಿಜವೂ। ಫುಲ್ಲಲೋಚನ ಇವರ ಸ್ವಭಾವ ಗುಣಕರ್ಮ। ಬಲ್ಲ ಪ್ರಬಲವಂತ ಇದರಂತೆ ತಾನೆ ಚರಿಸಿ। ಹೊಲ್ಲೆ ಒಳಿತಗಳೆಲ್ಲ ಜೀವರಿಗೆ ಉಣಿಸಿ ಕಡಿಗೆ। ಎಲ್ಲೆಲ್ಲಿ ಇಡುವವರ ತಾನು ಸಂಗಡಲಿದ್ದು। ಅಲ್ಲಿಗೆ ಕೊಂಡೊಯ್ದು ಪೊಂದಿಸುವ ಸಮರ್ಥ। ಎಲ್ಲಿಂದ ಒಳಪೊಕ್ಕು ಎಂದಿನಾರಭ್ಯವಾಗಿ। ನಿಲ್ಲದೆ ಈ ಕರ್ಮಂಗಳ ಮಾಡುತಿಪ್ಪನೆಂದರೆ। ಸೊಲ್ಲು ಮೆಚ್ಚುವದಲ್ಲ ಅನಾದಿಯಿಂದ ಬಂದ। ದಲ್ಲದೆ ಇದು ಮಧ್ಯದಲ್ಲಿ ಬಂದದುಂಟೆ। ಎಲ್ಲಕ್ಕೆ ಹರಿತಾನೆ ಚೇಷ್ಟಪ್ರದನಾಗಿದ್ದು। ವಲ್ಲನು ಕಾಣೊ ನಮ್ಮ ಸುಖದುಃಖಗಳು ಬೇರೆ। ಹುಲ್ಲು ಮೊದಲಾದ ಅಣು ಮಹತುಗಳಷ್ಟು। ಅಲ್ಲಾಡುವದು ನಮ್ಮ ಹರಿಯ ವ್ಯಾಪಾರವೆನ್ನು। ಬೆಲ್ಲವ್ಯಾತಕೆ ಸೀ ಎಂದರೆ ಉತ್ತರ ಉಂಟೆ। ಕಲ್ಲು ಮೃದುವಿಲ್ಲವೆಂದರೆ ಪರಿಹಾರ ಉಂಟೆ। ವಲ್ಲವಲ್ಲಭ ತನ್ನ ಸ್ವರೂಪ ಕ್ರೀಡೆ। ಯಲ್ಲಿ ಕ್ರೀಡಿಸುತಿಪ್ಪ ಗುಣರೂಪ ಕ್ರಿಯದಲ್ಲಿ। ಉಲ್ಲಾಸನಾಗಿ ಮೊದಲು ಪೇಳಿದ ಕಾಲದೊಳಗೆ। ಯಳ್ಳಿನಿತಾದರು ಹರಿಲೀಲೆ ತಿಳಿದವ। ಸಲ್ಲುವನು ತನ್ನ ಸ್ವ ಸ್ವಯೋಗ್ಯತೆ ಸ್ಥಾನ। ಮಲ್ಲರ ವೈರಿ ನಮ್ಮ ವಿಜಯ ವಿಠ್ಠಲರೇಯಾ। ಎಲ್ಲ ಮಾಡುವ ಮಾಡಿಸುವ ಪ್ರೇರಿಸುವಾ ॥೫॥

**ಜತೆ**

ಬೊಮ್ಮಾಂಡದೊಳಗೆಲ್ಲ ಬಿಂಬಕ್ರಿಯವೆ ತಿಳಿಯೇ।
ರಮ್ಮೆಯರಸ ಶೌರಿ ವಿಜಯ ವಿಠ್ಠಲ ಕುಣಿವಾ ॥೭॥

❖ ❖ ❖

## ಸುಳಾದಿ-೨

(ಶ್ರೀಹರಿ ಸ್ವಾತಂತ್ರ್ಯ ವಿಷಯ)

### ರಾಗ-ಮಧ್ಯಮಾವತಿ ಧ್ರುವತಾಳ

ಹರಿಯೆ ಸ್ವತಂತ್ರ ನಿರ್ದೋಷ ಶಿಖಾಮಣಿ। ಪರದೈವ ಸರ್ವ ವ್ಯಾಪ್ತ ಬಲು ಸುಂದರಾ। ವರ ಸತ್ಯ ಸಂಕಲ್ಪ ಅಪ್ರಾಕೃತ ಶರೀರಾ। ಪರಮ ಸ್ವರೂಪಾಲಂಕಾರ ಕರುಣಾ ಜಲಧಿ। ನಿರ ವಿಶೇಷ ನಿರ್ಭಿನ್ನ ಮೂಲಾವತಾರದಲ್ಲಿ। ಸರಸಿಜಜಾಂಡ ಪ್ರೇರಕ ಸರ್ವಧಾರಾ। ಸಿರಿ ಸಮೇತ ಪ್ರಳಯರಹಿತ ಸಂಪೂರ್ಣ ವಿಚಿ। ತ್ತರ ವಿಜ್ಞಾನರಾಶಿ ವಿಶ್ವಮೂರ್ತಿ। ಸುರ ನರೋರಗ ದಾನವ ತೃಣಾದಿ ಜೀವಕ್ಕೆ। ನಿರುತ ಪ್ರೇರಣೆ ಮಾಡಿ ಅವರವರಾ। ಪರಿಯಂತೆ ಅನಾದಿಯಿಂದ ಉಳ್ಳಕರ್ಮ ವಿ। ಸ್ತರಮಾಡಿ ಜೀವರಿಂದ ಮಾಳ್ಪ ಶಕ್ತಾ। ಅರರೆ ಈತನ ಯುಕ್ತಿಗ್ಯಾರು ಪ್ರತಿಕೂಲವು। ಸರಿಬಂದ ತೆರದಲ್ಲಿ ಶೋಭಿಸುವಾ। ಮೆರೆವ ನಿಜಾನಂದಾ ನಿತ್ಯ ತೃಪ್ತ ತ್ರಿಗುಣ। ವಿರಹಿತ ಭಕ್ತರಾಧೀನ ದೇವಾ। ಹರಿಪರಸ್ಪರ ಹಚ್ಚಿ ಒಬ್ಬರಿಂದೊಬ್ಬರಿಗೆ। ಕರುಣತ್ವ ವೈರತನ ಮಾಡಿಸುವಾ। ಹೊರವೊಳಗೆ ತಾನಲ್ಲದೆ ಅನ್ಯಾನಿಲ್ಲ। ಸ್ಥಿರವಹುದು ಚರಿಸುವ ಅಣ ಜಾಣನೂ। ಚಿರಕಾಲ ಎಲ್ಲಿದ್ದರು ನಿರ್ಲೇಪ ಚಿದ್ರೂಪ। ಶಿರದೂಗಿದರೆ ಮಾಳ್ಪದು ಬಿಡುವನೆ। ಹರಿ ಇಚ್ಛೆ ಅಂಥಾದೆ ಲಕುಮಿದೇವಿಗಾದರು। ಮರಳು ಕವಿಸಾದಲೆ ಸುಮ್ಮನಿರನೋ। ಪರಮೇಷ್ಟಿ ಯಾರಿಗೆ ನೆಲೆಯಾಗುವದು ಕಾಣೆ। ನರಗುರಿ ಮರುಗಿದರೆ ಏನಾಹದೂ। ಉರವಣಿಸಿ ಮಾತಾ ನುಡಿದ ಮಾತ್ರವಲ್ಲದೆ।

ಬರಿದಾಗಿ ಪೋಗುವಾದು ದಿವಸವೆಲ್ಲಾ। ಧರಣಿಯೊಳಗೆ ಪುಣ್ಯ ಪಾಪಗಳೆರಡಕ್ಕೆ। ಗುರಿಯಾಗಿ ನಮ್ಮಿಂದ ಮಾಡಿಸುವಾ। ಅರಿಯಾಗೊಡದಂತಿಪ್ಪ ಮಾಯವ ಕಲ್ಪಿಸಿ। ಮರಳೆ ಯೋಚಿಸದಿರು ಹರಿಯಲ್ಲಾದೆ। ಪರರಿಂದಾಗುವದೇನು ಆರಾರಾ ಪ್ರೇರಣೆಗೆ। ಸಿರಿ ಅರಸನೆ ಮುಖ್ಯಾ ಅಲ್ಲಿದ್ದಂತೆ। ಮರಿಯಾದೆಯಾಗಿಪ್ಪದು ಸರ್ವ ಬಗೆಯಿಂದ। ಅರಸಿದರೆ ಆತನೆ ಆತನೋ। ತರುವಾಯ ಜ್ಞಾನಿಗಳ ಉತ್ತರ ಮತ್ತಾವದೂ। ಇರದೆ ಯೋಚಿಸಿ ನೋಡಿ ಮೂಲಾಮುಟ್ಟಿ। ಕರಣಾ ಶುದ್ಧಿಯಲ್ಲಿ ಕೇವಲ ರಹಸ್ಯ ವಿ। ವರಗಳ ತಿಳಿವದು ದುರ್ಲಭವೋ। ಪುರದಲ್ಲಿ ಅಂಗಡಿಟ್ಟು ತನ್ನಲಿಯಿದ್ದ ನಾನಾ। ಸರಕು ತಿಳಿಯದಂತೆ ಯಾಗದಿರಿ। ದರುಶನ ಗ್ರಂಥವನ್ನು ಓದಿದಮೇಲೆ ಅವಾಂ। ತರದಿಂದ ನುಡಿದು ಬೇಕೆಂದು ತಮ್ಮ। ಗುರುತು ತೋರಿದಂತೆ ಸ್ವಾತಂತ್ರ ಪಚ್ಚಿಕೊಂಡು। ಹಿರಿದಾಗಿ ಜನ್ಮಂಗಳು ಧರಿಸುವರೂ। ಥರವಲ್ಲ ಈ ಮಾತು ಪೇಳಿಕೊಂಡದರಿಂದ। ಧುರದೊಳು ಪಾರ್ಥಂಗೆ ಹರಿ ಏನು ಪೇಳಿದಾ। ಸುರರಾದಿಗಳಿಗೆ ಜ್ಞಾನ ಅಜ್ಞಾನವೆರಡು। ಹರಿ ಪ್ರೇರಿಸದಲೆ ವ್ಯಕ್ತವಾಗೋವೇ। ಗುರು ದ್ರೋಣಾಚಾರ್ಯನು ಮಾಡಿದ ಪ್ರತಿಜ್ಞ ನಿಂ। ದಿರದೆ ಪೋಯಿತು ನೋಡೆ ಸ್ವಾತಂತ್ರನೆ। ತರತಮ್ಯ ಭಾವದಿಂದ ಅವರವರ ಯೋಗ್ಯತಾ। ಹರಿನಡಿಸಿದರುಂಟು ಸರ್ವರಿಗೆ। ಗರುವಿಕೆ ಸಲ್ಲಾ ನಾವು ನೀವೆಂಬೊ ಮಾತನು। ಧರಿಸದಿರು ಕಡೆ ಬೀಳುವದೇ। ವರ ಶ್ರುತಿ ಸ್ಮೃತಿಯಲ್ಲಿ ಜೀವಕ್ಕೆ ಕರ್ತವ್ಯ। ವರದೊರದು ಪೇಳಿವೆ ಎಂಬ। ಪರಮ ಸತ್ಯವೆ ಸರಿ ಪಾಪಪುಣ್ಯಗಳೆರಡು। ಹರಿ ಮಾಡಿಸಿ ಉಣಿಸಲು ಉಣ್ಣಿರೊ। ಅರೆ ಮರೆ ನಿಮಗ್ಯಾಕೆ ತಾಯಿ ತನ್ನ ಮಕ್ಕಳಿಗೆ। ಗರಳವಾಗಲಿ ಪೀಯೂಷವಾಗೆ। ಎರದರೆ ಉಂಬ ಕರ್ತೃತ್ವ ಇದ್ದ ತೆರದಿ। ಸರುವ ಜೀವಿಗಳಿಗೆ ಇಪ್ಪದದಕೋ। ಹರಿ ಜೀವನದ ಕೂಡಾ ಒಳಗೆ ಹೊರಗೆ ಇದ್ದು। ಪರಿಪರಿ ಚೇಷ್ಟಿಯ ಮಾಡಿಪನೂ। ಸರುವಂತರ್ಯಾಮಿ ನಮ್ಮ ವಿಜಯ ವಿಠ್ಠಲರೇಯಾ। ನರಕದಲ್ಲಿದ್ದರು ನಿರ್ಲೇಪಾನೆಂಬೊದೇನೊ ॥೧॥

### ಮಟ್ಟತಾಳ

ಹರಿನಾನಾ ಅವತಾರಾ। ಧರಿಸಿ ಧರಿಣಿಯೊಳಗೆ। ಪರಿಪರಿ ವಿಧ ತಸ್ಕರ। ಜಾರತ್ವ ಸೋ। ದರಮಾವನ ಕೊಂದಾ। ಸುರರ ವಂಚಿಸಿ ಕಲ್ಪ। ತರುವೆನ್ನ ತಂದಾ। ವರುಷ ವಿಡಿದು ಸೋ। ದರರ ಮಾತಿಯನ್ನು। ಶಿರವ ಕಡಿದನಂದು। ಎರಡೊಂದು ಪಾದವನು। ಧರಿಯ ಬೇಡಿ ಬಲಿಯಾ। ಹರಣವ ತುಳಿದಾ ಸಂ। ಗರವಿಲ್ಲದೆ ಕಪಿಯಾ। ಶರದಲಿ ಕೊಂದಾ। ಅಂ। ಬರ ತೊರೆದು ನಾರಿಯರ ವ್ರತಗೆಡಿಸಿದನು। ಕುರುಬಲ ಸಂಹರಿಸಿದಾ ಕಪಟದಲಿ। ಪರಿಮಿತಿವಿಲ್ಲದೆ ವರ ಪ್ರಳಯದಲ್ಲಿ ಸರಸಿಜ ಭವ ಗಂಗಾಧರ ಮಿಕ್ಕಾದವರ। ಹರಣವಳಿದು ನಿರ್ಭರದಲಿ ಕುಣಿದಾಡಿದಾ। ನಿರಯಾ ಕರ್ಮಗಳೆಲ್ಲ ಹರಿ ನೆಸಗಿದರಾತಾ। ಪರದೈವಾ ವೀತಾ। ಪರಶಕ್ತಿರನಂತಾ। ದುರಿತ ವಿದೂರ ವಿಸ್ತರ ಅದ್ಭುತ ಚರಿತಾ। ಸರಿ ಬಂದಂತೆ ಸಂಚರಿಸುವಾ ದಿಟನೆಂದು। ಸಿರಿ ಪೊಗಳಿ ಮೈಮರದು ನಿಲ್ಲುತಿರೆ। ಸುರರು ಮಿಕ್ಕಾದ ಜೀವರ ವಳಗೆ ನಿತ್ಯಾ। ಹರಿ ಪ್ರೇರಿಸಿ ಕರ್ಮಾಚರಣೆ ಮಾಡಿಸಲು। ಪರಮಾತ್ಮಗೆ ದೋಷವರ ಕೊಂಬೋದೆನೊ। ಹರಿ ಹರಿ ರೂಪಕ್ಕೆ ತರತಮ್ಯವೇ ಇಲ್ಲ। ಅರುಹುವೆನು ಬಾಹಿರದ ರೂಪಗಳಂಥ। ಚರಿತೆ ಮಾಡಿದರೇನು ಮರಳೆ ಜೀವರ ಒಳಗೆ। ಸ್ಥಿರವಾದ ಮೂರ್ತಿ ಎರಡು ಬಗೆ ಕರ್ಮ। ವಿರದೆ ಮಾಡಿಸಲೇನು ನಿರ್ಮಲಾತ್ಮಗೆ ಇದರ। ಕರಕರೆಗಳುಂಟೆ ನರನು ಶಂಕಿಸಿ ಏನಂದರೆ ಏನಾಗುವದೊ। ಹುರುಳುಗೊಳುತ ಹರಿಗೆ ಅರೆಮಾಳ್ಪರೆ ಗುಣವಾ। ಪರಿಪೂರ್ಣ ಜ್ಞಾನ ವಿಜಯ ವಿಠ್ಠಲರೇಯನ। ಧೊರೆತನಕ್ಕಾವಲ್ಲೆದರುಗಾಣೆನು ನಿತ್ಯ ॥೨॥

### ರೂಪಕತಾಳ

ನಿತ್ಯಾನಂದನಾದ ಜ್ಞಾನ ಶರೀರದಿ। ಅತ್ಯಧಿಕ ಬಲಧೈರ್ಯ ಉಳ್ಳ ನಾರಾಯಣಾ। ಸತ್ಯ ಸಂಕಲ್ಪ ತಾ ಮಾಡಿದದೆ ಮಾಟಾ। ಮೃತ್ಯು ಆತನ ತಡೆದು ಜಯಸುವದೆ। ಭೃತ್ಯಾಭೃತ್ಯರವೊಳಗೆ ಇದ್ದು ಅವರವರಿಂದ। ಕೃತ್ಯಗಳ

ಮಾಡಿಸಿ ತಿಳಿಸುವ ಬಗೆ ಬಗೆ। ಹತ್ಯಾದಿಗಳು ಮತ್ತೆ ಪುಣ್ಯಗಳೆಲ್ಲವು। ಮರ್ತ್ಯಜನಕೆ ಕಟ್ಟಿ ಅನುಭವ ಮಾಡಿಸುವ। ಅತ್ಯಂತವಾಗಿ ಸರ್ವಕೆ ಕರ್ತ ತಾನೆನಿಸಿ। ಶ್ರುತ್ಯರ್ಥಗಳಲ್ಲಿ ಪೇಳಿಪ್ಪವೂ। ಕೃತ್ತಿವಾಸ ವಂದ್ಯ ವಿಜಯ ವಿಠ್ಠಲರೇಯಾ। ಸ್ತೌತ್ಯನಹುದು ಸರ್ವರಿಂದ ನಿರಂತರಾ ॥೩॥

**ಝಂಪಿತಾಳ**

ನೀಚ ಕರ್ತವ್ಯ ದೈತ್ಯರು ಮಾಡಿಸುವರೆಂದು। ಯೋಚನೆ ಮಾಡುವದು ಸಿದ್ಧವೆನ್ನಿ। ವಾಚದಲಿ ಕೇಳು ಅವರಿಗೆ ಪ್ರೇರಕಾಮರರು। ಈ ಚತುರ್ದಶ ಭುವನದೊಡಿಯ ರಂಗ। ಊಚ ವೃತ್ತಿಗಳು ದೇವತಿಗಳು ಮಾಡಿಪರು ಆ। ಚತುರರು ತಾವು ನಿರ್ಮಳರೂ। ನೀ-ಚೋಚ್ಚ ಭಾವಕ್ಕೆ ಸುರರಿಗಧಿಕಾರ ಆ। ಲೋಚನೆ ಮಾಡುವದು ಹರಿ ಇತ್ತದೂ। ಸೂಚನೆ ತಿಳಿವದು ಮನುಜಗಾಗುವ ಕರ್ಮ। ಪ್ರಾಚೀನ ವಿಡಿದು ದುಃಖ ಸುಖಗಳು। ಲೋಚನ ಮೊದಲಾದ ಇಂದ್ರಿಯಂಗಳಲಿ ವಿ। ರೋಚನಾದ್ಯರು ವಾಸವಾಗಿಪ್ಪರು। ಮೋಚಕವು ಇವರಿಂದ ಭವವೆಂಬ ಪಾಶ ಪ। ರಿಚಾರಾರಾಗ ಬೇಕವು ವೊಲಿಸಿ। ಕೀಚಕಾರಿಯ ಕರುಣ ಪಡೆದರೆ ಸರ್ವರೂ। ಚಾಚುವರ ಬಯಸಿದ ಮಂಗಳಪ್ರದಾ। ಸುಚಾರಿತ್ರ ನಮ್ಮ ವಿಜಯ ವಿಠ್ಠಲರೇಯನ। ನೀಚ ಜನರು ಭಾವಿಸಿಗತಿಪಡಿಯಲರಿಯರು॥೪॥

**ತ್ರಿವಿಡಿತಾಳ**

ಮನುಜನೊಳಗೆ ಭೂತ ಅವಿಶಿಷ್ಟವಾಗಿ ಅ। ವನ ಶರೀರದಲ್ಲಿದ್ದು ನಾನಾ ಚೇಷ್ಟೆ ತನ ಇಚ್ಚೆ ಬಂದಂತೆ ಮಾಡುವದು ಯ। ಛನಿತಾದರು ನರಗೆ ಸ್ವಾತಂತ್ರವೇ। ಮನ ಮುಂತಾದ ಕರಣವಿಪ್ಪವು ಸತತ ಚೇ। ತನವಕ್ಕು ಜಡವಲ್ಲ ಅದರಾಗೆ। ದಿನ ದಿನ ಭೂತದಾಧೀನವಾಗಿ ಇದ್ದಂತೆ। ಮನುಜರು ಶ್ರೀ ಹರಿಯ ಆಧೀನವೋ। ಕ್ಷಣಕಾತನು ದೇವತಿಗಳ ಕೂಡ। ಗುಣತ್ರಯ ಮನೆ ಮಾಡಿ ನಡಿಸೂವನು। ನೆನಸಿ ಈ ಪರಿಯಿಂದ ನಡೆದ ಮಾನವನಿಗೆ।

ಗಣಣೆ ಇಲ್ಲವೊ ಮೂರು ಲೋಕದಲ್ಲಿ। ಜನುಮಜನುಮದಲ್ಲಿ ಕರ್ಮಾಕರ್ಮವ ಗೈಸೆ। ಘನವಾಗಿ ಹರಿ ಒಲಿದು ಕಾವುತಿಪ್ಪಾ। ಅನುದಿನದಲಿ ಪುಣ್ಯ ಅನಿಮಿಷರಿಗೆ ಇತ್ತು ದನುಜ ಗಣಕೆ ಪಾಪವನೀವುತಾ। ಮುನಿಯನಿವನ ಮೇಲೆ ತಕ್ಕಷ್ಟು ಫಲದಿಂದ। ಅನುಭವ ಮಾಡಿಸುವ ಬಳಿಯಲಿದ್ದು। ಭಣಗು ದೈವಗಳಿಂದ ಇನಿತಾಗುವದೇನು। ಎಣಿಸಿ ನೋಡಿದರು ಅನಂತಕಲ್ಪ। ಮನದಿಚ್ಛಾಕ್ರೀಡನೋ ನಿರ್ಭೀತ ನಿರ್ಮೋಹಾ। ಚಿನುಮಯ ಮೂರುತಿ ಚಿನ್ನಾಂಬರಾ। ಅಣು ಮಹತ್ತು ರೂಪಾ ಆದ್ಯಂತರಹಿತಾ। ಮನದೇವ ಜಗದೊಳು ಸುತ್ತುವನು। ದ್ವ್ಯಣುಕ ಮೊದಲಾದ ಕಾಲವಿಡಿದು। ತನ್ನನೆ ಬಿಟ್ಟು ಇದರಂತೆ ನಿರ್ಮಿಸುವಾ। ಎಣೆಗಾಣೆ ಈತನ್ನ ಸ್ವಾತಂತ್ರತನಕೆ। ಲೋಚನಾ ಮುಚ್ಚುವ ಲೀಲೆ ಮತ್ತಾರದೊ। ತನಮೇಲೆ ಹೊರೆ ಹಾಕಿಕೊಳದಲೆ ನಿಮಿತ್ಯ। ಅನಿಮಿಷಾದಿಗಳನ್ನು ಮಧ್ಯದಲ್ಲಿ। ಮೊನೆಮಾಡಿ ಕರ್ಮಗಳು ಅವರೆ ಮಾಡುವರೆಂದು। ಮನುಜರಿಂದಲಿ ಪೇಳಿಸುವ ಕಾಣಿರೊ। ಮಿನಗುವ ಜ್ಞಾನದಲಿ ದಿಟ್ಟಿಸಿ ನೋಡಿದರೆ। ಗುಣವಂತ ಹರಿಯಲ್ಲಾದನ್ಯರಿಲ್ಲಾ। ವನಧಿ ಸಂಭವ ಮತ್ತೆ ತಾತ್ವಿಕರು ಸರ್ವ। ಜನರು ಕಾಷ್ಟದಂತೆ ಯಾದಮೇಲೆ। ನನಗೆ ತನಗೆ ಬಿಡದೆ ಸ್ವತಂತ್ರ ಉಂಟೆಂಬ। ನೆನಹೆ ಇಲ್ಲದೆ ಸರ್ವವೋದಿನಲೀ। ಮುನಿಗಳ ಸಮ್ಮತಾ ಕುರುಬಲದೊಳು ಮಹಾ। ಕರಣ ಪ್ಲ? ಭಾರತ ಮಲ್ಲ ಹರಿಯೊ। ತನಗೆ ತಾನೆ ಐಕ್ಯಾ ವಿಜಯ ವಿಠ್ಠಲರೇಯಾ। ಅನುಗ್ರಹಮಾಡುವಾ ವ್ಯಾಪಾರ ಮಾಡಿಸೀ ॥೫॥

**ಅಟ್ಟತಾಳ**

ಅಗಸ (ಅಸಗ) ಮಲಿನ ವಸ್ತ್ರ ಹಸನ ಮಾಡುವದಕ್ಕೆ। ಕೊಸರಿ ಬಂಡಿಗೆ ಬೀಸಿ ಮಿಸಕದೆ ಬಡಿಯಲು। ವಸನಕೆ ಪೆಟ್ಟು ತಾಕಿಸಲು ಮಲಿನ ಬಿಟ್ಟು। ಅಸಿತ ಹಿಂದಾಗಿ ರಂಜಿಸುವದು ಬಿಳಪಿಲಿ। ವಸನಕ್ಕೆ ನೀರು ವ್ಯಾಪಿಸಿಕೊಂಡಿಪ್ಪದು ಹಾ।ರಿಸಿವಗದರೆ ಪೆಟ್ಟು ವಸನಕಲ್ಲದೆ ಕಾಣಿಸುವದೇ

ನೀರಿಗೆ। ಬಿಸಿಜನಾಭನು ನಿಮಿಷ ತೊಲಗದೆ ವ್ಯಾ। ಪಿಸಿಕೊಂಡು ಇಪ್ಪದು ಮಸಿಯಲ್ಲ ಇಂದಿಗೂ। ಕುಶಲವೆ ಸರಿ ಜೀವಾ ಪ್ರಸರಕ್ಕೆ ಬಾಧೆ ವೈ। ಕ್ಕಸವಾದರೆ ಆ ವಸನದ ತೆರದಿ। ಘಾಶಿಸುವದು ಕೇಳಿರೋ। ಅಸುರ ವಿರೋಧಿಗೆ ಘಸಣೆ ಎಂಬೋದು ಎತ್ತ। ಶಿಸುವಾಗಿ ಅಸುರೆಯ ವಿಷಮಲಿಯನುಂಡ। ವಿಷಯಂಗಳು ನೇಮಿಸಲಾಗದು ನಿತ್ಯ ವಸುಧಿ ಭೂ ಭಾರ ತಗ್ಗಿಸಿದಾ ವಿಜಯ ವಿಠ್ಠ। ಲ ಸಮ ದೈವಕೆ ಧಿಕ್ಕರಿಸುವನೆ ಮೂರ್ಖಾ ॥೬॥

**ಆದಿತಾಳ**

ಇಂಬಾಗಿ ಈ ಪರಿ ಅಂತರ ನಿಷ್ಠಿಯಲ್ಲಿ। ನಂಬಿಕೊಂಡಿದ್ದ ತನ್ನ ಶರಣನ್ನ ದುರಿತ ಪಥಕೆ। ಹಂಬಾಲಾ ಮಾಡಗೊಡ ತಿರಗಿ ತಿರಗಿ ವೊಲಿದು ಬೆಂಬಲವಾಗಿ ಇಪ್ಪ ಬಹು ಪುಣ್ಯ ಮಾಡಿಸುತ್ತ। ತುಂಬಿದ ಭಕ್ತಿಯನ್ನು ಕೊಡುವ ಕರ ಪಿಡಿವಾ। ಕೊಂಬನು ಕೊಡಿಸುವ ಇವನಿಂದಾದ ಸತ್ಕರ್ಮ। ಇಂಬು ಮಾಡಿ ಕೊಡುವ ತನ್ನ ಪುರದವೊಳಗೆ। ಉಂಬ ನಿಮಿತ್ಯದಲ್ಲಿ ಜೀವಕ್ಕೆ ಕರ್ತೃತ್ವ ವೆಂಬೊದೆ ಸಿದ್ಧ ಹರಿಮಾಡಿದ ಮರಿಯಾದೆ। ಬೊಂಬೆ ಕುಣಿಸಿದಂತೆ ಸರ್ವರ ಸೂತ್ರ ಧರಿಸಿ। ಬೆಂಬಿಡದಾಡಿಸುವ ಬಹುಲೀಲಾ ವಿಶ್ವಕುಟುಂಬಿ ಪಾಲಕ ಪರಮ ಪುರುಷ ಅನಾಥ ಬಂಧು। ರಂಬಿಸಿ ಶರಣರಿಂದ ಸಾಧನ ಮಾಡಿಸುವಾ। ಹುಂಬೆಗಾರರಿಗೆ ಸದ್ಗತಿಯ ಕರ್ಮಂಗಳು। ಎಂಬೊದೆ ಮಾಡಗೊಡ ದುಃಖಕ್ಕೆ ಪ್ರೇರಿಸುವಾ। ಕಂಬು ಚಕ್ರಪಾಣಿ ವಿಜಯ ವಿಠಲರೇಯಾ। ಅಂಬುಧಿಯೊಳಗಿಪ್ಪ ಅನಂತಾನಂತರೂಪ ॥೭॥

**ಜತೆ**

ಸ್ವಾಮಿ ಭೃತ್ಯನೆಂದು ಕಾಲಕಾಲಕೆ ನುಡಿದು।
ಕಾಮಿಸಿ ವಿಜಯ ವಿಠ್ಠಲರೇಯನ ಪಾದಾ ॥೮॥



## ಸುಳಾದಿ-೩

ಶ್ರೀಹರಿ (ಸ್ವತಂತ್ರ) ಜೀವ ಪಾರಂತತ್ರ್ಯ ವಿ ॥
ಹರಿಯೆ ಜಗಕೆ ಕರ್ತಾ ಹರಿಯ ಜಗಕೆ ಭರ್ತಾ ಇತ್ಯಾದಿ

**ರಾಗ- ಶಂಕರಾಭರಣ ಧ್ರುವತಾಳ**

ಹರಿಯೇ ಸರ್ವೋತ್ತಮ ಹರಿ ಪರ ದೇವತಿ। ಹರಿ ಗುಣ ಪರಿಪೂರ್ಣಂತರ ಬಾಹಿರ ವ್ಯಾಪ್ತಾ। ಹರಿ ಪರ ತತ್ವ ಶಿರಿಯರಸಾ ಪರಮೇಷ್ಠಿ ಜನಕಾ। ಹರ ಸುರ ಮುಖ್ಯ ಭೂಸುರರ ಪರಿಪಾಲಾ। ಹರಿ ಇಲ್ಲವೆಂದವ ದುರುಳ ಮೂರ್ಖನು ಪೇಳೆ। ಸರಿ ಎಂದು ಸುಮ್ಮನೆ ಇರಲಾಗದು ವೀರಾ। ಪರಮ ಡಿಂಗರಿಗರು ಹಿರಿದಾಗಿ ಕೂಗಿ ಡಂ। ಗುರವ ಹೊಯ್ದು ಅಬ್ಬರ ವಚನದಿಂದಾ। ಸರಿ ಮಿಗಿಲಿಲ್ಲೆಂದು ಹರಿ ಹರಿದಾಡುತ್ತ। ವರ ಅಟ್ಟಹಾಸದಲ್ಲಿ ಕರಗಳ ಹೊಯ್ದು ಚ। ಪ್ಪರಿಸಿ ಎರಡು ಭುಜಾ। ಭರದಾ ಸಿಡಿಲು ಧರೆಗೆರಗಿದಂತೆ ಬೊ। ಬ್ಬಿರಿದು ನಾದವ ಮಾಡಿ ಅರೆಮನರಾಗದೆ। ಹರಣ ಬಿಚ್ಚಿಡದಲೆ। ಹರಿ ಸರ್ವೇಶ್ವರ ವಿಜಯ ವಿಠ್ಠಲ ನಿತ್ಯಾ। ಶರಣರಿಗೊಜ್ರ ಪಂಜರವಾಗಿ ಪೊರೆವಾ ॥೧॥

**ಮಟ್ಟತಾಳ**

ವರಣಾಶ್ರಮದಲ್ಲಿ ಹಿರಿದು ಭೂಸುರ ಜನ್ಮಾ। ಬರಲದರವಳಗೆ ಮರುತ ಮತಕೆ ಬಂದು। ಚರಿಸುವ ಸುಕೃತವು ಸುರರೆಣಿಸಲಳವೆ। ಹರಿವಿಷಯಕೆ ನಿಮ್ಮ ಹರಣವಿಪ್ಪುದನಕಾ। ಹರಿ ಭಕ್ತರ ಪದಕೆ ಶರಣಾಗತರಾಗಿ। ನಿರುತ ಧರ್ಮಾಧ್ಯಕ್ಷಾ ವಿಜಯ ವಿಠ್ಠಲನ್ನ। ಚರಣಾಂಗುಟದ ರಜ ಸುರರ ಮುಕುಟವೆನ್ನಿ ॥೨॥

### ತ್ರಿವಿಡಿತಾಳ

ಹರಿಮೂರ್ತಿ ವಿರಹಿತ ಅನ್ಯಮೂರ್ತಿಯು ನೋಡೆ। ಹರುಷವಾಗದು ಕಾಣೊ ಕಣ್ಮನಕೆ। ಹರಿಪ್ರಸಾದಲ್ಲದೆ ಮತ್ತೊಂದು ದೈವದ। ಚರವು ಉಣಲೇಸಲ್ಲ ನಿಗಮ ವಚನ। ಹರಿಪಾದೋದಕವಲ್ಲದೆ ಇತರೋದಕದಿಂದ। ಪರಿಶುದ್ಧವಾಗದು ಮನುಜರಿಗೇ। ದುರುಳ ದೋಷಂಗಳು ಪರಿಹಾರವಿಲ್ಲೆಂದು। ಕರತಳದೊಳು ಒಂದು ಉರಿಯ ಗುಂಡನು ತಾಳಿ। ಉರಗನ ಪೆಡೆ ನಿರ್ಭಯವಾಗಿ ಧರಿಸಿರೊ। ಪುರುಷನಾಮ ಸಿರಿ ವಿಜಯ ವಿಠ್ಠಲನ್ನು। ಸ್ಮರಿಸಲ್ಲದೆ ಮಿಕ್ಕ ಸುರರು ಬಂದೊಲಿಯರು ॥೩॥

### ಅಟ್ಟತಾಳ

ಸೋಮಕನಾ ಕೊಂದು ಕಮಲಾಸನನ ಕಾಯಿದೆ। ಸೋಮಪಾನವೆರೆದಮರರ ಸಾಕಿದಾ। ಹೇಮಾಗಣ್ಣನ ಕೊಂದು ಭೂಮಿಯನುಳುಹಿದಾ। ನೃ ಮೃಗರೂಪವಾಗಿ ಆ ಮಗುವಿಗೊಲಿದಾ। ಭೂಮಿನಳದು ಸುತ್ರಾಮಗೆ ಪುರ ವಿತ್ತಾ। ಜಾಮದಗ್ನಿಯಾಗಿ ಭೀಮನೃಪರ ಗೆದ್ದಾ। ರಾಮಮೂರುತಿಯಾಗಿ ತಾಮಸರ ಮುರಿದಾ। ಕಾಮ ಜನಕನಾಗಿ ಭೂಮಿಭಾರನಿಳುಹಿದಾ। ವ್ಯೋಮಕೇಶನ ಸಂಗ್ರಾಮವ ಗೆಲಿಸಿದಾ। ಈ ಮಹಿಯೊಳು ಲಲಾಮರಾವುತನಾದಾ। ರೋಮ ರೋಮ ಕೋಟಿ ತಾಮರಸ ಜಾಂಡಾ। ಸೋಮಪನಾಮ ಸಿರಿ ವಿಜಯ ವಿಠ್ಠಲ ಸಾರ್ವ। ಭೌಮನು ಸಕಲ ಉದ್ದಾಮನು ಈಶನೊ ॥೪॥

### ಆದಿತಾಳ

ಏಕೋಮೇವ ಹರಿಯೆಂದು। ಲೋಕದೊಳು ವೇದಂಗಳು। ವಾಕು ಪೇಳುತಿವೆ ನೋಡು। ನಾಕಾದಿ ಮನುಜರಲ್ಲಿ। ನೂಕು ನೂಕುದುರವರ್ತಿ। ಸಾಕು ಸಾಕು ಕುಹಕಬುದ್ಧಿ। ಕಾಕನಾಗದಿರೂ ವಿ। ವೇಕ ಮಾರ್ಗವನ್ನು

ತೊರೆದು। ಏಕಪಾದಾನಾಮ ಪ್ರೀತ ವಿಜಯ ವಿಠ್ಠಲ ಸುಪ್ರ ಭಕ್ತ ಹೃದಯ ಕಮಲನೆಂದು ಪೊಗಳೂ ॥೫॥

**ಜತೆ**

ಹರಿಯೆ ಜಗಕೆ ಕರ್ತಾ ಹರಿಯೆ ಜಗಕೆ ಭರ್ತಾ ।
ಹರಿ ಸರ್ವಸಾಹಾ ವಿಜಯ ವಿಠ್ಠಲನೆ ಶಕ್ತಾನೆನ್ನಿ ॥೬॥

❖ ❖ ❖

## ಸುಳಾದಿ-೮

**(ಸ್ವತಂತ್ರ ಪ್ರಮೇಯ)**

ಕಷ್ಟಾಕಷ್ಟ, ಲಾಭಾಲಾಭ, ಸುಖಾಸುಖ ಭಾಗ್ಯಾಭಾಗ್ಯ ಎಲ್ಲವೂ ಶ್ರೀ ಹರಿಯಾಧೀನವಾಗಿ ಒದಗುವವು. ಜೀವನು ಸ್ವತಂತ್ರನಲ್ಲ.

### ರಾಗ- ಭೈರವಿ ಧ್ರುವತಾಳ

ಸಿರಿದೇವಿಗೆ ಪೇಳಿ ಭಾಗ್ಯವ ಕೊಡಿಸೆಂದು। ಮರಳೆ ಮರಳೆ ಬೇಡ ಬಂದದಿಲ್ಲಾ। ಪರಮೇಷ್ಠಿಯ ಕರೆದು ನೊಸಲಲ್ಲಿ ನಿರ್ಮಿಸಿದ। ಬರಹ ವೆಗ್ಗಳ ಮಾಡೆಂದುಸರಲಿಲ್ಲಾ। ಪುರ ವೈರಿಗೆ ಆಜ್ಞಾಪಿಸಿ ವೈರಾಗ್ಯವ। ಬರಲೆಂದು ದೀನನಾಗಿ ತುತಿಸಲಿಲ್ಲಾ। ಸುರಪತಿಗೆ ಭಟರನಟ್ಟಿ ಕಾಲ ಕಾಲಕ್ಕೆ। ತಿರಗುವ ಮನಸು ನಿಲ್ಲಿಸೆನಲಿಲ್ಲಾ। ಮರುತ ಮಿಕ್ಕಾದ ತತ್ವೇಶ್ವರ ಹಿಡತರಿಸಿ। ಸರುವ ಕಾರ್ಯವ ಮಾಡಿ ಕೊಡು ಎನಲಿಲ್ಲಾ। ಹರಿಯೆ ನಿನ್ನ ಇಚ್ಛೆ ಎನ್ನ ಸ್ವಭಾವ ಈ। ಪರಿಯಲ್ಲಿ ಅನಾದಿ ಕಾಲದಿಂದ ಬಿಡ। ದಿರಲಿಕ್ಕೆ ತಿಳಿಯದೆ ಬಲು ಚಿಂತಿಪದೇನು। ನರಕವಾಗಲಿ ಸ್ವರ್ಗಮೇಣು ಲೋಕವಾಗಲಿ। ಪರಿಪರಿ ಭಂಗ ಸುಖತರವಾಗಲಿ ಇಹ। ಪರದೊಳಗೆ ನೀನೆ ಇತ್ತದ್ದಲ್ಲದೆ ಬೇರೆ। ಕರದು ಉಪಾಯ ತೋರುಬಲ್ಲವರಾರು। ಬರಿದೆ ಭ್ರಮ ಎಲ್ಲದೆ

ಸಿದ್ಧ ಸಾಧನವಲ್ಲ। ಸಿರಿ ದೇವಿ ಆದರು ನಿನ್ನ ಅಪೇಕ್ಷಿಸುವಳಯ್ಯಾ। ನರರ ಪಾಡೇನಿನ್ನು ಯಾತಕ್ಕೆ ಭೀತಿ ಲೇಶ। ಥರವಲ್ಲ ಥರವಲ್ಲ ತೃಣ ಒಂದಲ್ಲಾಡಿಸಲು। ಸರ್ವ ಸ್ವಾತಂತ್ರ ಹರಿ ವಿಜಯ ವಿಠ್ಠಲರೇಯಾ। ಧೊರೆ ನೀನೆ ಇರಲಿಕ್ಕೆ ಆರಾರು ಹಿರಿಯರೋ ॥೧॥

### ಮಟ್ಟತಾಳ

ಸೂರಿದಾ ಚಂದ್ರಮಾ ನಿರುತ ಉದುಭವಿಸಿ। ಆ ರಥಿಗೆ ಬಿಡದೆ ತಿರಗುವರು ಇಂದೂ। ಶ್ರೀ ರಮಣ ನಿನ್ನ ಭಯವಿದ್ದದರಿಂದ। ತಾರಾ ಪಥದಲ್ಲಿ ಸಂಚರಿಸುವರೂ। ಧಾರುಣಿ ಜನರೆಲ್ಲ ಒಂದಾಗಿ ಶಕ್ತಿ। ಮೀರಿ ಸಾಹಸ ಮಾಡೆ ನಿಲಲಾಪರೆ ಇವರು। ಓರಂತೆ ಸರ್ವ ಅಭಿಮಾನ್ಯರ ವ್ಯಾ। ಪಾರ ನಿಶ್ಚಯವಾಗಿ ಸಂತತ ವೊಪ್ಪುತಿದೆ। ಕಾರಣ ಮೂರುತಿ ವಿಜಯ ವಿಠ್ಠಲರೇಯ। ಆರಾಧಿಸುವರ ಒಡನೆ ತಿರುಗುವನೆ ॥೨॥

### ತ್ರಿವಿಡಿತಾಳ

ಬೊಮ್ಮನೊಳಗೆ ಬೊಮ್ಮ ಶಿವನೊಳಗೆ ಶಿವರೂಪ। ರಮ್ಮೆಯರಸ ನೀನೆ ವಾಸವಾಗಿ। ಒಮ್ಮನದಲಿ ಅವರ ವಶವಾಗಿ ಸರ್ವದಾ। ಅಮ್ಮಮ್ಮಾ ವ್ಯಾಪಾರಗಳ ಮಾಡುವೆ। ಸುಮ್ಮನಸರಲ್ಲಿ ಶುಭಕರ್ಮನೆಸಗೂವೆ। ಹಮ್ಮಿನವರಲ್ಲಿ ಅಶುಭ ಕರ್ಮ। ನೆಮ್ಮನೆವಾಗಿ ನಡಿಸುವ ನಾನಾ ಲೀಲಾ। ಸಂಬಂಧ ಒಂದಿಲ್ಲ ನಿನ್ನವಿನಾ। ಬೊಮ್ಮಾಂಡ ಪುಟ್ಟಿಸಿ ಒಳಗೆ ಪ್ರೇರಕನಾಗಿ। ಪೆರ್ಮೆ ಇಂದಲಿ ಅರಘಳಿಗೆ ಬಿಡದೆ। ನಮ್ಮನ್ನ ಸಲಹುವ ವಿಜಯ ವಿಠ್ಠಲರೇಯ। ನಿಮಿತ್ಯ ನೀನೆಂದು ವೆಂದರ್ಜುನಗೆ ಪೇಳಿದೆ ॥೩॥

### ಅಟ್ಟತಾಳ

ಸುರ ಮುನಿ ಪಾಡಿದಾ। ಕರಿರಾಜ ಕೂಗಿದಾ। ಸ್ಮರಿಸಿದಜಾಮಿಳಾ। ಸುರನದಿಸೂನು ಭ। ಳಿರೆ ಶಪ್ತ ಮಾಡಿದಾ। ಧರಣೀಶ ಬಲಿದಾನ। ವೆರದಾ

ಪ್ರಲ್ಹಾದನು। ಮೊರೆ ಇಟ್ಟ ಭೃಗು ಬಂದು। ಭರದಿಂದ ವದ್ದನೆ। ಹರನು ರೂಪವ ನೋಡಿ। ಮರಳು ಸುತ್ತಿದನೇನೊ। ತರುಳ ಧ್ರುವನು ತಪ ಧರಿಸಿದನೆ ತಾನೆ। ಭರತನು ಮಹಾ ಜಡ। ತೆರನಾಗಿ ಇದ್ದನೆ। ವರ ಅಂಬರೀಷ ರಾ। ಯರು ಮೊದಲಾದಂಥ ಪರಮ ಭಕ್ತರು ಸಂ। ಚರಿಸಿದ ವ್ರತ ಧರ್ಮ। ಪರಿ ಪರಿ ಚತುರ್ದಶ। ಧರೆಯೊಳಗೆ ತುಂಬಿ। ಇರಲಾಗಿ ಸಕಲ ವಿ। ಸ್ತರಮೆಲ್ಲ ನೋಡೆ ಇ। ವರಿಂದಾದದ್ದಲ್ಲಾ। ಹರಿ ನೀನೆ ಒಳಗಿದ್ದು ಸುರರಾದಿಗಳಿಗೆ ಗೋ। ಚರವಾಗದೆ ತೀವರ। ಪ್ರೇರಿಸಲು ಅ। ವರು ನಿನ್ನ ಪೂಜಿಸಿ। ದರು ಎಂಬೊದಲ್ಲದೆ। ಎರಡನೆ ಮಾತಿಲ್ಲಾ। ವರಮೂರ್ತಿ ವಿಜಯ ವಿಠ್ಠ ಲರೇಯ ಸ್ವಾತಂತ್ರ ಚರಾ। ಚರದಲಿ ನೀನೆ ಪರಾಪರದಲ್ಲಿ ಸತ್ಯ ॥೪॥

### ಆದಿತಾಳ

ಕಷ್ಟ ಹಾರೈಸದಲೆ ತಾನಾಗಿ ಬರುವದು। ಇಷ್ಟೇ ಮಾತುರ ಕಷ್ಟ ಬರಲೆಂದ ನರನುಂಟೆ। ಶ್ರಿಷ್ಟೇಶ ಸಂತೋಷವಾಗಲೆಂದರೆ ಬಾರದು। ಭೃಷ್ಟ ಸಂಕಲ್ಪಗಳು ನಮ್ಮಿಂದ ಮಾಡಿಸುವೆ। ಕಷ್ಟಕ್ಕೆ ದೈತ್ಯರಿಗೆ ಪ್ರೇರಣೆಯಾಗಿ ಒಂ। ದಿಷ್ಟು ಕೊರತೆಯಾಗದಂತೆ ನೀನುಣಿಸುವೆ। ಶಿಷ್ಟ ಜನರಿಗೆ ನೀನೆ ಪ್ರೇರಿಸಿ ಬಿಡದೆ। ಇಷ್ಟು ಪುಣ್ಯಗಳು ಅನುಭವಿಸುವಂತೆ ಮಾಡುವೆ। ಕಷ್ಟ ಸುಖಗಳೆರಡು ತಾನಾಗಿ ಬರಲಿಕ್ಕೆ। ಶಿಷ್ಟ ದುಷ್ಟರಿಗೆಲ್ಲ ಪೇಳೆನಲ್ಯಾತಕೆ। ಪುಟ್ಟು ಸಾವುಗಳಿಗೆ ನಿರ್ಮಾಣ ಗೈಸಿದಾಗ। ಅಷ್ಟು ಸಂಕಲ್ಪಗಳು ನಿನ್ನಿಂದ ಸಿದ್ಧವೈಯ್ಯಾ। ಶಿಷ್ಟ ಜನರ ಪ್ರೀಯ ವಿಜಯ ವಿಠ್ಠಲರೇಯಾ। ಮುಟ್ಟಿ ನೆನಸಿದವರ ಮನಸಿನಂತೆ ಮಾಳ್ಪೆ ॥೫॥

### ಜತೆ

ಪೊಸದಾಗಿ ಕರ್ಮಗಳು ಬರಲುಳ್ಳವೆ ಇಲ್ಲಾ ।
ಅಸುರ ನಿರ್ಜರ ಗುರು ವಿಜಯ ವಿಠ್ಠಲರೇಯಾ ॥೬॥



## ಸುಳಾದಿ-೫೫

(ಶ್ರೀ ಹರಿ ಸ್ವತಂತ್ರ ಪ್ರಮೇಯ)

ಉಭಯ ಚೇತನ ಕರ್ಮ ಅನಾದಿಯಿಂದ ಬಂದುದಾದರೂ. ಕರ್ಮ
ಪ್ರವರ್ತಕ ಕರ್ಮನಿವೃತ್ತಕ ಶ್ರೀ ಹರಿಯು ಸರ್ವಕರ್ತಾ.

### ರಾಗ- ಸಾರಂಗ ಧ್ರುವತಾಳ

ಹಂಗಿಪದೇನೋ ಇಂದು ವೊಗ ತೋರಿ ಎನ್ನ ಅಂತ। ರಂಗದೊಳಗೆ ಇಪ್ಪ ಮುನಿವರೇಣ್ಯಾ। ಬಂಗಾರದ ಪಾತ್ರೆ ಬೆಲೆಯುಳ್ಳದಾದಡೆ। ಸಂಗತಿ ಬೇಕು ಒಂದು ಆಧಾರವು। ಮಂಗಳ ಪುರುಷ ನೀನಾದಡೆ ನಿನಗೊಬ್ಬ। ಡಿಂಗಾರಿಗನು ಬೇಕು ಪ್ರೇರಣಿಗೇ। ರಂಗಾ ನೀನೆಂದೆಂದಿಗೆ ಎಲ್ಲೆಲ್ಲಿ ಇರಲೂ ನಿ। ಸ್ಸಂಗನಾದೆನೆಂದರೆ ಕೂಡೋದಿಲ್ಲಾ। ಹಂಗಿಸದಿರು ಎನ್ನ ಕಾವ ಧೊರಿಯೆ। ಡಂಗುರ ಹೊಯ್ದು ಸಕಲ ಭೂಮಿಯೊಳಗೆ ಜ। ನಂಗಳು ಕೇಳುವಂತೆ ಕೂಗುವೆನೊ। ಕಂಗಳಿಗೆ ವಿಷಯ ಇಲ್ಲದಿದ್ದಡೆ ನೋಳ್ಪ। ಶೃಂಗಾರ ಮತ್ತಾವದೋ ದೇಶದಲ್ಲಿ। ಭಂಗ ಬಡುವ ಜೀವಾ ಇಲ್ಲಾದಿರಲು ಉಪ। ದ್ರಂಗಳು ನಿನಗೆ ಬಂದು ತಾಕವೇನೊ। ಪೊಂಗು ಮೊದಲಾದ ದೋಷಕೆ ಮಾರ್ಗವೇನೊ। ಸಂಗೀತ ಪಾಡುವ ನರನಾವನೋ। ಇಂಗಿತದಲಿ ಕೇಳು ನಿನಗೆ ನೀನೆಂಬಿಯಾ। ಭಂಗವಾಯಿತು ನಿನ್ನ ಈಶ್ವರತನಕೆ। ಹಂಗಿಸದಿರು ನಾನೆ ಪ್ರೇರಕನೆಂದು। ಜಂಗಮ ಸ್ಥಾವರ ಜಡ ಪ್ರಪಂಚಯಾತಕೆ। ಲಿಂಗ ಶರೀರವೆಂಬೊ ಮಾತೆಯಿಲ್ಲಾ। ಗಂಗಾಜನಕ ನಮ್ಮ ವಿಜಯ ವಿಠ್ಠಲರೇಯಾ। ಅಂಗಾ ಅಂಗಿ ಭಾವದಲ್ಲಿ ಪೋಷಿಸುವನೆ ॥೧॥

### ಮಟ್ಟತಾಳ

ಹರಿ ಹರಿ ಶಿರಿ ಕೃಷ್ಣ ಪರಮ ಪಾವನ ರಂಗಾ। ನರ ಹರಿ ಗೋವಿಂದ ಉರಗ ಶಯನ ಸ್ವಾಮಿ। ಧರಣಿ ಪಾಲಕ ದೇವಾ ಗರುಡ

ಪ್ರಲ್ಹಾದನು। ಮೊರೆ ಇಟ್ಟ ಭೃಗು ಬಂದು। ಭರದಿಂದ ವದ್ದನೆ। ಹರನು ರೂಪವ ನೋಡಿ। ಮರಳು ಸುತ್ತಿದನೇನೊ। ತರುಳ ಧ್ರುವನು ತಪ ಧರಿಸಿದನೆ ತಾನೆ। ಭರತನು ಮಹಾ ಜಡ। ತೆರನಾಗಿ ಇದ್ದನೆ। ವರ ಅಂಬರೀಷ ರಾ। ಯರು ಮೊದಲಾದಂಥ ಪರಮ ಭಕ್ತರು ಸಂ। ಚರಿಸಿದ ವ್ರತ ಧರ್ಮ। ಪರಿ ಪರಿ ಚತುರ್ದಶ। ಧರೆಯೊಳಗೆ ತುಂಬಿ। ಇರಲಾಗಿ ಸಕಲ ವಿ। ಸ್ತರಮೆಲ್ಲ ನೋಡೆ ಇ। ವರಿಂದಾದದ್ದಲ್ಲಾ। ಹರಿ ನೀನೆ ಒಳಗಿದ್ದು ಸುರರಾದಿಗಳಿಗೆ ಗೋ। ಚರವಾಗದೆ ತೀವರ। ಪ್ರೇರಿಸಲು ಅ। ವರು ನಿನ್ನ ಪೂಜಿಸಿ। ದರು ಎಂಬೊದಲ್ಲದೆ। ಎರಡನೆ ಮಾತಿಲ್ಲಾ। ವರಮೂರ್ತಿ ವಿಜಯ ವಿಠ್ಠ। ಲರೇಯ ಸ್ವಾತಂತ್ರ ಚರಾ। ಚರದಲಿ ನೀನೆ ಪರಾಪರದಲ್ಲಿ ಸತ್ಯ ॥೫॥

**ಆದಿತಾಳ**

ಕಷ್ಟ ಹಾರ್ಯೆಸದಲೆ ತಾನಾಗಿ ಬರುವದು। ಇಷ್ಟೇ ಮಾತುರ ಕಷ್ಟ ಬರಲೆಂದ ನರನುಂಟೆ। ಶ್ರಿಷ್ಟೇಶ ಸಂತೋಷವಾಗಲೆಂದರೆ ಬಾರದು। ಭೃಷ್ಟ ಸಂಕಲ್ಪಗಳು ನಮ್ಮಿಂದ ಮಾಡಿಸುವೆ। ಕಷ್ಟಕ್ಕೆ ದೈತ್ಯರಿಗೆ ಪ್ರೇರಣೆಯಾಗಿ ವಂ। ದಿಷ್ಟು ಕೊರತೆಯಾಗದಂತೆ ನೀನುಣಿಸುವೆ। ಶಿಷ್ಟ ಜನರಿಗೆ ನೀನೆ ಪ್ರೇರಿಸಿ ಬಿಡದೆ। ಇಷ್ಟು ಪುಣ್ಯಗಳು ಅನುಭವಿಸುವಂತೆ ಮಾಡುವೆ। ಕಷ್ಟ ಸುಖಗಳೆರಡು ತಾನಾಗಿ ಬರಲಿಕ್ಕೆ। ಶಿಷ್ಟ ದುಷ್ಟರಿಗೆಲ್ಲ ಪೇಳೆನಲ್ಯಾತಕೆ। ಪುಟ್ಟು ಸಾವುಗಳಿಗೆ ನಿರ್ವಾಣ ಗೈಸಿದಾಗ। ಅಷ್ಟು ಸಂಕಲ್ಪಗಳು ನಿನ್ನಿಂದ ಸಿದ್ಧವೈಯ್ಯಾ। ಶಿಷ್ಟ ಜನರ ಪ್ರೀಯ ವಿಜಯ ವಿಠ್ಠಲರೇಯಾ। ಮುಟ್ಟಿ ನೆನಸಿದವರ ಮನಸಿನಂತೆ ಮಾಳ್ಪೆ ॥೬॥

**ಜತೆ**

ಮೊಸದಾಗಿ ಕರ್ಮಗಳು ಬರಲುಳ್ಳವೆ ಇಲ್ಲಾ ।<br>
ಅಸುರ ನಿರ್ಜರ ಗುರು ವಿಜಯ ವಿಠ್ಠಲರೇಯಾ ॥೭॥



# ಸುಳಾದಿ-೫೫

(ಶ್ರೀ ಹರಿ ಸ್ವತಂತ್ರ ಪ್ರಮೇಯ)

ಉಭಯ ಚೇತನ ಕರ್ಮ ಅನಾದಿಯಿಂದ ಬಂದುದಾದರೂ. ಕರ್ಮ ಪ್ರವರ್ತಕ ಕರ್ಮನಿವೃತ್ತಕ ಶ್ರೀ ಹರಿಯು ಸರ್ವಕರ್ತಾ.

### ರಾಗ- ಸಾರಂಗ ಧ್ರುವತಾಳ

ಹಂಗಿಪದೇನೋ ಇಂದು ಮೊಗ ತೋರಿ ಎನ್ನ ಅಂತ। ರಂಗದೊಳಗೆ ಇಪ್ಪ ಮುನಿವರೇಣ್ಯಾ। ಬಂಗಾರದ ಪಾತ್ರೆ ಬೆಲೆಯುಳ್ಳದಾದಡೆ। ಸಂಗತಿ ಬೇಕು ಒಂದು ಆಧಾರವು। ಮಂಗಳ ಪುರುಷ ನೀನಾದಡೆ ನಿನಗೊಬ್ಬ। ಡಿಂಗಾರಿಗನು ಬೇಕು ಪ್ರೇರಣೆಗೇ। ರಂಗಾ ನೀನೆಂದೆಂದಿಗೆ ಎಲ್ಲೆಲ್ಲಿ ಇರಲೂ ನಿ। ಸ್ಸಂಗನಾದೆನೆಂದರೆ ಕೂಡೋದಿಲ್ಲಾ। ಹಂಗಿಸದಿರು ಎನ್ನ ಕಾವ ಧೊರಿಯೆ। ಡಂಗುರ ಹೊಯ್ದು ಸಕಲ ಭೂಮಿಯೊಳಗೆ ಜ। ನಂಗಳು ಕೇಳುವಂತೆ ಕೂಗುವೆನೊ। ಕಂಗಳಿಗೆ ವಿಷಯ ಇಲ್ಲದಿದ್ದಡೆ ನೋಳ್ಪ। ಶೃಂಗಾರ ಮತ್ತಾವದೋ ದೇಶದಲ್ಲಿ। ಭಂಗ ಬಡುವ ಜೀವಾ ಇಲ್ಲಾದಿರಲು ಉಪ। ದ್ರಂಗಳು ನಿನಗೆ ಬಂದು ತಾಕವೇನೊ। ಪೊಂಗು ಮೊದಲಾದ ದೋಷಕೆ ಮಾರ್ಗವೇನೊ। ಸಂಗೀತ ಪಾಡುವ ನರನಾವನೋ। ಇಂಗಿತದಲಿ ಕೇಳು ನಿನಗೆ ನೀನೆಂಬಿಯಾ। ಭಂಗವಾಯಿತು ನಿನ್ನ ಈಶ್ವರತನಕೆ। ಹಂಗಿಸದಿರು ನಾನೆ ಪ್ರೇರಕನೆಂದು। ಜಂಗಮ ಸ್ಥಾವರ ಜಡ ಪ್ರಪಂಚಯಾತಕೆ। ಲಿಂಗ ಶರೀರವೆಂಬೊ ಮಾತೆಯಿಲ್ಲಾ। ಗಂಗಾಜನಕ ನಮ್ಮ ವಿಜಯ ವಿಠ್ಠಲರೇಯಾ। ಅಂಗಾ ಅಂಗಿ ಭಾವದಲ್ಲಿ ಪೋಷಿಸುವನೆ ॥೧॥

### ಮಟ್ಟತಾಳ

ಹರಿ ಹರಿ ಶಿರಿ ಕೃಷ್ಣ ಪರಮ ಪಾವನ ರಂಗಾ। ನರ ಹರಿ ಗೋವಿಂದ ಉರಗ ಶಯನ ಸ್ವಾಮಿ। ಧರಣಿ ಪಾಲಕ ದೇವಾ ಗರುಡ

ವಾಹನ ಹರಿ। ವರ ಮೂರುತಿ ವರದಾ ಶರಣಾಗತ ವತ್ಸಲ। ಕರುಣಾಕರ ಕರುಣಿ ಉರ ಮಹಿಮಾರಾಮಾ। ಅರವಿಂದನಾಭಾ ಪರಿ ಪರಿ ಪರಿಪೂರ್ಣಾ। ಪರತತ್ವ ಪರಂಜ್ಯೋತಿ ಸುರಪಾಲಕನೆಂದು। ನಿರುತ ಕೊಂಡಾಡುವ ಶರಣರು ಬೇಕಯ್ಯಾ। ಇರದಿಲ್ಲದಿರಲು ಧೊರೆ ಸೇವಕನೆಂಬೊ ಬರಿದೆ ಮಾತಾಗುವದು। ಅರಿದುಕೊ ನಿನ್ನೊಳಗೆ ಶರಣ ನುಡಿದ ಮಾತು। ಕರಿವರದಾ ನಮ್ಮ ವಿಜಯ ವಿಠ್ಠಲರೇಯಾ। ಚರಿತ ಪೇಳುವದಕ್ಕೆ ಆವನಾದರು ಬೇಕು ॥೨॥

## ತ್ರಿವಿಡಿತಾಳ

ಸಮಸ್ತ ಶ್ರುತಿ ಶಾಸ್ತ್ರ ಪುರಾಣ ಪಂಚರಾತ್ರಾ। ಗಾಮ ಭಾರತ ಭಾಗವತ ವೇದ ಸಿರಸಾ। ರಾಮಾಯಣ ಮಿಕ್ಕ ವಾಕ್ಯದಲ್ಲಿ ನಿತ್ಯ। ಸ್ವಾಮಿ ಭೃತ್ಯ ನ್ಯಾಯು ಪೇಳು ತಿದಕೋ। ಈ ವಾತು ಇರಲಿಕ್ಕೆ ಎನ್ನ ಅಂಜಿಸಿಕೊಂಡು। ನೀ ಮಾಡುವೆನೆಂಬೊ ಬಿಂಕವ್ಯಾಕೆ। ಭೂಮ್ನನಾದರೆ ನಿನಗೆ ನಿನಗೆ ಸುಖಬಟ್ಟೊ। ಆ ಮಹಾ ಖ್ಯಾತಿಯಲಿ ಸಂಚರಿಸುವೆ। ಕಾಮಿತಾರ್ಥವೆ ಕೊಡುವನೆಂಬೊ ಉತ್ತರವೇನೊ। ಈ ಮಹಿಯೊಳು ನಿನ್ನ ಪೊಗಳಲಳವೋ। ಕ್ರಮದಿಂದಲಿ ನಾನಿನ್ನ ಬಳಿಗೆ ಬಂದೂ। ಸ್ವಾಮಿ ಪಾಲಿಸು ಎಂದು ಆಲ್ಪರಿದೆನೊ। ಪಾಮರನ ಬಿಡು ಬಿಡು ಒಳಗಿದ್ದು ಇಂಥ ನಿ। ಯಾಮಕ ತನ ವಾಳ್ಪದು ಮುದದಿಂದ ಭೀವಾ ವಾರಿಧಿನಾವಾ ಭಕ್ತವತ್ಸಲನೆಂಬ। ನಾಮಾ ಎಲ್ಲಿಪ್ಪದಾ ನಿಲ್ಲದಿರವಾ। ಕ್ಷೇಮಾ ಕೊಡುವೆನೆಂಬೆ ಉಪಕಾರ ಎನಗೇನು। ನಾ ಮೂಢನಾದರೆ ನಿನಗೆ ತಿಳಿಯದೆ ಸಾರ್ವ। ಭೌಮ ಜ್ಞಾನಾನಂದ ಸಂಪೂರ್ಣನೇ। ಯಾಮ ಯಾಮಕೆ ಎನ್ನ ಹಂಗಿಪದೇನೊ। ಶ್ರೀ ಮನೋಹರ ನಿನ್ನ ಬೇಡಿಕೊಂಬುವ ನಾರೊ। ಸಂಬಂಧನಾಗಿ ಸರ್ವದರಂದೊಂದೂ। ರೋಮ ವಿಡಿದು ಸರ್ವ ದೇಹ ದೇಹದಲ್ಲಿ। ಕ್ರಮದಿಂದಲಿ ನೀನು ಇರ ಸಲ್ಲದು। ಆ ಮೇಲೆ ಎನ್ನ ಪ್ರಾಪ್ತಿ ಆವದಿದ್ದರು। ನೀ ಮಾಣಿಸದಿರೂ ನಿನಗೆ ಎನ್ನಾ। ಭೂಮಿ ಗ್ರಾಮದ

ಮೇಲೆ ವ್ಯಾಮೋಹವ। ತಾ ಮುನಿದು ಪೋಗುವ ಬಗೆ ಎಂತೆಲೊ। ಧೀಮಂತ ನಿನಗೊಂದು ವ್ಯಾಪಾರನ್ಯ ಫಲವಿಲ್ಲ। ಧಾಮದೊಳಗೆ ಸುಮ್ಮನೆ ಇರಬಹುದೊ। ನೇಮವಾಗಿಯಿದ್ದ ಸಂಕಲ್ಪಕೆ ಹಾನಿ ಸು। ತ್ರಾಮ ಭವ ಅಜ ಶಿರಿ ನಗರೇನಯ್ಯಾ। ಹೋಮ ಜಪ ತಪ ಮಿಕ್ಕಾದ ಕರ್ಮಂಗಳು। ನೀ ಮಾಡಿಪೆನೆಂದು ಹಂಗೀಸ ಸಲ್ಲಾ। ನೀ ಮೊದಲು ನಾ ಮಧ್ಯ ಬಂದವರಾದರೆ। ಈ ಮಾತು ಆಡತಕ್ಕದ್ದು ಕಾಣೆಲೋ। ಸೀಮರಹಿತ ನಿನಗೆ ಎನಗೆ ಎಷ್ಟೇ ಮಾತ್ರ। ಕೋಮಲಾಂಗನೆ ಕೇಳೋ ಅಘಟಿತಾಘಟಿತಾ। ಸಮರ್ಥನು ಕಾಣೋ ಮತ್ತವಾವಾ। ತಾಮರಸ ಜಾಂಡ ನಮ್ಮಿಂದಲೆ ಒಂದು। ರೋಮಕೆ ಇಕ್ಕಿ ಲೆಕ್ಕಿಸದಿಪ್ಪದೊ। ಹೇಮಾಂಗ ವಿಜಯ ವಿಠ್ಠಲ ಅದ್ಭುತ ಶಕ್ತಾ। ಕಾಮಧೇನು ಸುಮ್ಮನಿರಲು ಕೀರ್ತಿ ಉಂಟೆ ॥೩॥

### ಅಟ್ಟತಾಳ

ಜ್ಞಾನ ಪ್ರಯತ್ನ ಇಚ್ಛಾ ನಾನಾವಿಧ ನಿ। ದಾನಿ ಸ್ವಭಾವಿಕ ಎನಗೆ ಸ್ವರೂಪದಿ। ಅನಾದಿಕಾಲದಿಂದ ಒದಗಿರಲಾಗೇ ವೆ। ನೀನದರೊಳಗಿದ್ದು ಪ್ರೇರಿಸಲ್ಲದೆ। ತ್ರಾಣನಾಗಿ ಪೋಗೋ ಬಗೆ ಮಾಡಿದರೇನೂ। ಪ್ರಾಣಿಗಳ ಜಡ ಮಾಡುವೆನೆಂಬಿಯಾ। ಹಾನಿ ಬಾರದೇ ನಿನ್ನ ನಿಜ ಸಂಕಲ್ಪಕ್ಕೆ। ಸ್ಥಾಣುವಿನ ಸ್ಥಾಣುವಿನಂದದಲಿ ನಿಲಿಸಿದ್ದ। ಈ ನುಡಿ ಇದ್ದರು ಜಡವಾಗಿದ್ದರೆ ನಿತ್ಯಾ। ಆನೆ ಇರವು ಸರ್ವ ಜೀವರ ಸ್ವರೂಪಾ। ಏನಿದ್ದದೆ ಸಿದ್ಧಾ ಮತ್ತೊಂದಾಗದು ಕಾಣೊ। ಅನಂತ ಕಲ್ಪಕ್ಕೆ ಮಾಡುವಾ ನೀನಲ್ಲಾ। ಆನು ನಿನ್ನ ಬಿಟ್ಟು ಅಗಲುವದಿಲ್ಲಾನು। ಮಾನ ವ್ಯಾತಕೆ ಎನ್ನ ಹಂಗಿಸಿ ಕೊಲ್ಲುವಾ। ಜಾಣತನವೇನೊ ಜಗದಂತರ್ಯಾಮಿ। ಹೀನಾಯ ಉಣಲಿಕ್ಕೆ ಎಂದಿಗೆಂದಿಗೆ ಕೇಳು। ನಾನಲ್ಲದೆ ಮತ್ತೊಬ್ಬನ ತೋರಿಸು। ಶ್ರೀನಾಥ ವಿಜಯವಿಠ್ಠಲ ಸರ್ವೋತ್ತುಮಾ। ಆನಂದ ಮೂರ್ತಿ ನಮೊ ನಮೊ ನಿನಗೆ॥೪॥

**ಆದಿತಾಳ**

ಹಾರಾ ಭಾರಾ ವೈಹಿಸಿ ಪ್ರಾಣ ಸರ್ವೇಂದ್ರಿಯಕ್ಕೆ ಕಾರಣವಾಗಿದ್ದು ಈ ಪರಿ ಉಪಕಾರ। ಸಾರಿ ಸಾರಿಗೆ ಹೊರಿಸಿ ಪುಣ್ಯ ಮಾರ್ಗಕೆ ನಾನು। ಪ್ರೇರಿಸುತಿಪ್ಪೆನೆಂಬೊ ಪ್ರತಿಷ್ಠೆ ಸಲ್ಲದು। ಬೇರೆ ಮಾತುಗಳ್ಯಾಕೆ ಪಾಪಮಾಡಿಸುವ ವಿ। ಚಾರ ಮತ್ತಾರದು ಸರ್ವಾಧಿಕಾರಿ ನೀನೆ। ಸಾರಿ ಸಾರಿದೆ ಬಿಡದೆ ಸರ್ವರು ನಾನಾ ಪ್ರ। ಕಾರದಿಂದಲಿ ಗುಣೋಪಾಸನೆ ಮಾಡುವರು। ಈ ರೀತಿ ಶತಸಿದ್ಧ ಇದರೊಳಗೊಂದುಂಟು। ಸಾರಾಂಶ ಪೇಳುವೆ ದಾಸೋಹುಮ್ಮೆಂದನುಡಿ। ಆರಾದರು ತಿಳಿ ನಿನಗೆ ಈ ಭಾಗ್ಯವಿಲ್ಲಾ। ಆರಾಧನೆ ಇಪ್ಪದು ಅಧಿಕಾಧಿಕಲ್ಲವದೆ। ಈ ರೀತಿ ದಾಸತ್ವ ನಿನಗೇನು ಪ್ರಯೋಜನಾ। ನೂರು ಮಾತಿಗೆ ಒಂದೇ ಸಿದ್ಧಾಂತ ಪ್ರಮೇಯಗಳು। ಪ್ರೇರಣೆ ನಿನ್ನದು ಅದರಂತೆ ಪ್ರವರ್ತಿಸುವೆ। ತೋರೊ ತೋರೆಲೊ ದೇವಾ ಇದಕೆ ಪ್ರತಿ ಉತ್ತರ। ಬೀರುವೆ ಜಗದೊಳು ನಿನ್ನ ವ್ಯಾಪಾರಂಗಳು। ಶಾರೀರಾದಲ್ಲಿ ಇದ್ದು ತಪ್ಪಿಸಿಕೊಂಡು ಪೋಗಿ। ದೂರದಲ್ಲಿ ಇದ್ದರಾಗೆ ಸಮಸ್ತ ನುಡಿ ಸತ್ಯಾ। ನೀರಜಲೋಚನ ವಿಜಯ ವಿಠ್ಠಲ ನಿನ್ನಾ ರೀತಿ ಲಾಲಿಸಿದರೆ ಸೋಜಿಗವಾಗಿದೆ ॥೫॥

**ಜತೆ**

ಉಭಯ ಚೇತನ ಕರ್ಮ ಅನಾದಿ ಬಂದಿದೆ ।
ಪ್ರಭುವೆ ವಿಜಯ ವಿಠ್ಠಲಾ ವಿಶ್ವನಾಟಕ ದೈವಾ ॥೬॥



## ಸುಳಾದಿ-೭

(ಶ್ರೀ ಹರಿ ಸ್ವತಂತ್ರ ಪ್ರಮೇಯ)

ಶ್ರೀ ಹರಿಯು ನಿರಪೇಕ್ಷಿಯಾದರೂ ಭಕ್ತಾಭಕ್ತರ ಸ್ವರೂಪಯೋಗ್ಯತೆಯಂತೆ ಕರ್ಮ ಮಾಡಿಸಿ ತಕ್ಕ ಫಲವಿತ್ತು ತಾನು ನಿರ್ಲಿಪ್ತನಾಗಿರುವ.

## ರಾಗ- ಭೈರವಿ ಧ್ರುವತಾಳ

ಇಕೋ ನಮ್ಮ ಸ್ವಾಮಿ ಸರ್ವರಂತರ್ಯಾಮಿ। ಮಕ್ಕಳಾಟಿಕೆ ತೆರದಿ ಮೂಲೋಕವಾ। ಸಿಕ್ಕು ತೊಡಕ ಸಿಕ್ಕಿ ಪ್ರಪಂಚ ಪಚ್ಚಿಸಿ ತಾ। ಸಿಕ್ಕದೆ ಎಲ್ಲೆಲ್ಲಿ ಇಪ್ಪ ಶಕ್ತಾ। ಭಕ್ತರು ಮದದಿಂದ ಗರ್ವಿಸಿದರವರಾ। ಉಕ್ಕು ತಗ್ಗಿಸುವನು ಭಯವತೋರಿ। ರಕ್ಕಸ ಜನ ಅಹಂಕಾರದಲ್ಲಿ ಇರಲು। ಸೊಕ್ಕು ಮುರಿದು ನಿತ್ಯ ನರಕದಲ್ಲಿ। ಇಕ್ಕದೆ ಬಿಡನಯ್ಯಾ ಸತ್ಯಸಂಕಲ್ಪನೆಂಬೊ। ದಕ್ಕಾಟ ಮಹಾ ಬಿರಿದು ಮೆರವುತಿದಕೊ। ದಿಕ್ಕಿ ದಿಕ್ಕಿನಲಿ ಈತನ ವ್ಯಾಪ್ತಿ ಪೂರ್ಣವಾಗಿ। ಚೊಕ್ಕಟ ಕಾಂತಿಯಲ್ಲಿ ತುಂಬಿಹದೋ। ಮುಕ್ತಿ ಬೇಕಾದರೆ ಈತನ್ನ ಮೊರೆ ಹೋಗಿ। ಮಿಕ್ಕಾದ ದೈವಂಗಳಿಗೆ ಸ್ವಾತಂತ್ರವೆ। ಲಕ್ಷ ಎಂಭತ್ತು ನಾಲ್ಕು ಯೋನಿ ಭೇದವ ಮಾಡಿ। ಕಕ್ಕಸ ಕರ್ಮವನ್ನು ಕೊರಳಕಟ್ಟೀ। ಅಕ್ಕರದಿಂದಲಿ ತಾನೆ ಜೀವರ ಕೈಯ್ಯಾ। ತಕ್ಕ ತಕ್ಕ ಕರ್ಮ ಮಾಳ್ಪ ಮಾಳ್ಪಿ ವಕ್ಕಲ ಮಾಡುವ ವಂಚನೆ ಇಲ್ಲದಲೆ। ತಕ್ಕೊಂಬ ಕರುಣವನ್ನು ತನ್ನವರಿಗೆ ಹಕ್ಕಲವಾಗಗೊಡ ಮಾಡಿಸಿದ ಪುಣ್ಯ। ದಕ್ಕಿಸಿ ಉಣಿಸುವ ಮನ ಬಂದಲ್ಲೀ। ಲಕುಮಿವಲ್ಲಭ ವಿಜಯ ವಿಠ್ಠಲರೇಯ। ಉಕ್ತಿಯ ಪ್ರೇರಿಸುವ ಅವರವರ ಯೋಗ್ಯತನೋಡಿ॥೧॥

## ಮಟ್ಟತಾಳ

ಶರಣರು ನುಡಿದದ್ದು ಸರಿ ಎನಿಸುವ ತನ್ನ। ಚರಣ ಭಜಕರಲ್ಲಿ ನಿರುತ ಮನಸು ಇತ್ತು। ದುರುಳರಿಗೆ ಇದನೆ ಪರಿಹರಿಸುವ ಉ। ತ್ತರ ಪ್ರೇರಿಸುವ ನಿರ್ಜರರನ್ನು ಮೆಚ್ಚಿಸುವಾ। ಮರಿಯಾದೆ ಇನಿತು ಪರಿಯಲಿ ನಡಿಸುವ। ಪರಮ ಪುರುಷನ ಸುಚರಿತಕೆ ನಮೊ ನಮೋ। ಹಿರಿದಾಗಿ ಹಿಗ್ಗಿ ಮರಳೆ ಮರಳೆ ಸ್ತೋ। ತ್ತುರ ಮಾಡಿದವರನ್ನು ಪರಮ ಧನ್ಯನು ಕಾಣೊ। ಪರಮಧನ್ಯನು ಕಾಣೊ ಸುರರಿಗೆವಶವಲ್ಲದ। ಹಿರಿಯಾ (ಯು) ಮತ್ತಾವನೊ। ಹರಿಯಲ್ಲದೆ ಇಲ್ಲಾ ಧರಣಿಯೊಳಗೆ ಸತ್ಯಾ। ಸಿರಿವಂದಿತ ನಮ್ಮ ವಿಜಯ ವಿಠ್ಠಲನೇ। ಬಹಿರ ಅಂತರ ಪ್ರೇರಣೆಯಲ್ಲಿ ರಕ್ಷಿಸುವ ॥೨॥

### ತ್ರಿವಿಡಿತಾಳ

ಜೀವ ಸ್ವಾತಂತ್ರ ಅಸ್ವಾತಂತ್ರವೆರಡಕ್ಕೆ। ಆವಾವ ಕಾಲಕ್ಕೆ ಇವ ಗೆಲ್ಲಿದೋ। ಜೀವ ಸ್ವಾತಂತ್ರನೆಂಬಿಯಾ ಇವನೆ ಅರಸಾಗಿ। ಪಾವನ್ನ ಮತಿಯಲ್ಲಿ ಸರ್ವಸೌಖ್ಯ। ತಾ ಉಂಡು ತೃಪ್ತಿಯಾಗದೆ ಇಪ್ಪ ಬಗಿ ಏನೊ। ಕೋವಿದರು ಪೇಳಿ ಮುಂದೆ ಕೇಳಿ। ಜೀವ ಅಸ್ವಾತಂತ್ರನೆಂಬಿಯಾ ಸುಮ್ಮನೆ। ಆವಾವ ಪ್ರಯೋಜನ ಇಲ್ಲದೊಂದೆ। ಠಾವಿನಲ್ಲಿ ಇರನೇಕೆ ಇದರ ವಿಚಾರವ। ಭಾವದಲ್ಲಿ ತಿಳಿದು ನೋಡುವದೂ। ಜೀವಕ್ಕೆ ಸ್ವಾತಂತ್ರ ಅಸ್ವಾತಂತ್ರವೆಂಬೊ। ಈ ವಿಧ ಕರ್ಮಗಳು ಕಾಣಿಪದೆ। ದೇವೇಶ ಎಂಥ ಉಪಾಯವಂತ ನೋಡಿ। ಜೀವನದೊಳಗೆ ತಾನಿದ್ದು ಇದ್ದೂ। ಯಾವತ್ತು ನಡತೆಯು ನಡಿಸುವ ಪರಸ್ಪರ। ಜೀವರಿಂದಲಿ ಭೇದ ಬಿಂಬವೆನಿಸಿ। ಆವಾಗ ದೂಷಣ ಭೂಷಣ ವಾತಿಲಿ। ಕಾವ ಕೊಲ್ಲುತಲಿಪ್ಪ ನಿರ್ದೋಷದಿ। ಜೀವರಾಶಿಗಳೆಲ್ಲ ಮಾಡುವ ವ್ಯಾಪಾರಾ। ಆವದೊ ರಂಗನ್ನ ತೊರದು ಮಾಳ್ಪಾ। ನೋವಾ ನೋವಿಪನಾರು ಸುಖವ ಕೊಡುವನಾರು। ಕೇವಲ ಸಂಶಯ ಬಡಿಪನಾರೂ। ಪಾವಿನ ತುಳಿದ ಶ್ರೀ ವಿಜಯ ವಿಠ್ಠಲರೇಯಾ। ಕೈವಲ್ಯ ಮಿಕ್ಕಾದ ಸ್ಥಾನದಿ ಇರುತಿಪ್ಪ ॥೩॥

### ಅಟ್ಟತಾಳ

ತಾನೆ ಭಕ್ತನ ಮೇಲೆ ದಯದಿಂದ ಒಲಿದು ಸ। ನ್ಮಾನವೇ ಇತ್ತು ನಿತ್ಯ ಸಾಕುತಲಿ ನಿಜ। ಸ್ವಾನುಭವ ತೋರಿ ತಡಮಾಡದಲೆ ಅಜ್ಞಾನ ಹಿಂದು ಮಾಡುವ ಮಾನವ ಪುಂಗವ। ಮಾಣಾದಿರಿ ದಿಕ್ಕು ನಮಗೆ ಈತನಲ್ಲದೆ ಇಲ್ಲ। ಪ್ರಾಣನಾಯಕ ಹರಿ ವಿಜಯ ವಿಠ್ಠಲ ಕೃಷ್ಣ ಕಾಣಿಸಿಕೊಂಡರೆ ಕಠಿಣವೆಂಬೊದೆ ಇಲ್ಲಾ ॥೪॥

### ಆದಿತಾಳ

ಸಕಲ ಜಡ ಜೀವರೊಳು ಹರಿ ತಾನು। ಅಕಳಂಕನಾಗಿ ನಿಚ್ಚಟ ಅಂತರಂಗದಿ। ಲಕುಮಿಸಮೇತ ಇದ್ದ ಕಾರಣದಿಂದ। ಭಕುತಿಯಲಿ

ತನ್ನೊಳಗಿದ್ದ ಮೂರುತಿಯನ್ನು। ಭಕುತನಾದವನು ಬಿಡದೆ ಪೂಜಿಸಿದರು। ಸಕಲರ ಹೃದಯದಿ ಪ್ರೇರಿಸಿ ಅವರಿಂದ। ಸಖತನ ಮಾಡಿಸಿ ಸ್ನೇಹ ಪುಟ್ಟಿಸುವನು। ಮುಕುತಿದಾಯಕ ನಮ್ಮ ವಿಜಯ ವಿಠ್ಠಲರೇಯಾ। ಅಕುಟಿಲ ಜನರ ಸಂಗಡ ಒಡನಾಡುವ ॥೭॥

**ಜತೆ**

ನಂಬಿದ ಭಕ್ತರ ನಾನಾ ಪರಿಯಲ್ಲಿ ।
ಅಂಬುಜಾಕ್ಷ ವಿಜಯ ವಿಠ್ಠಲ ಕಾವುತಲಿಪ್ಪ ॥೮॥

❖ ❖ ❖

## ಸುಳಾದಿ-೭

**(ಶ್ರೀಹರಿ ಸ್ವತಂತ್ರ ಪ್ರಮೇಯ)**

ಸಾಧನ ವಿಚಾರ, ಎಲೈ ಜೀವನೇ ನೀನೆ ಕರ್ತಾನೆಂಬ ಹಂಬಲ ಬೇಡ. ಎಲ್ಲರಿಗೆ ಉಪಜೀವ್ಯನಾದ ಶ್ರೀಕೃಷ್ಣನೇ ಇರುವನೆಂಬ ಇತ್ಯಾದಿ ಪ್ರಮೇಯ

**ರಾಗ- ಭೈರವಿ ಧ್ರುವತಾಳ**

ಮನವೆ ಕೆಂಗಡದಿರು ಒಡನೆ ನೆರದು ಬಂದ। ಜನಕೆ ಸುಗ್ರಾಸವೆಂತಾಹದೆಂದೂ। ಅನುಮಾನ ಹಚ್ಚಿಕೊಂಡು ಬಡವಾಗದಿರಲೋ ಯೋ। ಚನೆ ಮಾಡು ನಿನ್ನೊಳಗೆ ಮರಳೆ ಮರಳೆ। ಘನ ಮಹಿಮನಾರೆಯಣ ಅನಾದಿ ಸ್ವಭಾವಿಕ। ಚಿನುಮಯ ಸತ್ಯ ಸಂಕಲ್ಪ ದೇವ। ಇನಿತು ಜೀವಿಗಳಿಗೆ ತತುಕಾಲಕ್ಕೆ। ತೃಣ ಮೊದಲಾದ ಗ್ರಾಸ ಮಾಡಿ ಇಪ್ಪ। ಕ್ಷಣಮೀರಗೊಡದೇ ಅವಲ್ಲ್ಯಾದರು ಇದ್ದರು। ಉಣಿಸುವ ಉಚಿತಾವನ್ನೆ ತಿಳಿದು ನೋಡಿ। ದಿನದಿನಕೆ ನಿರ್ಮಾಣ ಮಾಡಿದಂತೆ ಬ್ರಹ್ಮ। ಫಣೆಯಲ್ಲಿ ಬರದಿಪ್ಪ ಆಯುಕರ್ಮ ವಿದ್ಯಾ। ಧನ ನಿದಾನ ನೇಮಿಸಿ ಹರಿ ಆಜ್ಞಾದಲ್ಲಿ।

ಜನಿಸುವಾಗಲಿ ಅವರವರ ಪಡಿಪಾನ। ಕೊನೆ ಶರಗಿನಲ್ಲಿ ಕಟ್ಟಿ ಕಟ್ಟಿಹನೊ। ನಿನಗೆ ಕಾಣಬಾರದು ವೇದಶಾಸ್ತ್ರಗಳಿಂದ। ಗುಣಿಸಿ ನೋಡಿದರು ತಾರಕಣ್ಣವಹದು। ಅಣು ಮಾತುರ ನಿನ್ನಿಂದಾಗುವ ಕಾರ್ಯವೇನೊ। ಅನುಭವಕೆ ತಂದುಕೊಂಡು ಜ್ಞಾನಿಯಾಗೊ। ಬಿನಗು ಚಿಂತೆಗಳಿಂದ ಬರುವ ಲಾಭವೆ ಕಾಣೆ। ತನುವೆ ಶೋಷಿಸಿ ವ್ಯರ್ಥ ಧಾವತಿಯಾಕೆ। ಧನವಂತ ಸಿರಿ ನಮ್ಮ ವಿಜಯ ವಿಠ್ಠಲರೇಯಾ। ಮನುಜಾದಿ ದೇಹಿಗಳಿಗೆ ಸ್ವಾಮಿಯಾಗಿ ಇಪ್ಪ ॥೧॥

## ಮಟ್ಟತಾಳ

ಹಿಂದಿನ ಜನುಮದಲ್ಲಿ ಇವರಿವರು ತಮ್ಮ ಸಂ। ಬಂಧಿಗಳ ಕೂಡ ಸುಖಿಸಲಿಲ್ಲವೇನೊ। ಇಂದು ನೀನವರಿಗೆ ಒಡೆಯನು ನಾನಹು। ದೆಂದು ಗರ್ವವ ತಾಳಿ ಹಿಗ್ಗುವದು ಸಲ್ಲಾ। ಅಂದು ನೀನಾವದೇಶ ಇವರು ಮತ್ತಾವಲ್ಲಿ। ಪೊಂದಿಕೊಂಡಿದ್ದರೊ ಪೇಳುವದೆಲೊ ಮನವೆ। ಮಂದತನವೆ ಬಿಟ್ಟು ಸರ್ವ ಬಗೆಯಿಂದ। ಇಂದಿರೇಯರಸನೆ ಭಾರಕರ್ತನೆನ್ನು। ನಂದ ಮೂರುತಿ ನಮ್ಮ ವಿಜಯ ವಿಠ್ಠಲರೇಯನ। ಅಂದವನ್ನು ತಿಳಿದು ನಿಸ್ಸಂಗನಾಗೊ ॥೨॥

## ತ್ರಿವಿಡಿತಾಳ

ಜನನಿ ಜನಕನಾಗಿ ಅನುಜ ಭ್ರಾತೃನಾಗಿ। ತನುಜ ಮೊಮ್ಮಗನಾಗಿ ಆರ್ಯನಾಗಿ। ತನು ಸಂಬಂಧಿಗನಾಗಿ ಸಖನಾಗಿ ಗುರುವಾಗಿ। ಜನಪಾಲಕನಾಗಿ ಜಾಮಾತನಾಗಿ। ಮನೆ ಸೇರಿದವನಾಗಿ ಮಹತ್ಮನಾಗಿ ಯೋ। ಚನೆ ಪೇಳುವನಾಗಿ ದೂತನಾಗಿ। ಹಣವ ಕೊಡುವನಾಗಿ ಮಾವ ಮಾತುಳನಾಗಿ। ಮುನಿಯಾಗಿ ಮೈದುನ ಭಾವನಾಗಿ। ಗುಣವ ಪೇಳುವನಾಗಿ ಗುರುತು ತೋರುವನಾಗಿ। ಅನುಸಾರಿ ನರನಾಗಿ ಆತ್ಮನಾಗಿ। ಎಣಿಸಿ ನುಡಿವದೇನೊ ನಾನಾ ರೂಪನಾಗಿ। ತನುವೆ ಧರಿಸಿ ತಾನೆ ಸಾಕ್ಷಾತ್ಕಾರಾ।

ಕ್ಷಣ ಬಿಡದಲೆ ಪಾಲಿಸುವ ಯುಗಯುಗದಂತೆ ಮಾ। ತನು ಲಾಲಿಸುವದು ಇವರೊಳಗೆ ತಾನೆ। ಗುಣಪೂರ್ಣನಾಗಿ ನಿಂದಿರಿದು ನಿರುತ ಪ್ರಯೋ। ಜನ ಮಾಳ್ಪಾ ಜೀವಿಗಳ ವಿಶ್ವಂಭರನೊ। ತೃಣ ಒಂದಾದರು ನಾರಾಯಣನ ವಿರಹಿತವಾಗಿ। ಮಣಿಸಬಲ್ಲರೆ ಪೇಳೊ ಸಿರಿಯಾದ್ಯರು। ಇನಿತು ಪರಿ ಇರಲಿಕ್ಕೆ ನೀನವೆ ಸ್ವಾತಂತ್ರ ತನ ಪಚ್ಚಿಕೊಂಡದ್ದು ಸೋಜಿಗವೊ। ಶುನಕ ಹಮ್ಮಿಲಿ ಪೋಗಿ ಬಾಲಾ ನೆಟ್ಟಿಕೆ ಮಾಡಿ ಘನಗಿರಿ ಎತ್ತೆನೆಂಬೊ ಗಾದಿಯಾ। ಎಣಿಕೆಮಾಡೆಲೊ ಮನವೆ ನಿನ್ನ ಪೌರುಷ ಉಳ್ಳರೆ। ತನು ಕ್ಲೇಶದಿಂದಲಿ ಬಳಲುವದೇನೊ। ಮನೆ ಮಂದಿರವ ತಿರುಗಿ ದೈನ್ಯವೃತ್ತಿಯ ಬಟ್ಟು ಪ್ರಣತನಾಗಿ ಸರ್ವರನ ಕೇಳಿ(ಳು)ವಿ। ನಿನಗೆ ಪಡಿ ಹಾಕಿದ ದೈವವೆ ಇವರಿಗೆ। ಅನಿಮಿತ್ತನಾಗಿ ಹಾಕುತಲಿಪ್ಪ। ಕನಕೋದರನಯ್ಯಾ ವಿಜಯ ವಿಠ್ಠಲರೇಯಾ। ಅನುಕೂಲನಾಗಿ ಗ್ರಾಸವಾಸಕೊಡುವನೊ ॥೩॥

### ಅಟ್ಟತಾಳ

ಭೂತಳ ಪಾತಾಳ ಸ್ವರ್ಗಾದಿ ಲೋಕದಿ। ಜಾತನಾಗಿದ್ದ ಪ್ರಕೃತಿ ಬದ್ಧ ಜೀವಿಗೆ। ದಾತನೊ ಸಂಪೂರ್ಣ ಬಲ ವೀರ್ಯ ಔದಾರ್ಯ। ಭೂತಿವಂತನೊ ಕರುಣಾಳು ಮನೋಹರ। ಭೀತಿರಹಿತ ಜಗದಾಧಾರ ಗುಣಶೀಲ। ಪಾತಕ ಹರ ಪ್ರಭು ಪತಿತಪಾವನ ಪ್ರ। ದ್ಯೋತ ಸನ್ನಿಭ ಶುಭಲಕ್ಷಣಕರ್ತಾ ಕಾ। ರ್ಯ ತಾ ಪ್ರೇರಕ ಸಾಕ್ಷಿ ಸರ್ವಾ। ಭೂತಗಳಾಳುವ ಭವ್ಯಗಾತುರ ಮಹ। ಖ್ಯಾತಿ ಕೀರ್ತಿವಂತ ಜ್ಞಾನಾನಂದ ಸಕ। ಲಾತಿಶಯ ಉಳ್ಳ ಹರಿಯೆ ಸ್ವಾತಂತ್ರ ಸ್ವಾ ತಂತ್ರ ಪುರುಷ ನಿರ್ದೋಷ ಶಿಖಾಮಣಿ। ಈ ತೆರದಲಿ ನಿತ್ಯ ಪೊಗಳಿಸಿಕೊಳುತಿಪ್ಪ। ಪ್ರೀತನು ಈಕ್ಷಿಸಿ ಸಾಕದೆ ಬಿಡುವನೆ। ನೀತವ ನೀ ತಿಳಿ ಭೂಮಿಮೇಲಣ ಸರ್ವಾ। ಜಾತಿಗೆ ಆಹಾರವ ನೀನೆ ಕೊಡುವನೇನೊ। ಮಾತು ಲಾಲಿಸು ಪುಟ್ಟದ ಮುನ್ನೆ ಅವರವರ। ಶೀತೋಷ್ಣ ಸುಖದುಃಖ ನಿರ್ಮಾಣ ಮಾಡಿಪ್ಪ। ಗೋತುರ ಧರ ಸಿರಿ ವಿಜಯ ವಿಠ್ಠಲರೇಯ। ತಾ ತಿರುಗುವನೊ ಅನ್ನೋದಕವನ್ನು ಪೊತ್ತು॥೪॥

### ಆದಿತಾಳ

ಕೋಟಿ ದ್ರವ್ಯ ಇದ್ದ ಮಾನವಾ। ಕಾಟಿ ಕಾಣದೆ ಮರಗುವ। ಮೀಟು ಕವಡೆ ಇಲ್ಲದವನು। ಊಟ ಮಾಡುವ ನಾನಾ ಸೌಖ್ಯಾ। ಘೋಟಕಾಸ್ಯನ ಮಾಯವೊ ಇದು। ಆಟವಲ್ಲವೊ ಪೇಳಿದ ಮಾತು। ದಾಟದಿರು ನಿದಾನಾವೆನ್ನು। ಕೋಟಲೆ ಬಿಡು ನಾನೆಂಬೊದು ಬಲು। ಬೂಟಕ ಕಾಣೊ ಗೋಡಿ ಮೇಲಿನ। ಓಟದಂತೆಯಾಗುವದೊ। ನೀಟು ಬಯಸು ಸತತ ಬಹುಜನ। ಕೂಟದೊಡನೆ ಹರಿ ಎನ್ನು। ಸಾಟಿ ಎನದಿರು ಇದರೊಳಗಾವ। ನೋಟಗಾರನು ಇಪ್ಪನೊ। ಪಾಟುಗೆಡದಿರು ನಿನಗೀಪರಿಯಲಿ। ಗೀಟುಗ್ಯೆದಿದೆ ಕರ್ಮವು। ತಾಟತೂಟಕ ಮಾಡಿ ಇದ್ದ। ಮಾಟಹೋಹಾದೆ ಎಲೆ ಮನವೆ। ಊಟ ಮಾಡು. ಊಟ ಮಾಡು। ಊಟಮಾಡು ತಲೆವಾಗಿ ಏಟಿಏಟಿಗೆ ಪೋಗಿ ಮರದ। ಹೋಟಿಯೊಳಗೆ ಇರೆ ತಪ್ಪುವದೆ। ನಾಟಕಧರ ನಮ್ಮ ವಿಜಯ। ವಿಠ್ಠಲ ಮೂರ್ತಿಯ ಧೇನಿಸು ಮನದಲ್ಲಿ। ದಾಟುವೋದು ಭವಸಾಗರವನು ॥೫॥

### ಜತೆ

ಎಲ್ಲರಿಗೆ ಉಪಜೀವ್ಯಾ ರಜತಪೀಠ ಪುರಿ ।
ವಲ್ಲಭ ವಿಜಯ ವಿಠ್ಠಲ ಮಧ್ವಮುನಿ ವರದ ॥೬॥



## ಸುಳಾದಿ-೮

(ಶ್ರೀ ಹರಿ ಸ್ವತಂತ್ರ ಪ್ರಮೇಯ)

ಸಕಲ ಕರ್ಮಗಳು ಜೀವನದಿಂದ ಆಗುವವಲ್ಲ. ಆಯಾ ತತ್ವಾಭಿಮಾನಿಗಳು ತಮಗೆ ಶ್ರೀಹರಿ ಪ್ರೇರಿಸಿದಂತೆ ತಾವು ಮಾಡಿ ಮಾಡಿಸುವರು. ದುಷ್ಟರಿಂದ ಅಶುಭ. ಶಿಷ್ಟರಾದ ಭಕ್ತರಿಂದ ಶುಭಕರ್ಮ ಮಾಡಿಸುವ ಶಕ್ತನು ಹರಿಯೊಬ್ಬನೇ ಇರುವನು.

## ರಾಗ- ಕಲ್ಯಾಣಿ ಧ್ರುವತಾಳ

ನಾ ನಡದವನಲ್ಲ ನಾ ಪಿಡದವನಲ್ಲ। ನಾ ನುಡಿದವನಲ್ಲ- ನಾ ಕೇಳಿದವನಲ್ಲ। ನಾ ನೋಡಿದವನಲ್ಲ- ನಾ ಕೂಡಿದವನಲ್ಲ। ನಾನಿತ್ತವನಲ್ಲ- ಮತ್ತಾನು ಕೊಂಡವನಲ್ಲ। ನಾ ನಾಳಿದವನಲ್ಲ- ನಾ ಪೋದವನಲ್ಲ। ನಾನುಂಡವನಲ್ಲ- ನಾ ಬೇಡಬರಲಿಲ್ಲ। ನಾನುಟ್ಟವನಲ್ಲ- ನಾ ಬಿಟ್ಟವನಲ್ಲ। ನಾನುಳಪಿದವನಲ್ಲ- ನಾ ಕಟ್ಟಿದವನಲ್ಲ। ನಾ ನಿಲಿಸಿದವನಲ್ಲ- ನಾ ಕಳುಹಿದವನಲ್ಲ। ನಾನಲಿದವನಲ್ಲ- ನಾ ಕೋಪದವನಲ್ಲ- ನಾ ಸಾರಿದವನಲ್ಲ। ನಾನಾಬಗೆಯಿಂದ ಏನೇನೊನೆಸಗುವ। ಅನಂತ ಶುಭಾಶುಭ ಮಾನಸಾದಿಯ ಕರ್ಮ। ವಾಣಿಯ್ಯುರ್‍ಸ ರುದ್ರ ಆ ನಿರ್ಜರ ನಾಯಕ। ಪ್ರಾಣಾನಿರುದ್ಧಮನು ಮೇಣು ಬೃಹಸ್ಪತಿ ದಕ್ಷಾ। ಭಾನು ಚಂದ್ರಾದಿ ಅಭಿಮಾನಿಗಳಿಪ್ಪರು। ಮಾಣಾದೆ ಸ್ತ್ರೀಯರೊಡನೆ ಅನಂತಬಗೆ ಕರ್ಮಕೆ। ಜಾಣತನರಾಗಿ ಹೀನವೆಮಗಿಪ್ಪರು ದಾನವಕುಲ ವೈರಿ ವಿಜಯ ವಿಠ್ಠಲರೇಯ। ನೀನಿತ್ತ ಸಲಿಗೆಯಿಂದ ಆನಂದವೊ ಸುರರಿಗೆ ॥೧॥

## ಮಟ್ಟತಾಳ

ದುಷ್ಟ ವ್ಯಾಪಾರಕ್ಕೆ ಕಲಿಯಾದಿ ಖಳರ। ಇಟ್ಟು ಅವರಿಂದ ಆವಾವ ಸಂಶಯ। ಬಿಟ್ಟು ಖೇದಗೊಳಿಪ ಮಾಯಾ ನಿಬಿಡಿಮಾಡಿ। ಇಷ್ಟು ಬಗೆಯಲ್ಲಿ ಪಾಪಕ್ಕೆ ಮನೆ ಎನಿಸಿ। ಸೃಷ್ಟಿಯೊಳಗೆ ನಿನ್ನ ಬಂಧಕ ಶಕುತಿಗೆ। ಕಟ್ಟು ಕಂಡವನಾರು ಕರುಣಿಗಳ ದೇವ। ವಿಷ್ಣು ವಿಶ್ವ ಬಾಹ್ಯ ವಿಜಯ ವಿಠ್ಠಲರೇಯ। ಘಟ್ಟಿ ದೈವವೆ ಎನ್ನನು ಪೊರೆವ ಧೊರಿಯೆ ॥೨॥

## ತ್ರಿವಿಡಿತಾಳ

ದೇವ ದಾನವರಲ್ಲಿ ಬಾಹಿರಂತರವಾಗಿ। ದೇವ ವ್ಯಾಪುತ ಸರ್ವ ಸ್ವಾತಂತ್ರನೊ ನೀನು। ಆವು ಪೇಳುವದೇನು ಎನ್ನೊಳು ಅವರಿಗೆ। ಶ್ರೀವಿಭುವೆ ನೀನು ಅವರೊಳಗೆ। ಝಾವ ಝಾವಕೆ ಬಿಡದೆ ಯಾವತ್ತು ಚೇಷ್ಟಿಯ।

ಆವಾವನೋಳ್ವ ಬಲವಂತನೊ। ಭಾವದಲಿ ನೋಡೆ ಬಲು ವಿಚಿತ್ರ ಕರ್ಮ। ಠಾವಿ ಠಾವಿನಲಿ ಸ್ತಾಯ ವ್ಯೆಯ್ಯಾ। ಕಾವವನಾರು ಸಮ್ಮಗೆ ಇಪ್ಪವನಾರು। ಪಾವನ ಮಾಳ್ಪನಾರು ಕೆಡಿಪನಾರು। ದೇವತಿಗಳಲ್ಲಾ ದೈತ್ಯರೆ ಮೊದಲಲ್ಲಾ। ನಾವಂದನರಿಯೆ ಅನ್ಯಥ ಕರ್ಮವ। ಕಾವ ಜನಕ ನಮ್ಮ ವಿಜಯ ವಿಠ್ಠಲರೇಯಾ। ಕೈವಲ್ಯದಾಯಕ ದುರಿತವನಕುಠಾರ ॥೩॥

### ಅಟ್ಟತಾಳ

ಸುರರಿಗೆ ಪ್ರೇರಿಸಿ ಶುಭಕರ್ಮ ಮಾಡಿಸಿ। ಪರಮ ಸದ್ಗತಿಗೆ ಸಾಧನ ಮಾಳಿಪೆ। ದುರುಳರಿಗೆ ಪ್ರೇರಿಸಿ ದುಷ್ಟ ಕರ್ತವ್ಯ। ಚರಿಸುವಂತೆ ಮಾಡಿ ಕ್ಲೇಶಬಳಿಪೇ। ಸುರರು ದಾನವರಿಂದ ಎನಗೆ ಈ ಪರಿಯಾದ। ಚರಿತೆ ಕಾಣುತಲಿರೆ ಹಗಲಿರುಳೂ। ಪರಮ ಭಕುತಿ ಸಜ್ಜನ ವ್ಯಾಪಾರಂಗಳು। ನಿರುತ ಮಾಡುವೆನೆಂದರೆ ಕೂಡದು। ಪರಮೇಷ್ಟಿಗಲ್ಲದೆ ಮಿಕ್ಕಾದವರಿಗೆ ದುರುಳ ಕಲಿ ವಾಸವಾಗಿರಲು। ನಿರಯ ಕರ್ಮಂಗಳು ವಲ್ಲೆನೆಂದರೆ ಆವಾ। ಇರುತಿಪ್ಪ ವ್ಯಾಪಾರ ವ್ಯರ್ಥವಲ್ಲ್ಯೆ। ಹರಿಯೆ ವಿಚಾರಿಸು ತಮೊಗುಣದ ಕಾರ್ಯ। ಹಿರಿದಾಗಿ ಮಾಡುವಬಗೆ ಯಾವದು। ಸರಸಿಭಜವ ಕಲಿ ಮತ್ತೆ ಪುರಂಜಯ। ಇರಲಾಗಿ ಎರಡೊಂದು ಗುಣವ್ಯಾಪಾರ। ಅರಘಳಿಗೆ ನಿಲ್ಲದೆ ಸುತ್ತಿಸುತಿವೇ। ಸಿರಿ ತ್ರಯರೂಪದಿ ಅಲ್ಲಿ ಇರಲು ನೀ ನೀ। ಪರಿ ಕ್ರೀಡಾ ಮಾಡಲು ನಮ ನಮ್ಮದೆ। ಎರಡೊಂದಾವಸ್ಥಿಯಾಗುವದು ಯಾದವೇಶ। ಶರಣು ನಿನ್ನ ದ್ವಯಪದಪದ್ಮಕ್ಕೆ। ಕರುಣಾಕರ ಗುರು ವಿಜಯ ವಿಠ್ಠಲರೇಯ। ಸ್ಮರಿಸಿದವರ ಮನೋಭೀಷ್ಟೆ ಮಾಡಿದ ದೈವ ॥೪॥

### ಆದಿತಾಳ

ಎಲ್ಲೆಲ್ಲಿ ಪೋದರೇನು ಎಲ್ಲೆಲ್ಲಿ ಇದ್ದರೇನು। ಎಲ್ಲೆಲ್ಲಿ ನಿಂದರೇನು। ಎಲ್ಲೆಲ್ಲಿ ನೋಡಲೇನು। ಎಲ್ಲೆಲ್ಲಿ ಉಂಡರೇನು ಎಲ್ಲೆಲ್ಲಿ ಆಡಲೇನು। ಎಲ್ಲೆಲ್ಲಿ ಕೇಳಲೇನು ಎಲ್ಲೆಲ್ಲಿ ತಿರಗಲೇನು। ಸಲ್ಲನು ಸಲ್ಲನು ನರಕಕ್ಕೆ ನರಕಕ್ಕೆ। ಬಲ್ಲವ

ಬಲ್ಲವ ಸರ್ವ ಹರಿಲೀಲೆ। ಬಲ್ಲಿದನೆ ನೀನಾದಿಯಲ್ಲಿ ಮಾಡಿದ ಕ್ಲಿಪ್ತಿ। ವಲ್ಲದೆ ಪೊಸಬಗೆ ಮತ್ತೊಂದಾವದು ಪೇಳು। ಸಲ್ಲದೆಂದು ನಿನ್ನ ಕ್ಲಿಪ್ತಿ ಮೀರಿ ನುಡಿಯೆ। ಎಲ್ಲ ಯತನಗಳು ಯಥಾರ್ಥವಾಗುವದು। ಫುಲ್ಲಲೋಚನ ರಂಗಾ ವಿಜಯ ವಿಠ್ಠಲ ಸಿರಿ। ವಲ್ಲಭ ನಿನ್ನ ಕ್ಲಿಪ್ತಿಯಲ್ಲದೆ ಅಧಿಕ ಉಂಟೆ॥೫॥

**ಜತೆ**

ಭಕ್ತರ ವಶವಾಗಿ ಬಹು ಚೇಷ್ಟೆ ಮಾಡಿಸುವ ।
ಶಕ್ತಕ್ರಿಯಾ ವಿಜಯ ವಿಠ್ಠಲ ದೀನ ಉದ್ಧಾರ ॥೬॥

❖ ❖ ❖

## ಸುಳಾದಿ-೯

**(ಭಕ್ತರ ಲಕ್ಷಣ ಸಾಧನ ವಿಚಾರ)**

ಭಕ್ತರು ಇತರ ಸುಖಾದಿಗಳನ್ನು ಬಯಸದೇ ಕೇವಲ ಹರಿಯನ್ನೇ ಹೃದಯದಲ್ಲಿಟ್ಟು, ಆ ಬಿಂಬಕ್ರೀಯೆವೆ ಮುಖ್ಯವೆಂದು ತಿಳಿದು, ಅನೇಕ ವಿಷಯಗಳು ಅನುಭೋಗಿಸುತ್ತಿದ್ದರೂ, ಸಕಲ ಕರ್ತೃನಾದ ಪರಮಾತ್ಮನಲ್ಲೆ ಮನಸ್ಸು ಇಟ್ಟು ಚರಿಸುವರು.

**ರಾಗ- ಸಾವೇರಿ ಧ್ರುವತಾಳ**

ಸತ್ಯಲೋಕದ ಪದವಿ ಸಾರೆ ಸಾರೆವಾದರು ಮೊಗ। ವೆತ್ತಿ ಲೇಶ ಮಾತ್ರ ನೋಡರಯ್ಯಾ। ಮತ್ತೆ ತಪ ಜನ ಮಹರ್ಲೋಕಾದಿ ಆಳಿಕೆ। ಚಿತ್ತಕೆ ತಾರರು ಒಮ್ಮ್ಯಾದಡೇ। ತತ್ತಳಿಸುವ ಸ್ವರ್ಗ ನಾನಾ ಭೋಗ ಬಂದು ಹತ್ತಿಲಿ ನಿಂದರೂ ಕೇಳರಯ್ಯಾ। ಅತ್ಯಂತ ಉಪಸರ್ಗ ಅಂಗೈಯಲಿ ಸೇರೆ। ಹತ್ತದೆಂದು ಬೀಸಿ ಬಿಸಾಟುವರು। ಮರ್ತ್ಯಲೋಕದಲ್ಲಿದ್ದ ಪರಿಪರಿ ಸೌಖ್ಯ। ಸುತ್ತ ಕುಣಿದಾಡಿದರು ಸುಮ್ಮನಿಹರೊ। ಚಿತ್ತಜನಯ್ಯನ ಚಿತ್ತದಲ್ಲಿಟ್ಟು।

ನಿತ್ಯಪೂರ್ಣರು ನಿಜ ಭಾಗವ। ತೋತ್ತುಮರಿದನೆಲ್ಲ ಲೆಕ್ಕಿಸರೈ। ಎತ್ತಲಾದರತ್ತ ಹರಿಪಾದ ಸರ್ವದ। ಹೊತ್ತುಕೊಂಡು ಕೊಂಡಾಡುವರಯ್ಯಾ ಅಯ್ಯಾ। ಮೃತ್ಯುವಪಾರಿ ಮಾಯೀ ಮಿಗಿಲಾದವರು। ಭೃತ್ಯರಾಗಿ ಜಯು ಜಯವೆಂಬರು। ವೃತ್ತಿ ವಿತ್ತದ ಪರವೆ ಪರಲೋಕವಲ್ಲದೆ। ಸತ್ಯವಂತರಾಗಿ ಸರ್ವಕಾಲಾ। ವತ್ತಿದಗ್ನಿಯಂತೆ ಧರೆ ಮೇಲೆ ತೋರಿ ತಮ್ಮ ಆತ್ಮದೊಳಗೆ ತಮ್ಮ ಹರಿಯ ಕೊಂಡಾಡುತ। ತತ್ವಮಾರ್ಗದಲಿ ಗುಣಿಸಿ ಎಣಿ। ಸಿ ತಾರತಮ್ಯ ಬಗೆಯಿಂದ ಸುಖಿಸುವರೊ ಕರ್ತೃತ್ವ ಎಂಟು ಆವದಾದರೂ ಪ್ರಾ। ಪುತ್ತವಾದರು ನಗುತಲಿಪ್ಪರದಕೊ। ಕೀರ್ತಿ ಸಂಪಾದಿಸಿ ಹರಿಯ ಗುಣಂಗಳ। ಕೀರ್ತನೆ ಮಾಡುವರು ಮನಬಂದಂತೆ। ಪೆತ್ತ ತಾಯಿ ತಂದೆ ಹರಿಯೆ ನಮಗೆ ನಿತ್ಯ। ಇತ್ತದು ಭುಂಜಿಸಬೇಕೆಂಬರೊ। ಇತ್ತಂಡ ಪ್ರವಹಾದ ಚಿಂತೆ ಇಲ್ಲದೆ ಪ್ರತಿ। ಉತ್ತರವಿಲ್ಲ ಕೇಳಿ ದೂರದೃಷ್ಟಿ। ಬುತ್ತಿಯೊಳಗೆ ರಸವಾಸನೆ ರುಚಿ ವ್ಯಾ। ಪುತವಾಗಿದಂತೆ ಹರಿ ಇವರಲ್ಲಿ। ಚಿತ್ರವ್ಯಾಪ್ತನಾಗಿ ಇಪ್ಪ ಅರ್ಪಿತ ಕೈ। ಕೊಳ್ತಡಿ ಗಡಿಗೆ ಲಾಲಿಸಿ ಪಾಲಿಸಿ। ಪ್ರತ್ಯಕ್ಷ ತೋರರು ಬಹಿರದಲಿ ತಮ್ಮ। ಸತ್ವಗುಣದ ಕಾರ್ಯ ಲೇಶ ಮಾತ್ರ। ರತ್ನ ಕಾಂಚನ ಧಾನ್ಯ ಪಶು ತುರಗ ಗಜಾಂದಣ। ಸತ್ತಿಗೆ ಸೂರ್ಯಪಾನ ಚಾಮರಾ ವಸ್ತ್ರ। ವಸ್ತ್ರಾಲಂಕಾರ ರಾಜಕೋಶ ರಾಜಧಾನಿ। ಮುತ್ತುಮಯವಾದ ಪ್ರಸಾದ ದುರ್ಗ ಭೃತ್ಯವರ್ಗ ಮಂತ್ರಿಸಂದಣಿ ಸಾಧನ। ನೃತ್ಯಗಾಯನ ನೀತಿ ನಿರ್ಣಯ ನ್ಯಾಯಾ। ತುತ್ತಿಸುವ ಜನ ಸಂಭ್ರಮವೂ। ಪಿತೃ ಮಾತೃ ಭ್ರಾತಾ ಭಾರ್ಯಾ। ಪುತ್ರಾ ಪುತ್ರಿ ಪೌತ್ರ ಪ್ರಪೌತ್ರ ಬಂಧುಬಳಗಾ। ಈ ತೆರದಿ ನೋಡಿ ತೃಣ ಬ್ರಹ್ಮಾದಿತನಕ। ಹತ್ತಾವರಣಸಹಿತಾ ಮೀರಿ ತಿಳಿದು ಉತ್ತು। ಮೋತ್ತಮ ವಸ್ತ ನಿಶ್ಚೈಯಿಸಿ ಅದರ ಮೇಲೆ। ಹತ್ತು ನೂರು ಲಕ್ಷ ಕೋಟ್ಯಾನಂತಾ। ಮೊತ್ತಮೇಲಾಗಿ ನೋಡೆ ಪರಮ ಮುಖ್ಯತರ। ವಸ್ತುವೆ ಇದೆ ಎಂದು ಹರಿ ಪಾದದ। ಅತ್ಯಧಿಕ ಪ್ರೀತಿಯಾಗಿ ಹಗಲಿರುಳು ಬುದ್ಧಿ। ಚಿತ್ತಾರದಲ್ಲಿ ಇಟ್ಟು ಉಚಿತದಲ್ಲಿ। ಹೊತ್ತು ಪೋಗಾಡುವರು ಇದರಿಂದಲ್ಲದೆ ಅನ್ಯ। ವಾರ್ತಿವೆಂಬೊದಿಲ್ಲ ಕಾಣುವಲ್ಲಿ। ಮೂರ್ತಿಯ ನೋಡುವರು

ವೈದಿಕ ಲೌಕೀಕ। ಸ್ಫೂರ್ತಿಯಿಂದಲಿ ಅನುಭವಕೆ ತಂದು। ಪ್ರತ್ಯೇಕ ಪ್ರತ್ಯೇಕ ಜಡಜೀವ ರಾಶಿಯಲ್ಲಿ। ಉತ್ತಮ ಶ್ಲೋಕನೊಬ್ಬ ಕ್ರಿಯಾಭಿನ್ನ। ತತ್ತತ್ವದಾರ್ಥದಲ್ಲಿ ತದಾಕಾರನಾಗಿ ನಿಂದು। ಸುತ್ತಿಸುತ್ತಿಪ ಜಗವ ನಿರ್ಲೇಪದೀ। ಸತ್ಯ ಜಗತ್ತು ಅಸ್ವತಂತ್ರ ಅಪೂರ್ಣ ಅ। ನಿತ್ಯ ಅಸಾರವೆಂದು ತಿಳಿದಿಪ್ಪರು। ಆತ್ಮದಾಪೇಕ್ಷವಿಲ್ಲ ಮತ್ತೊಂದು ಗಣಣೆ ಉಂಟೆ। ಆತ್ಮನೆ ಗತಿ ಎಂದು ಆನಂದದಿ। ಪೂರ್ತಿ ಸಂಪದರಾಗಿ ನಾನಾಭೋಗ ದಿವ್ಯ ಸಂ। ಪತ್ತು ಸಾಧನದಿಂದ ಕುಣಿದಾಳ್ವರೂ। ನೆತ್ತಿಯ ಮೇಲೆ ಭಾಂಡಗಳು ಪೊತ್ತುಗೊಂಡು। ನರ್ತನೆ ಮಾಡುವ ಪುರುಷನ ಧ್ಯಾನ। ಎತ್ತಲಿಪ್ಪದೊ ಅದರಂದದಿ ಇವನ ಮನಸು। ಹತ್ತಿ ಬಿಡದಿಪ್ಪದು ಹಾರ್ಯಾಡಲು। ತುತ್ತು ಮೊದಲಾದ ಯತ್ನ ಹರಿಯಿಂದಾ। ಗುತ್ತಲಿವೇ ಎಂದು ನಲಿದಾಡೋರು। ದತ್ತ ಸ್ವಾತಂತ್ರ ಶ್ರುತಿಗೆ ವಿರೋಧವಾಗದಂತೆ। ಸತ್ಕರ್ಮಾಚರಿಸುವರು ಜನಹಿತಾರ್ಥ। ಹತ್ತಿದ ಪ್ರಾರಬ್ಧ ಭೋಕ್ತನಿಗೆ ಕೇಳು। ಎತ್ತಣದೊ ಪಾಪಪುಣ್ಯ ವಿಚಾರಿಸೆ। ಕೀರ್ತಿ ತಂದುಕೊಡುವ ಇವರಿಗೆ ಕರ್ಮಲೇಶ। ಮಾತ್ರ ಬರಗೊಡನು ಸ್ಮರಣೆಯಿಂದ। ಶತೃ ಸಂಹಾರ ನಮ್ಮ ವಿಜಯ ವಿಠ್ಠಲನ್ನ ಪಾ। ಡುತ್ತ ತಿರಗುವ ಭಕ್ತನೆ ಮಹಾಧನ್ಯ ॥೧॥

### ಮಟ್ಟತಾಳ

ಹದಿನಾಲ್ಕು ಲೋಕಾ ಉದರದೊಳಗೆ ಇಟ್ಟು। ಪದುಮನಾಭನ ಅಥ ಪದುನಾಭನ ತಮ್ಮ। ಹೃದಯದೊಳಗೆ ಇಟ್ಟು ಪದೊಪದಿಗೆ ಧ್ಯಾನ। ಮುದದಿಂದಲಿ ಮಾಡಿ ಸದಮಲರಾಗುವರು। ಇದೆ ಧೃಡ ವೈಕುಂಠ ಸದನ ಹಂಬಲಿಸರ್ಯೆಯ್ಯಾ। ಪದುಮ ಕರ್ನಿಕೆಯಲಿ ವಿಧಿ ರುದ್ರಾದಿಗಳ। ಅದುಭೂತ ರೂಪಗಳ ಬದಿಯಲ್ಲಿ ನಿಲ್ಲಿಸಿ। ಮಧುವೈರಿಗೆ ನಾನಾವಿಧು ಭೂಷಣ ವಸನ। ಮಧುರನ್ನ ಸರ್ಪಿ ದಧಿಪಾಲು ದಿವ್ಯ। ಉದಕ ಸರ್ವಭೋಗ ಮೃದುತರವಾಗಿ ತ। ಪ್ಪದಲೆ ಕಲ್ಪಿಸಿ ಮಹಾ। ಸುಧಿಯಿಂದಲಿ ಚಿತ್ತದಲಿ ಅರ್ಪಿಸುವರು। ಇದರಿಂದಲೆ ಸರ್ವದ ತೃಪ್ತಿಯಾಗಿ। ಭುಧಜನರ ಕೂಡ

ಹುದುಗಿಕೊಂಡಿಪ್ಪರೈ। ಮದನ ವೈರಿನುತ ವಿಜಯ ವಿಠ್ಠಲರೇಯನ। ಪಾದ
ದುರ್ಗಾಶ್ರಯದ ಅಧಠರು ಅನುದಿನಾ ॥೨॥

### ತ್ರಿವಿಡಿತಾಳ

ನರಕಾಗಿರಕಾ ಕರ್ಮಾಗಿರ್ಮಾ। ದುರಿತಾಗಿರಿತಾ ದುಃಖಾಗಿಃಖಾ।
ಜರತಾಗಿರತಾ ಜಾಡ್ಯಾಗೀಡ್ಯಾ ರೋಗಾಗೀಗಾ। ನರಜನ್ಮಾಗಿರಜನ್ಮಾ
ಕ್ರೂರಾಗೀರಾ। ಮರಹುಗಿರಹು ಮಂದಾಗಿಂದಾ ವಿಷಯಗಿಷಯಾ।
ನಿರಯಾಗಿರಯಾ ಭೀತಿಗೀತಿ। ಮರಣಾಗಿರಣಾ ಭ್ರಾಂತಿಗೀಂತಿ ಬಾಧೆಗೀಧೆ।
ಕೊರತಿಗಿರತಿ ಮಾಯಾಗೀಯಾ। ಗರಳಾಗಿರಳಾ ಹೇಯಗೀಯಾ
ಗಜಾಗಿಜಾ। ಬರಗಾಲಾಗಿರಗಾಲಾ ಛಿದ್ರಾಗಿದ್ರಾ। ದುರುಳಾಗಿರಳಾ
ಭಟರುಗಿಟರು। ಘೋರಾಗೀರಾ ನಿರಬಂಧಾಬಂಧಾ। ಹಾಸ್ಯಾಗೀಸ್ಯಾ।
ಪರಿಪರಿಸುಖ ದುಃಖ ಬಂದು ತಾಕಿದರೂ ಜ। ಝುರಿಸದೆ ಇಪ್ಪರು
ಹಗಲಿರುಳೂ। ಹರಿಶರಣರಿಗೆ ಆವದಾದರು ಗಣಣೆ। ಕರಿಯಂತೆ
ತಿರುಗುವರು ದೇಹ ಮರದೂ। ಹರಿಮೂರ್ತಿಯಲ್ಲದೆ ಮತ್ತೊಂದು
ವಸ್ತುವ। ಧರೆಯೊಳು ಕಾಣರು ಒಮ್ಮೆಯಾದರೂ। ಪರಿಣಾಮದ ದೋಷ
ಬಯಸೂವರಲ್ಲದೆ। ಅರಲವ ಇಹದಾಲೋಚನೆ ಇಲ್ಲವೊ। ಸರ್ವರಾಧಾರಕ
ವಿಜಯ ವಿಠ್ಠಲನ। ಹೃತ್ಸರಜಿದಲ್ಲಿ ನೋಡಿ ವೈಕುಂಠಾಪೇಕ್ಷಿಸರು ॥೩॥

### ಅಟ್ಟತಾಳ

ಹರಿಯಿಂದ ನೋಡೋರು, ಹರಿಯಿಂದ ಕೊಂಬೋರು।
ಹರಿಯಿಂದ ಆಡೋರು, ಆಡಿಸಿ ಕೊಂಬೋರು। ಹರಿಯಿಂದ ಕೇಳೋರು,
ಕೇಳಿಸಿಕೊಂಬೋರು। ಹರಿಯಿಂದ ಪಿಡಿವರು, ಪಿಡಿಸಿಕೊಂಬುವರೆಲ್ಲಾ।
ಹರಿಯಿಂದ ನಡೆವರು, ನಡಿಸಿಕೊಂಬುವರು। ಹರಿಯಿಂದ ಅಪ್ಪೋರು,
ಅಪ್ಪಿಸಿಕೊಂಬೋರು। ಹರಿಯಿಂದ ಹೇಳೋರೊ, ಹೇಳಿಸಿಕೊಂಬೋರು।
ಹರಿಯಿಂದ ಕೊಡುವರು, ಕೊಳ್ಳಿಸಿಕೊಂಬುವರೆಲ್ಲಾ। ಹರಿಯಿಂದ

ಸರ್ವಪ್ರಯೋಜನ, ಮಾಡೋರು ಮಾಡಿಸಿಕೊಂಬೋರು। ಹರಿಕೊಡಲು ಉಂಟು ಕೊಡದಿದ್ದರೆ ಇಲ್ಲಾ। ಹರಿಯೆ ಪರಮ ಮುಖ್ಯ, ಹರಿವ್ಯಾಪಾರದ। ವಿರಹಿತಿ ತೃಣ ಒಂದು ಚರಿಸಲಾಪದೆ। ಸರ್ವಭೇದ ನಮ್ಮ ವಿಜಯ ವಿಠ್ಠಲನ್ನ। ಸ್ಮರಣೆ ಸಮಸ್ತ ವಿಧಿ ಎಂದು ತಿಳಿದಿರುವರೂ ॥೪॥

**ಆದಿತಾಳ**

ಹರಿಯವೊಳಗಿಪ್ಪರು। ಹರಿಯ ಪೊತ್ತಿಹರೂ। ಹರಿಯ ಅಂತರದಲ್ಲಿ ನಿಲ್ಲಿಸಿಕೊಂಡಿಹರು। ಹರಿಗೆ ಬಲ್ಲಿದರಾಗಿ ಸುತ್ತಿಹರು। ಹರಿಯ ಲೆಕ್ಕಿಸದಲೆ ಹರಿಹರಿದಾಡೊರು। ಹರಿನಾಮ ಜೀವನ ಪಾವನ ತ್ರಿಭುವನ। ಹರಿನಾಮ ಸರ್ವದ ಜಪತಪ ನೇಮನಿಷ್ಠ। ಹರಿಗೆ ಸಾಮ್ಯಧಿಕ್ಯ ಇಲ್ಲವಿಲ್ಲವೆಂದು। ಕರಣಶುದ್ಧಿಯಲಿಂದ ಕೊಂಡಾಡಿ ಕೊಂಡಾಡಿ। ಪರಮೈಶ್ವರ್ಯ ಮೂರ್ತಿ ವಿಜಯ ವಿಠ್ಠಲರೇಯ। ಸರಿ ಸರಿ ಸರಿ ಎಂದು ಬೇಕಾದಂತಿಪ್ಪರು ॥೫॥

**ಜತೆ**

ಏಕಾನೇಕ ಹರಿ ಎಲ್ಲ ಕಾಲದಲ್ಲೆಂದು ।
ಲೋಕಾಭಿನ್ನ ವಿಜಯ ವಿಠ್ಠಲನ್ನ ನಂಬಿರೋ ॥೬॥

**(ಶ್ಲೋಕ)**

ಪುಂಖಾನುಪುಂಖ ವಿಪಯೇ ಕ್ಷಣ ತತ್ಪರೋಪಿ ।
ಬ್ರಹ್ಮಾವಲೋಕನ ವಿಧಿಂ ನ ಜಹಾತಿ ಯೋಗಿ ॥
ಸಂಗೀತ ತಾಲ ಲಯ ನೃತ್ಯ ಸಮನ್ವಿತೋಪಿ ।
ಮೌಳಿಸ್ಥ ಕುಂಭ ಪರಿ ರಕ್ಷಣ ಧಿರ್ನಟೀವಾ ॥೧॥



# ಸುಳಾದಿ-೧೦

(ಸಾಧನ ವಿಚಾರ ಪ್ರಮೇಯ)

ಶ್ರೀಹರಿಬಿಂಬನಾಗಿ ಸಕಲ ವ್ಯಾಪಾರ ಮಾಡಿಸದಿದ್ದರೆ ಜೀವನು ತೃಣಕೆ ಸಮಾನ, ಸಕಲ ಇಂದ್ರಿಯ ಪ್ರೇರಕ ನೀನೆ, ನೀನಿರದಿದ್ದರೆ ದೇವರಿಲ್ಲದ ಗುಡಿಯಂತೆ, ಸರ್ವವೂ ನಿನ್ನಾಧೀನವೆಂದು ಅರಿತು ಮುಕ್ತ ಜೀವರ ಸರ್ವ ಕ್ರಿಯಾನುಸಂಧಾನ

**ರಾಗ- ಪಂತುರಾವಳ ಧ್ರುತಾಳ**

ನಾನು ಯಾತರ ಪೂಜ್ಯವಾನನೊ ವಾಸುದೇವ। ನಿನೊಲಿದು ನಡಿಸಲಾನು ಬಲಿ ಪ್ರತಿಷ್ಠ। ದೀನ ನರರಿಗೆ ಶುದ್ಧ ಪಾನಪಾಡಿಸಿ ದಿವ್ಯ। ನಾನಾ ಪರಿಮಳ ಲೇಪನಮಾಡಿ ಕೊರಳಿಂಗೆ। ಮಾಣಿಕ್ಯ ಹಾರವು ಪ್ರಸೂನಾ ಮಾಲಿಕೆಗಳೂ। ತಾನಿಡಲಿತ್ತು ಕಾಂಚನ ಭೂಷಣ ವ। ಸನದಿಂದಲಿ ಅವನಿಗೆ ಮೇಣೂ ಉತ್ಸಾಹಗೈಸಿ। ಪಾಣಿಯೊಳಗೆ ದರ್ಪಣ ಪಿಡಿಯಲಿತ್ತು। ಮಾನಿನೀ ಸಹಿತಾಲಿ ನೀ ನೋಡಿಕೊಂಡು ಸುಖ। ವಾನುಬಡುವದೆಂದು ದೀನನ್ನ ಪರಿಪಾಲಿಸಿ। ಆನಂದ ತೋರಿದಂತೆ ನೀನನುದಿನ ಕರುಣವಮಾಡಿ ವಡನೆನಡಿಸಾನು ಕೃತಾರ್ಥನೊ। ನೀನಿತ ಪುಣ್ಯವಿದು ನೀನಿತ್ತ ಫಲವಿದು। ನೀನೀಯದಿರೆ ಒಂದನು ಒಂದಾದರೂ। ತಾನಾಗಿ ಬಂದೂ ಎನಗಿನಿತು ಇಪ್ಪವೆ ಗಾನಮಾಡಲು ಪಂಚ। ಪ್ರಾಣನಾಗಿ ಸಾಕುವ ದಾನೀ ನಿನಗೆ ಸರಿಗಾಣೆ ನಾನೆಲ್ಲಿ। ಪ್ರಾಣನಾಯಕ ನಮ್ಮ ವಿಜಯ ವಿಠ್ಠಲರೇಯಾ। ನೀನಾಧಾರವಾಗೆ ನಾನಾ ಸಂತೋಷ ಎನಗೆ ॥೧॥

**ಮಟ್ಟತಾಳ**

ಜ್ಞಾನೇಂದ್ರಿಯಲ್ಲಿ ನೀನೆ ವಾಸವಾಗಿ। ಕರ್ಮೇಂದ್ರಿಯಲಿ ನೀನೆ ವಾಸ। ಜ್ಞಾನ ಕರ್ಮೇಂದ್ರಿಯಗಳು ನುಡಿಸುವ ನಡಿಸುವ। ಸ್ಥಾನದಲಿ ಸರ್ವ

ಬಿಡದೆ ನೀನೆ ವಾಸ। ನೀನೋಡಿದರಾನು ನೀ ಪಿಡಿದರಾನು ನೀ ನಡದರಾನು। ನೀನೆ ನಾನಾ ಇಂದ್ರಿಯ ವೊಳಗೆ ಇದ್ದು। ಏನೇನು ಪರಿಮಾಡೊ ನಾನದರಂತೆ ಚರಿತೆಯೊಳಗಿಪ್ಪೆ। ನೀನಲ್ಲದೆ ಸ್ವತಂತ್ರ ಪುರುಷರುಂಟೆ। ನೀನೆ ನಿರ್ದೋಷ ವಿಜಯ ವಿಠ್ಠಲರೇಯ। ನೀನೆ ಕಾರಣ ಸರ್ವ ಜಗತ್ತ್ರಯಕ್ಕೆ ॥೨॥

### ತ್ರಿವಿಡಿತಾಳ

"ಯೇಥ ಮಾನಾದ್ವಿಟು" ಎಂಬ ಬಿರಿದು ನಿನ್ನದು। ಆದಿವಿಡಿದು ಸಿದ್ಧವಾಗಿದುದೆ ಎಲೋ ದೇವ। ನೀ ದಯವನು ಮಾಡಿ ಯಾವತ್ತು ಪ್ರೇರಿಸಿ। ಸಾಧನ ಮಾಡಿಸಲದರಿಂದ ಮುಕುತಿಗೆ। ಹಾದಿಯಾಗುವದು ಕ್ಲಿಪ್ತಿಗೆ ಕಡಿಮೆನಿಸದು। ಸಾಧುಗಳಿಗೆ ಇದೆ ಸಾಧ್ಯವಾದರೆ ಸಾಕು। ಆಧಿಕವೆಲ್ಲೆದೊ ಅಧಿಕಮಹಿಮಾ। ಆದಿತ್ಯ ಶಶಿಗಳಿಗೆ ಪುಣ್ಯವೆಗ್ಗಳಿಸಲು। ಸಾಧಿಸಿ ನೀನೆ ಕೊರತೆ ಮಾಡಿದೆ। ಏ ದಯಾಂಬುಧಿಯೇ ಇವರಿಗಿನಿತು ಫಲ। ನಾದಾವ ಎಡೆವನೊ ಎನ್ನ ಯೋಗ್ಯತಾವೆಷ್ಟು। ಈ ಧರೆಯೊಳು ಪುಟ್ಟಿ ನಾನಾಬಗೆ ಅಪರಾ। ಧದವನೊ ನಾನು ಯಾದವೇಶಾ। ಓದನೋಸುಗ ಕ್ರಮಣ ಮಾಡುವನಾ ಆ। ರಾಧನೆಯಲ್ಲಿ ಮುಟ್ಟುವದೊ ಹರಿಯೇ। ಕ್ರೋಧ ತೊರಿಯದವನ ಪುಣ್ಯವ್ಯರ್ಥವೆಂದು। ವೇದ ಶಾಸ್ತ್ರದಲ್ಲಿ ಪೇಳುತಿದಕೋ। ವೈದಿಕ ಮಾರ್ಗ ಲೇಶವಾದರು ಇಲ್ಲಾ। ಸಾಧು ಕರ್ಮಗಳು ಎನಗೆತ್ತಲೋ। ಪಾದದಲ್ಲಿ ತೀರ್ಥ ಪೆತ್ತ ವಿಜಯ ವಿಠ್ಠಲ। ಆದದೆನ್ನೈನ್ನಿಂದ ನೀನೊಲಿಯದಿರೆ ॥೩॥

### ಅಟ್ಟತಾಳ

ದೇವರಿಲ್ಲದ ಗುಡಿ ಆವಲ್ಲಿದ್ದರೇನು। ಆವನಾದರು ಬಂದು ಸೇವಿಯ ಮಾಡೋನೆ। ದೇವಾ ನೀನೆ ಬಂದು ಭಾವದಲಿ ನಿಂದು। ಕಾವುತಲಿರೆ। ಮಾನವರು ನೀಕ್ಷಿಸಿ। ಆವದಾವದೋ ಸೋಜಿಗವಾಯಿತೆಂದು।

ತಾವು ಒದಗಿ ನಿತ್ಯ ಈ ವಿಧ ಮಾಳ್ಪರೊ। ದೇವರಿದ್ದ ಗುಡಿಗೆ ಭಾವುಕ ಸರ್ವದ। ಆವಾವ ನಮಸ್ಕಾರವು ಪ್ರದಕ್ಷಣೆ। ಆವಾವ ಸ್ತೋತ್ರವು ಆವನಾದಡೆ ಗೈಯೆ। ದೇವರಿಗಲ್ಲದೆ ದೇವಾಲಯಲಿದ್ದ। ಗ್ರಾವಕೆ ಏನಯ್ಯಾ ಯಾವತ್ತು ದಿನವಿರೆ। ದೇವಕಿ ನಂದನ ವಿಜಯ ವಿಠ್ಠಲ ಕರು। ಣಾವನಧಿಯೆ ಎನಗಾವದು ನಿಜವೆಂದು ॥೪॥

**ಆದಿತಾಳ**

ನಿನ್ನೊಳಗಿಪ್ಪೆಪೊ। ನಿನ್ನೊಳು ನಡಿವೆವೊ। ನಿನ್ನೊಳಗಾಡುವೆ। ನಿನ್ನೊಳು ನಗುವೆವೊ। ನಿನ್ನೊಳಗೋಡುವೇವೊ। ನಿನ್ನೊಳು ಮಲಗುವೆವೊ। ನಿನ್ನೊಳು ಸಂಸಾರ। ವೆನ್ನೆ ಮಾಡುವೆವಯ್ಯಾ। ನಿನ್ನೊಳಗೂ ನೀನೆ। ಎನ್ನೊಳಗೆ ವ್ಯಾಪ್ತಾ। ವನ್ನೆವಾಗಿಪ್ಪ ಪ್ರ ಸನ್ನ ಮೂರ್ತಿ ಸತತ। ಚನ್ನಾಗಿ ನೀನು ಮಾರ್ಗ। ವನ್ನೆ ಕೊಟ್ಟು ನಡಿಸು। ವನೆ ನಿದಾನವಿರೆ। ಎನ್ನ ಉಪಾಯವೇ। ಘನ್ನ ಮಹಿಮ ನಮ್ಮ ವಿಜಯ ವಿಠ್ಠಲರೇಯಾ। ಸನ್ಮುನಿಗಳ ಕೂಡ। ಮನ್ನಣೆ ಕೈಕೊಂಬೆ ॥೫॥

**ಜತೆ**

ಭಕ್ತಿ ಸುಧಿಯೊಳು ಮುಣಗಿದ ಮನುಜಗೆ ।
ಮುಕ್ತಿಗೊಡವೆ ಏನೊ ವಿಜಯ ವಿಠ್ಠಲ ಮೂರ್ತಿ ॥೬॥



## ಸುಳಾದಿ-೧೧

(ಹರಿ ಸ್ವತಂತ್ರ ಪ್ರಮೇಯ ಸ್ತೋತ್ರವಿ ॥)
ಶ್ರೀಹರಿ ವ್ಯಾಪಾರ ಅತಿ ವಿಚಿತ್ರವು ಶ್ರೀಹರಿಯ ವ್ಯಾಪಾರ ಕಂಡು ಹಿಡಿಯುವ ಶಕ್ತಿ ಆರಿಗೂ ಇಲ್ಲ.

## ರಾಗ-ಭೈರವಿ ಧ್ರುವತಾಳ

ಒಲ್ಲೆನೆಂದರೆ ಎನ್ನ ತೊಲಗಲಿವಿಯ್ಯಾ ನಿನ್ನ। ಬಲ್ಲ ಪರಿಯು ಮಾಡೊದೇನೋ ದೇವಾ। ಎಲ್ಲಿ ಪೊಕ್ಕರು ಬಿಡದು ಏನೆಂಬೆನಯ್ಯಾ ನಿನ್ನ ಬಲ್ಲಿದ ತನಕೆ ಕೊಂಡಾಡಲೊಶವೆ। ಸಲ್ಲುವದು ನೀನು ಮಾಡಿದ ಸಂಕಲ್ಪ। ಎಲ್ಲ ಕಾಲದಲ್ಲಿ ಮೀರುವದುಂಟೆ। ಕಲ್ಲೊಳಗಿದ್ದರು ತಪ್ಪದು ದುಃಖಸುಖ। ಸೊಲ್ಲು ಪೇಳುವದೇನು ಸರ್ವ ಕರ್ತಾ। ಇಲ್ಲಿ ಇದ್ದರೇನು ಅಡಿವಿಗೆ ಪೋದರೇನು। ಉಳ್ಳದಕೆ ಕೊರತೆ ಎಂದೆಂದಿಗೂ। ಎಳ್ಳಿನಿತಾಗದು ಯಾವತ್ತು ಜನ್ಮಕ್ಕೆ ನಿಲ್ಲದೆ ಅನುಭವಕೆ ತಂದುಕೊಡುವ। ದಲ್ಲದೆ ಸುಮ್ಮನಿಪ್ಪ ನಿಜಸ್ವಭಾವ ನಿನ್ನ। ದಲ್ಲವೊ ಕಾಣೊ ನಿತ್ಯದಲ್ಲಿ ಗುಣಿಸೆ। ಅಲ್ಲಿ ನಿನ್ನಂಪ್ರಿಯ ಭಜನೆ ಮಾಡುತಲಿರೆ। ಇಲ್ಲಿಗೆ ತಂದು ಈಪರಿ ಮಾಳ್ಪರೇ। ಮೆಲ್ಲಮೆಲ್ಲನೆ ವೈರಾಗ್ಯದಲ್ಲಿಡು ಎಂದು। ಪಲ್ಲು ಕಿರದು ನಾನು ಸ್ತುತಿಸಲಾಗಿ। ಸೊಲ್ಲು ಲಾಲಿಸಿ ಸತತ ಮನೋ ಭೀಷ್ಟ ಈಯದಲೆ। ಎಲ್ಲರಿಂದಲಿ ಇನಿತು ಸೋಜಿಗವೇ। ವಲ್ಲೆ ವಲ್ಲೆನೊ ಲೋಕದೊಳಗೆ ಮಹಾಖ್ಯಾತಿ। ಯಲ್ಲಿ ತಿರುಗುವದು ಮನಃಪೂರ್ವಕ। ದಲ್ಲಿ ನುಡಿದೆನಯ್ಯಾ ಸಮ್ಮೊಗನಾಗಿ ಶ್ರೀ। ವಲ್ಲಭ ವೊಲಿದಂಗೆ ಚಿಂತಾಮಣಿಯೇ। ಚಿಲ್ಲರೆ ದೈವಂಗಳಿಗೆ ಈಪರಿ ಶಕ್ತಿಯುಂಟೆ। ಚಲ್ಲಿಡಿ ಚಲ್ಲಿಯಡವಿಯ ಭಕ್ತರಿಗೆ ವರವ। ಭಳಿರೆ ನಿನ್ನ ಮಾಯಾ ಎಂಥದೊ ಎಂಥಾದೋ। ತಲ್ಲಣಿಸುತಿದೆ ದೈತ್ಯವಂಶಾ। ಬಲ್ಲವರಿಗೆ ಸಾಮಿಪ್ಯ ವಿಜಯ ವಿ। ಠ್ಠಲ್ಲ ಕರುಣಾಂಬುಧಿ ಸರ್ವ ಪ್ರೇರಕ ಸ್ವಾಮಿ ॥೧॥

## ಮಟ್ಟತಾಳ

ಅಂದಣ ಬಂಧ'ನ ತುರಂಗ ಉರಂಗ। ಕುಂದಣ ಪಾಷಾಣದುಕೂಲ ವಸನ। ವಂದನೆ ನಿಂದ್ಯಗಳು ವಾಙ್ಮಾಧುರ್ಯಗಳು। ಮಂದಿ ಮಹಾರಣ್ಯ ಮನೋದಾರಢ್ಯವು। ಮಂದಿಯ ಸಂದಣಿ ಮಹಾ ಏಕಾಂತವನೂ। ಪೊಂದೆರು ಪೊಂಬಟ್ಟೆ ಭೂಷಣ ದೂಷಣ।

ಒಂದೊಂದು ಪರಿಯಲ್ಲಿ ಒಳಿತು ಹೊಲ್ಲೆಗಳೆಲ್ಲ। ಒಂದು ಕ್ಷಣ ಬಿಡದೆ ಹರಿ ನಿನ್ನಿಚ್ಛೆಯಲಿ। ತಂದಿತ್ತದು ನಾನು ತಲೆದೂಗಿ ವಲ್ಲೆ। ನೆಂದರೆ ಬಡುವದೆ ಬಿಂಕತಾಳಿದರಾಗೆ। ಸಂದೇಹವ ಬಢಿಸಿ ಹೊತ್ತು ಪೋಗಾಡಿಸುವಾ। ನಂದವಲ್ಲದೆ ಗೋವಿಂದಾ ಗೋಪಿಯ ಕಂದಾ। ಮಂದರಾದ್ರಿ ಧರ ವಿಜಯ ವಿಠ್ಠಲ ನಿನ್ನ। ಅಂದಂದದಕ್ಕೆ ಅಂದರೆ ನೆಲೆಗಾಣೆ ॥೨॥

## ತ್ರಿವಿಡಿತಾಳ

ಜಗದೊಳಗೆನ್ನ ಅಭಾಸಾ ಮಾಡುವ ಬಗೆಯೊ। ನಗೆಗೇಡುಮಾಡಿ ಬಿಡುವ ಬಗಿಯೊ। ರಗಳಿಯ ಎಬ್ಬಿಸಿ ಛೀ ಎನಿಸುವ ಬಗಿಯೊ। ಮಿಗೆ ಪುಣ್ಯಂಗಳೆಲ್ಲಾ ಪೋಗಾಡುವಾ ಬಗಿಯೊ। ಹಗೆಗಳ ಕೈಗೆ ಕೊಡುವ ಬಗಿಯೊ। ಬಿಗಿವಿನಲ್ಲಿಯಿಟ್ಟು ಪಾಪ ಕಟ್ಟುವ ಬಗಿಯೊ। ಯುಗದೊಳು ಅಪಕೀರ್ತಿ ಹೊರಿಪ ಬಗಿಯೊ। ಅಗಣಿತ ಜನುಮದ ಕರ್ಮ ತೀರುವ ಬಗೆಯೊ। ವಿಗಡ ಪಾಪಕ್ಕೆ ಪೋಗಿನಿಲ್ಲುವ ಬಗಿಯೊ। ಗಗನ ಭೂ ಪೊಂದದೆ ನಡುವೆ ಇಪ್ಪ ಬಗಿಯೊ। ಮಗುವೆ ನಿನ್ನಾಟದ ಗುಣದ ಬಗಿಯೊ। ತಗಿಯದೆ ಎನ್ನಿಂದ ನಿತ್ಯ ಮಾಳ್ಪಬಗಿಯೊ। ಖಗ ಮೃಗ ಜನ್ಮಕೊಡುವ ಬಗೆಯೊ। ಬಗೆ ಬಗೆ ಜನರಿಂದ ನಿಂದ್ಯ ಮಾಡಿಪ ಬಗೆಯೋ। ಸುಗುಣರ ಸಂಗಡ ಇಡುವ ಬಗೆಯೊ। ನಗಧರ ನೀನೆ ಎನ್ನೊಳಗಿದ್ದು ಬಲು ಪೂಜ್ಯಾ। ದಿಗಳ ಕೈಕೊಂಡು ನಲಿವಾ ಬಗಿಯೊ। ನಿಗಮಾವಳಿಗೆ ಮೈದೋರದ ಮಹಿಮೆಯ ಎ। ನಗೆ ವಿಚಿತ್ರವಾಗಿ ತೋರುತಿದಕೊ। ನಿಗಳ ವಂದಿರಲು ಕಡಿದು ಬಿಷ್ಟು ತಿರುಗಿಸಿ। ಸಿಗಗೊಡದಂತೆ ಅನ್ಯರಿಗೆ ಎನಿಸಿ। ಚಿಗಿದಾಡುತಿದ್ದವನ ಹಿಡಿತಂದು ನೂರಾರು। ನಿಗಳ ಹಾಕಿದಂತೆ ಮಾಡಿದೆಲ್ಲ। ಭಗವಂತಾ ನೀನೊಲಿಯೆ ಮನ್ನಣೆ ಮಾಡಿಸುವ। ಬಗೆ ಸಲ್ಲದು ಕಾಣೋ ಎನಗನುದಿನ। ಭೊಗಸೆ ಒಡ್ಡಿಕೊಂಡು ಬೇಡಿಕೊಂಬೆನು ಅ। ನ್ನಿಗನಾನಲ್ಲವೊ ನಿನ್ನವರ ದಾಸಾ। ಜಗದೀಶ ವಿಜಯ ವಿಠ್ಠಲರೇಯಾ ನಿನ್ನಂಘ್ರಿ। ಯುಗಳದಲಿ ಮನಸು ಪೊಂದುವ ಬಗೆ ಮಾಡು ॥೩॥

### ಅಟ್ಟತಾಳ

ತೂಗಿ ಕೊಡುವ ತಕ್ಕಡಿಯಂತೆ ತಿರಿಗುವ। ಜೋಗಿಕೈಯ್ಯ ಕಪ್ಪಾರದಂತೆ ಧಾನ್ಯವ। ವೇಗದಲಿ ತುಂಬಿ ಕೊಡುವ ಸೊಲ್ಲಿಗೆಯಂತೆ। ಬ್ಯಾಗಡಿ ಹಚ್ಚಿದ ಪಾದರಕ್ಷಿಯಯಂತೆ। ತ್ಯಾಗದವನ ಕೈಯ್ಯಾಧನದಂತೆ ಸಂತತ। ಯೋಗಿಯ ಕೈಯ (ಕರದ) ಅಜನದಂತೆ ಆವಾಗ। ರಾಗದವನ ಕೈಯ ತಾಳಮದ್ದಲಿಯಂತೆ। ಮೂಗುದಾಣಿ ಇಟ್ಟ ಎತ್ತಿನಂತೆ। ಆಗರದೊಳಗಿದ್ದ ಉಡಗುವ ಹಿಡಿಯಂತೆ। ಸಾಗರದಲಿ ಇದ್ದ ಉಸಕಿನಂತೆ ಇಪ್ಪ। ಆಗಾಲಿಗೆನ್ನದೆ ಆದ್ಯಂತ ಕಾಲದಿ। ಜಾಗರ ಸ್ವಪ್ನ ಸುಷುಪ್ತಿಯಲ್ಲಿ ನೀನೆ। ಜಾಗುಮಾಡದೆ ಆವಾವಕರ್ಮಗಳನು। ರಾಗದಿಂದಲಿ ಮಾಡಿಸುವ ಮಹಾದೈವ। ಬಾಗಿಕೊಂಡು ನಿನ್ನ ವಶನಾಗಿ ಇದ್ದು ಲೇ। ಸಾಗಿ ನೀನೊಲಿದಿತ್ತ ಸುಕೃತ ದುಷ್ಕೃತ್ಯಗಳು। ಭೋಗಿಸದಲೆ ಬಿಡದು ಎಲ್ಲಿದ್ದರು। ಆಗಾಮಿ ಸಂಚಿತ ಇದರ ತರುವಾಯ। ನೀಗಗಳೆವ ಪ್ರಾರಬ್ಧಗಳೆಲ್ಲ। ಪೂಗರ್ಭಗಾದರು ತೊಲಗಿ ಪೋಗುವದೆ। ಭೂಗೋಳದೊಳಗೆನ್ನ ಸಾಧನವೇನಯ್ಯಾ। ಯೋಗಿ ಜನರ ಪ್ರಿಯಾ ವಿಜಯ ವಿಠ್ಠಲರೇಯ। ಕಾಗಿಯ ಮರಿಯೊಳು ಕೋಗಿಲೆ ಇದ್ದಂತೆ ॥೪॥

### ಆದಿತಾಳ

ಆವ ಆವ ದೇಹದಲ್ಲಿ ಆವಾವ ಕಾಲಕ್ಕೆ। ಆವಾವ ಗುಣದಂತೆ ನೋವು ಸಂತೋಷಗಳ। ಜೀವದೆಡಿಗೆ ತಂದು ಆವಾಗಲುಣಿಸುವನೆ ನಾವಲ್ಲೆನೆಂದರೆ ತೊಲಗುವದೆ ಕೇಳೂ। ದೇವಾ ನಿನ್ನಿಚ್ಛೆಯಲ್ಲಿ ಕೈವಲ್ಯ ಮತ್ತೆ ನರಕ। ಠಾವಿನಲ್ಲಿ ಇಟ್ಟರು ಜೀವಕ್ಕೆ ಅದೆ ಸೌಖ್ಯ। ಕಾವ ಕೊಲ್ಲುವ ನೀನೆ ಭೂವನದೊಳಗೆಂದು। ಆ ವೇದಗಳು ತುತಿಸಿ ಪಾವನವಾಗುತಿರೆ। ದೇವಕಿನಂದನ ವಿಜಯ ವಿಠ್ಠಲ ಜಗತ್। ಜೀವನ ಜಿತಕರಣ ಸೇವಕರೊಡಿಯಾ ॥೫॥

**ಜತೆ**

ಅತಿ ವಿಚಿತ್ರವೊ ನಿನ್ನ ವ್ಯಾಪಾರ ನೋಡಲು ।
ಪ್ರತಿ ಇಲ್ಲ ಜಗದೊಳು ವಿಜಯ ವಿಠ್ಠಲ ಸ್ವಾಮಿ ॥೬॥

❖ ❖ ❖

## ಸುಳಾದಿ-೧೨

(ಶ್ರೀ ಹರಿ ಸ್ವಾತಂತ್ರ ವಿಷಯ ಪ್ರಾರ್ಥನಾ ಪ್ರಮೇಯ)
ಶ್ರೀಹರಿ ಸರ್ವ ಸ್ವತಂತ್ರನಾದರೂ ಭಕ್ತಪರಾಧೀನನಾಗಿ ಅವರಂತೆ ವ್ಯಾಪಾರ ನಡಿಸುವ ಭಕ್ತವತ್ಸಲನು.

**ರಾಗ- ಸಾವೇರಿ ಧ್ರುವತಾಳ**

ಭಕ್ತರಂದದಕೆ ನೀ ಬರಿಗಣ್ಣುವಿಟ್ಟು ನುಡಿದ। ಉಕ್ತಿಗೆ ತಲೆಬಾಗಿ ಹಲ್ಲು ಮಸಿದರೆ ಭಯವೇ। ರಕ್ತನೇತ್ರದಿಂದ ಹುಂಕಾರವನೆಬ್ಬಿಸಿ ಶಕ್ತಿಯ ತೋರಿದರೆ ನಮಗೆ ನಿನ್ನ ಗಣಣೆ। ರಿಕ್ತಾನಂದದಿ ಬಂದು ಬೇಡಿಕೊಂಡರೆ ಬಿಡೆವು। ಮುಕ್ತಾರ್ಥ ಪರ್ವತವಾಸ ನೆನಿಪಲ್ಯಾಕೆ। ಭುಕ್ತಿ ತೊರದರಯ್ಯಾ। ನಮಗೇನು ಉಪಕಾರ। ರ (ನ) ಕ್ತದೊಳಗೆ ಸಂದಿ ಬಿದ್ದು ಪೋದವನಲ್ಲವೆ। ವ್ಯಕ್ತನಾಗದಿದ್ದರೆ ನಿನಗೆ ನೀನೆ ಇದ್ದಿ। ಭಕ್ತಿಪಾಶದಲ್ಲಿ ಕುದುರೆ ಸಹಿತ ಬಿಗಿವೆ। ಶಕ್ತನಹುದೊ ಅನಾದ್ಯನಂತ ಕಾಲದಲ್ಲಿ। ಭಕ್ತರಮೇಲೆ ನಿನ್ನ ಪ್ರಯತ್ನ ನಡೆಯದು। ಯುಕ್ತಿಯ ಸಾಧಿಸು ನಾನು ಪೇಳಿದ ಒಂದು। ಉಕ್ತಿಗೆ ಒಡೆಯುನೆ ಶರಣುವಾಡುವೆ ನಿನಗೆ। ಮುಕ್ತಾಮುಕ್ತರಂತಿರಲಿ ಅವರಂಘ್ರಿಯಲ್ಲಿ ಅ। ಸಕ್ತನಾದ ಬಿ(ಚಿ)ಟ್ಟಿಗಾ ಎನ್ನ ಪರಾಕು ಕೇಳು। ಮುಕ್ತಿಬಯಪದಿಲ್ಲಾ ತಿಳದಿದೆ ಇದ್ದ ಕರ್ಮ। ಭೋಕ್ತಾನಂತರದಲ್ಲಿ ಕೃಪೆಮಾಡುವೆ ನೀನೆ। ಭಕ್ತ ವತ್ಸಲ ಕೃಷ್ಣಾ ವಿಜಯ ವಿಠ್ಠಲ ವಿ। ರಕ್ತರಾದ ದಾಸರು ತೋರಿ ನುಡಿಯದಿಪ್ಪರೆ ॥೧॥

### ಮಟ್ಟತಾಳ

ಇನನ ಪ್ರಕಾಶದೊಳು ಎಳೆ ಬತ್ತಿಯಲ್ಲಿ। ಮಿಣಿಮಿಣಿಗುಟ್ಟುವ ದೀಪವ ರಚಿಸಲು। ಜನರಿಗೆ ಕಾಣಿಸದು ಕಾಣಿಸಿದರೆ ಪ್ರಯೋಜನಕೆ ಬಾರದು ಸು। ಮ್ಮನೆ ನಾಮವೆ ಉಂಟು ಅಕಾರ್ಯಕವಾಗಿ। ಎನಗಿದ್ದ ಸ್ವಾತಂತ್ರ ಅನಾದಿ ಎಲ್ಲಿಂದ। ಇನಿತು ಇಪ್ಪದು ಕಾಣೆ ಇದು ನಿನ್ನಾಧೀನಾ। ಅನುಗಾಲ ಬಿಡದೆ ಅದೆಯೆಂದರೆ ಅದೆ। ಕ್ಷಣವಾದರೂ ಲೇಸು ಹೊಲ್ಲೆಯಂಗಳ ನಡತಿ। ಅನುಭವಿಪೆನೆಂದು ಯೋಚಿಸಿದರೆ ಇಲ್ಲ। ತನು ಮನ ಕರಣಗಳು ಇಲ್ಲದಾಗಿ ಇವೆ। ಜನನ ಮರಣವಿಲ್ಲ ಜರೆ ಯೌವನವಿಲ್ಲ। ಚಿನುಮಯ ನಾನಹುದೊ ಛಿದ್ರರಹಿತ। ವೆಂದೆನಿಸುವದೆ ಸಿದ್ಧ ಏನಾದರೂ ಕಡಿಗೆ। ನಿನಗೆ ಸಮಿಸಬೇಕು ಅಣು ಅತೀಂದ್ರಯನೆ। ಘನ ಮೂರುತಿ ನಮ್ಮ ವಿಜಯ ವಿಠ್ಠಲರೇಯ। ಸನುಮತವಾದರೆ ಉತ್ತರ ಲಾಲಿಸು ॥೨॥

### ತ್ರಿವಿಡಿತಾಳ

ಕ್ಷೀರಾಬ್ಧಿತೀರದಲ್ಲಿ ಇರಿವಿಗೆ ತೃಷಿಯಡಗದ। ನೀರು ಚಲಿಮೆ ಒಂದು ಇದ್ದಂತೆಯೊ। ಮೇರುಪರ್ವತದೆಡೆಯ ಪಾದಕಾಣಿಯ ತೂಕ। ಹೀರದ ರವೆ ಒಂದು ಇದ್ದಂತೆ ವೊ। ನೂರಾರು ಕೋಟಿ ಮಂದಿಗೆ ಉಣಿಸುವಗೊಂದು। ಚೂರು ತಂಡುಲ ಹಾಕಿ ಇದ್ದಂತೆವೊ। ಈ ರೀತಿ ಎನ್ನಯ ಸ್ವಾತಂತ್ರವೆಂದೆಂಬುದೆ। ಸ್ವರೂಪ ಭೂತವೆಂದೆಂಬೊದೆ। ಸಿದ್ಧ। ಬೇರೆ ಪೇಳುವದಲ್ಲ ಜ್ಞಾನಮಯ ಜೀವ। ಓರಂತೆ ಸರ್ವವು ಸರ್ವದಲ್ಲಿ। ಮಾರುತ್ತರವೆ ಇಲ್ಲ ಇಂಥ ಸ್ವಾತಂತ್ರದಿ। ಧಾರುಣಿಯೊಳಗೆ ಪ್ರಖ್ಯಾತವೇನೋ ಕಾರ್ಯ। ಕಾರಣವಲ್ಲ ಪೂರ್ವದಿಂದಲಿ ಪೊಂದಿರಲು ಪತಿ। ಕರಿಸಬೇಕಾಗಿದೆ ಈರೊಂದು ಕೂಡಿದ ಬಲು. ಸೂಕ್ಷ್ಮವಾದ ಶ। ರೀರ ಕೊಟ್ಟವರಾರು ಅಂದೆ ನಾನೇ। ಮೀರದೆ ನಿನ್ನಾಧೀನವಾಗಿಪ್ಪೆ ವಿ। ಚಾರಂಶವ್ಯಾಕೆ ವಿಶ್ವನಯನ। ಪ್ರೇರಣೆ ನಿನ್ನದು ಹರಿ ನಿನ್ನವಿನಾ। ಮ।

ತ್ರಿನ್ನಾರದಲ್ಲವೆಂದು ದೃಢ ಭಕ್ತಿಲಿ। ಸಾರಿ ಸಾರಿಗೆ ಬಿಡದೆ ಅಣಿ ಖಡ್ಡಿಯನಿಟ್ಟು। ಸಾರುವೆ ಹಿಂದುಳಿಯದೆ ಜಗದೊಳು। ಚೋರನು ಬಂದು ನೋಡುತಿರೆ ಕದ್ದು ವೈ। ಯಾರ ಮಾಡಿದರವಗೆ ತಪ್ಪುವದೆ। ದೂರದಲ್ಲಿದ್ದರು ಒಪ್ಪಗೊಂಬವು। ವಿಸ್ತಾರ ವ್ಯಾಪ್ತನೆ ಕೇಳು ಬಿನ್ನಪವ। ಶ್ರೀರಮಣನೆ ಇದೆ ಮಾತುಗಳು ಮನಕೆ। ಬಾರದೆಂದು ಉದಾಶಿನ ಮಾಡಲು। ಮೂರು ಲೋಕದೊಳಗೆ ವ್ಯಾಪ್ತ ಇದ್ದದಕೆ ನಾ। ಮೀರದೆ ದೂರುತ ನಿನಗೆ ಬಿಡದೆ। ಭಾರ ಕೊಡದೆ ತೊಲಗೆ ಆದದ್ದೆಲ್ಲಾಗಲಿ। ಆರಾದರು ನಿನ್ನ ವ್ರೋಹಿಸಿಕೊಂಬುವರಿಲ್ಲ। ಕ್ಷೀರದೊಳಗೆ ಇಟ್ಟು ಜಡದೊಳು ತಗಿಯದಿ। ದ್ದರೆ ಭಕ್ತನ ವೋಲೆ ಕರುಣ ಬಾರದು ಕಾಣೆ। ವೋರೆದಿರಹದಿರು ದಯದೃಷ್ಟಿಯಲಿ ನೋಡು। ಅರಿವನೆಂದು ನೀ ಎನಲಾಗದು। ತೋರಿ ನುಡಿವೇನಯ್ಯಾ ಇದಕ ಅಂಜಿದರೆ ನಿನ್ನ। ಆರಾಧಿಸುವದೆಂತೊ ಅಮೃತ ಹಸ್ತಾ। ಭಾರಕರ್ತನಾದ ವಿಜಯ ವಿಠ್ಠಲ ನಿನಗೆ। ಹಾರಾವಾಗಿದೆ ಏನೊ ಎನ್ನ ಸ್ತುತಿಸುವದು ॥೩॥

## ಅಟ್ಟತಾಳ

ಕುಣಿ ಹೊಗಿ ಮುಸಕೆನೊ ಗುಣಗಣಪೂರ್ಣನೆ। ಎನಗೆ ಸ್ವಾತಂತ್ರಯಳ್ಳಿನಿತಾದರೆ ಇಲ್ಲ। ಕೊನಿಗೆ ಕೊರಳಿಗೆ ಗಂಟನೆ ಇಕ್ಕದೆ ದೇವ। ತೊನಗಾ ಬಿಡೆನೆಂಬೊ ಘನತನ ಉಳ್ಳರೆ। ಧನವು ಶಳದು ಮಾರ್ಗಣವ ಬಿಟ್ಟರೆ ಪೋಗಿ। ಮೊನೆ ಮೊದಲು ತಾಕಿ ತಿನಿಸುವದಲ್ಲದೆ। ದಿನ ದಿನಕೆ ತ್ರಯಗುಣದಲ್ಲಿ ವ್ಯಾಪಾರಾ। ವನೆ ವಾಡುವಲ್ಲಿ ಮುಂದಿನ ಬಲು ಭರದಾಗ। ಮನವೆ ನಿನ್ನದಯ್ಯಾ ತನು ಮನಕೆ ಸಾಕ್ಷಿ। ಅನುಭವವೆ ಸಿದ್ಧಾ ಅನುಮಾನ ಮಾಡೇನು। ಮಿನಗುವಾ ರಕ್ಷಿಯ ಜನರು ಪಾದದಿಮೆಟ್ಟಿ। ಮನೆ ಮನೆ ಪೋಗಿ ಒಡವೆ ತಿರುಗುವವು। ಜನುಮ ಜನುಮಕೆ ವಂದನೆ ವಾಡುವ ವಂದನೆ ಪೇಳು। ವೆನು ಪ್ರೇರಣೆ ಯಾವ ತೆರದಲ್ಲಿ। ಅಣುವಾಗಲಿ ಮತ್ತೆ ಘನವಾದ ಪ್ರಯೋ। ಜನವೆಲ್ಲ ನೆಸಗುವೆ ಮನೋವಾಕು ಕಾಯದಿ। ಋಣಮೋಚನ ನಮ್ಮ ವಿಜಯ ವಿಠ್ಠಲರೇಯ। ಪಣವು ಕಟ್ಟುವದಲ್ಲಾಪ್ಪಣೆಯಲ್ಲಿದ್ದವನೊಡಿಯಾ ॥೪॥

### ಆದಿತಾಳ

ಚಿತ್ತೈಸು ಮುನಿಗೇಯಾ ಉತ್ತುಮಾಂಗಕೆ ಹಸ್ತ। ಎತ್ತಿ ಮುಗಿವೆ ಎನ್ನತ್ತ ಮೊಗವಮಾಡಿ। ಉತ್ತರ ಕೊಡೊ ಜೀಯಾ ಎತ್ತಣವನಿವನೆಂದು। ಅತತ್ತಪೋಗೆನದೆ ಹತ್ತೆಗರದು ಪಾಲಿಸುತ್ತ ಪ್ರತಿದಿನ। ಪೆತ್ತವನಂತೆನಲಾ ಅತ್ಯಧಿಕ ನೀನೆ। ಉತ್ತಮ ಶ್ಲೋಕನೆ ಎನ್ನ ಸ್ವಾತಂತ್ರವಿದೆ ನೀನು ಮಾಡಿ। ದಂತೆ ನಾನು ಮಾಳ್ಪನೆಂಬೊದೊಂದೆ ಎಂದಿಗೆ ಉಂಟು। ಮಾತು ಪೇಳದಿರಲು ಎನಗೆ ಸಾಧನವಿಲ್ಲ ಮೇಲು। ಮುಕ್ತಿಯಾಗದು ವಾಲಗ ದೊರಿಯದು ಇದರ। ವಿನ ವಾಗಿ ವೆಗ್ಗಳ ನಡತಿಗೆ। ಕರ್ತನಾನೆಂದು ಆಡಿಕೊಂಡಿದ್ದರೆ ನರಕ ವಾ। ದೀತೆಂದು ಅಂಜುತಲಿರಬೇಕು ಸರಕು ಒಪ್ಪಿಸಿ ಕೊಟ್ಟ ತರುವಾಯ ಲಾಭಾಲಾಭವೆರಡರ। ಚಿಂತೆಯಾಕೆ ಆವಲ್ಲಿ ಇದ್ದರು ಇಂಥ। ಉಕ್ತಿಗೆ ನೀನು ಪ್ರತಿ ನಡಿಸುವದೇನು। ಪಂಥಗಾರನಾದರೆ ಎನ್ನ ಮಾತಿಗೆ ಸೋಲು। ಅಂತರಾತ್ಮಕ ನಮ್ಮ ವಿಜಯ ವಿಠ್ಠಲರೇಯ। ಎಂತೊ ನಿನ್ನ ಬಿಗಹು ನೆನಿಸಿದ ಭಕ್ತರೊಳು ॥೫॥

### ಜತೆ

ಭಕ್ತವತ್ಸಲವನ್ನು ನಡಿಸುತ್ತ ಇಪ್ಪನೆ ।
ಶಕ್ತಾ ವಿಜಯ ವಿಠ್ಠಲ ತುತಿಪರಿಗಳು ಕಂದಿ ॥೬॥



## ಸುಳಾದಿ-೧೩

(ಶ್ರೀ ಹರಿ ಸ್ವತಂತ್ರ ಪ್ರಮೇಯ ಪ್ರಾರ್ಥನಾ)

**ಶ್ರೀಹರಿ ಕರ್ತೃನಾದಮೇಲೆ ಜೀವನಿಗೆ ಅಪರಾಧ, ಶುಭಾಶುಭ ಫಲವೇಕೆ? ಕರ್ಮಗಳು ಹರಿಯಾಧೀನವಾದರೂ, ಜೀವನ್ನಿಷ್ಠ ಧರ್ಮರೂಪ ಕ್ರಿಯಾ ಕರ್ಮ ದೇವರಲ್ಲ. ಅನೇಕ ಉಪಮೆಗಳಿಂದ ಮಹಾಮಹಿಮ ಸ್ವತಂತ್ರನನ್ನು ಪ್ರಾರ್ಥಿಸುವಿಕೆ.**

## ರಾಗ-ಭೈರವಿ ಧ್ರುವತಾಳ

ಅಪರಾಧ ಎನಗುಂಟೆ ಅಪರಮಿತ ಕಾಲಕ್ಕೆ। ವಿಪುಳದೊಳಗೆ ಪುಟ್ಟಿ ಅಪವಾದದಲ್ಲಿ ಇದೆ। ಕಪಟ ನಾಟಕ ನಿನ್ನ ಚಪಲತನಕೆ ವರ್ಣಿಪನೆ ಸದಾ। ಕೃಪಣ ಮಾನವ ನಾನು ಸ್ವಪುನಾದಿಯಲಿ ನೀನೆ। ನಿಪುತ ವ್ಯಾಪುತನಾಗಿ ಗುಪಿತದೊಳಗೆ ಎನ್ನಲ್ಲಿ। ಸಫಲ ದುಷ್ಕರ್ಮಗಳು ಕ್ಲಿಪುತವಾಗಿಪ್ಪುದೆ। ಸಮೀಪದಲ್ಲಿ ಇದ್ದು ನೀನುಣಿಪ ಮಹಾ ಮಾಯಾಕಾರ। ಶಪಥದ ದೈವವೆ ಕೃಪೆಮಾಳ್ಪೆನೆಂಬೊ ನಿನ್ನ। ಉಪಕಾರ ಎನಗೇನು ಅಪಶಬ್ದ ಮೊದಲಾದ। ಅಪರಾಧಗಳು ನಾನುಪಚರಿಸಬಲ್ಲನೆ। ರಿಪುಗಳ ಬಿಡದಿರೆ ಜಪತಪಗಳು ಮಾಡಿ ಸುಪಥವ ಪಿಡಿದು ಸಂತಪುತವನೀಗಿ ಈವಾ। ಚಪಲರಿಯಾ ಎಂದು ಎನಗೆ ವಿಪರೀತ ಜ್ಞಾನ ತೋರಿ। ಕೃಪೆಮಾಡದಿಪ್ಪದೇನು ನೃಪತಿತಾನಾಗಿ ಕುಳಿತು। ಕುಪಿತವಾದಿರೆದುರು ಮಾಡುವವರಾರಯ್ಯ। ತಪನ ಕೋಟಿ ಪ್ರಕಾಶ ವಿಜಯ ವಿಠ್ಠಲ ನೀ। ನಪರಾಧ ಮಾಡಿಸೆ ನಾನಪರಾಧದವನಯ್ಯಾ ॥೧॥

## ಮಟ್ಟತಾಳ

ಎನ್ನ ಉನ್ನತವೇನೊ ಎನ್ನ ಸ್ಥೂಲವೇನು। ಎನ್ನಾಕಾರವೇನು ಎನ್ನ ಜ್ಞಾನವೇನು। ಎನ್ನ ಸ್ವತಂತ್ರವೇನೊ ಎನ್ನ ವ್ಯಾಪಾರವೇನು। ಎನ್ನ ಸ್ವಾಮಿತ್ವವೇನೊ। ಎನ್ನ ಪ್ರೇರಣೆ ಏನೊ। ಎನ್ನ ಸಾಧನವೇನೊ। ಎನ್ನ ಪುಣ್ಯವೇನೊ। ಎನ್ನ ಪಾಪವೇನೊ। ಎನ್ನಿಂದಾಗುವ ಅನ್ಯಕಾರ್ಯಗಳೇನು ಎನ್ನಿಸುವ ದೈವ। ಘನ್ನದೊಳಗೆ ಘನವೆ ಅಣೋರಣಿಗಣುವೆ। ನಿನ್ನ ಚಿನ್ನಾಟಕ್ಕೆ ಅನಂತ ನಮೊನಮೊ। ಸನ್ಮುನಿಗಳ ಒಡಿಯಾ ವಿಜಯ ವಿಠ್ಠಲರೇಯ। ಎನ್ನಮೇಲಲ್ಲದೆ ನಿನ್ನ ಧೊರೆತನವು ॥೨॥

## ತ್ರಿವಿಡಿತಾಳ

ಆದದ್ದೆಲ್ಲಾಗಲಿ ಶ್ರೀಧರೇಶನೆ ಅಪರಾಧಗಳೆಲ್ಲ ನಾಪತಿಕರಿಸುವೆ। ಆದಿ ಇಂದಲಿ ಎನಗೆ ಆಧಾರದಲಿ ಒಂದು। ನೀ ದಯದಲಿ ಅದಿಷ್ಠಾನ

ತೋರೊ। ಕೂದಲಿಗಿಂತ ಸಣ್ಣಾದ ಈ ರೂಪಕ್ಕೆ। ಈ ದೇಹಲೇಪನವಾದುದೆಂತೊ। ಸಾಧನ ಸಂಪತ್ತು ನೀನೊ ನಿನಗೆ ಒಬ್ಬ। ಬೋಧಕರ್ತರುವುಂಟೆ ಕೇಳೊ ದೇವ। ಮೇದಿನಿಯೊಳು ನಾನೆ ಸ್ವಾತಂತ್ರನೆಂಬಿಯಾ। ಗಾದೆ ಉಂಟಾದಕ್ಕೊಂದು ಲಾಲಿಸಯ್ಯಾ। ಕಾದ ಬರಲು ಮಹಾರುದ್ರನ್ನಸ್ತಂಭದೋ। ಪಾದೆಯಲ್ಲಿ ನಿಲಿಸಿದೆ ಸುರರ ನೋಡೆ। ಆ ಧೀರವಂತಗೆ ನಿನ್ನಿಂದಲಾ ತೆರ। ನಾದ ಮೇಲೆ ಎನ್ನ ಪಾಡೇನಯ್ಯಾ। ಶೋಧಿಸಿ ನೋಡಲು ಎನಗೊಂದು ಯೆಳ್ಳನಿ। ತಾದರು ಸ್ವಾತಂತ್ರ ಎಲ್ಲಿ ಉಣಿಸಿವೆಲ್ಲಾ। ವೇದ ವಿನುತರಂಗ ವಿಜಯ ವಿಠ್ಠಲ ಜಗದಾ। ಭೇದನೆ ನಿನ್ನ ವಿನೋದಕ್ಕೆ ಅಂಜುವೆ ॥೩॥

### ಅಟ್ಟತಾಳ

ಹರಿವೊ ಹೊಳಿಯೊಳು ಹರಗೋಲು ಇರಲದು। ನರನಿಲ್ಲದಿರೆ ತಾನು ಬರುವದೆ ತೀರಕ್ಕೆ। ಪಿರಿದಾಗಿ ಪೇಳು ಉತ್ತರಕ್ಕೆ ಎಥಾರ್ಥವ। ಹರಿನಾಮಾಸಕ್ತರಿಗಿದು ಸರಿ ಬಂದುದು ಕಾಣೊ। ಕರಕರೆಭವವೆಂಬೊ ಹರೆವ ಹೆದ್ದೊರೆ ಘನ। ಥರೆ ಸುಳಿಯೊಳು ಬಿದ್ದು ಹರಿದು ಪೋಗುವಂಗೆ। ಕರುಣಿ ನೀನಲ್ಲಾದುತ್ತರಿಸುವರಿನ್ನುಂಟೆ। ಸರಿಸ ದೂರದಲಿ ಬಾಹಿರ ಅಂತರಂಗ ಖೇ। ಚರ ಧರಣಿಯಲ್ಲಿ ಪರಿವೇಷ್ಟಾ ಎಡಬಲ। ಧರಿಸಿ ಆಧಾರನಾಗಿ ಇರುಳು ಹಗಲು ಈ। ಪರಿ ವಿಶ್ವವ್ಯಾಪಿಸಿ ಸರ್ವೋತ್ತಮನೆಂಬೊ। ಬಿರಿದು ಧರಿಸಿಕೊಂಡು ಪರಮೇಷ್ಠಿಯಾದ್ಯರ। ಪೊರೆಯುತ್ತಲಿಪ್ಪನೆ ನರಗೆ ಒಳಗೆ ಸೂ। ತ್ತರ ಮೀಟಿ ಪೋಗುವ ಭರವೆಕಲ್ಪಿಸಿ ಅರಹು ಮಾಡಲು ಸಂಚರಿಸುವೆನಾನಯ್ಯಾ। ಅರಸು ಕುಳಿತು ಸಾಸಿರತಪ್ಪು ಎಂದರು। ಪರಿಹಾರವೆಂದು ಉತ್ತರ ಪೇಳುವ ನಾರು ಅರಸಿ ಇಂದಿರೆಯ ಅರಸೆ ಬಲವಂತ। ಅರಸೆ ವಿಜಯ ವಿಠ್ಠಲರಸೆ ಲೋಕದರಸೆ ॥೪॥

### ಆದಿತಾಳ

ಸಾರುವೆನು ದೈನ್ಯದಲ್ಲಿ ಸಾರಿದವರ ಮನೋಹಂಸ। ಧಾರುಣಿಯೊಳಗೆ ಜಾರ ಚೋರ ಹಿಂಸನಾಗಿರಲು। ಪಾರತಂತ್ರನಾದ ಕಂಸಾರಿ ನವನೀತ ಚೋರ। ಜಾರ ಶಿರೋಮಣಿ ಎಂದು ದೂರಿದರೆ। ದುರಿತ ಪರಿಹಾರವೆಂದು ಶ್ರುತಿ ಸ್ಮೃತಿ। ಮೇರೆದಪ್ಪಿ ಪೇಳುತಿವೆ ಕಾರಣ ಕರ್ತನಿನಹುದೊ। ಈರೈದು ಇಂದ್ರಿಯ ಮನ ಶಾರೀರ ರೋಮರೋಮದಾರಾಸುತಾದಿ ಪರಿವಾರಸಮೇತ ನೀನೆ। ಪೂರಣವಾಗಿ ನಿತ್ಯಪ್ರೇರಕನಾಗಿ ವ್ಯಾ। ಪಾರವನ್ನು ಮಾಳ್ಪದು ಅರಿದು ಅನಾದಿಯಿಂದ। ತೋರುವದು ಒಂದು ಕಾಲ ತಾರಕಣ್ಯ ಸ್ವತಂತ್ರ। ಕಾರಣವೆನಿಸಿ ವಿಚಾರದಿಂದ ಕೊರಳು ಕಟ್ಟಿ। ಊರೊಳಗೆ ಇಟ್ಟು ಮಧೋ(ಧು) ಕಾರಕ್ಕೆ ನಿರೂಪ ಇತ್ತು। ವಾರವಾರಕೆ ಹಿಡಿಸಿ ನೂರಾರು ಕೋಟಿ ಬೇಡುವಂತೆ ಗಾರುಡವಮಾಡಿ ಇಂಥ ಘೋರದೊಳಗೆನ್ನ ಪೊಗಿಸಿ। ಹಾರುವ ನೊಣದ ಮೇಲೆ ವಾರಣಯಿಟ್ಟಂತೆ ಮಾಳ್ಪೆ। ದೂರದಿಂದ ನಮಿಸುವೆ ಶ್ರೀರಮಣ ಎನಗಾಗಿ। ಬೇರೆ ಒಂದು ಕರ್ಮವನ್ನು ಅರಿಸಿಕೊಂಡಿಪ್ಪಿಯೇನೊ। ಮೂರು ಗುಣದಲ್ಲಿ ನೀನೆ ಸೇರಿಸಿಕೊಂಡು ಯಾತಕ್ಕಿನ್ನು। ಬಾರದವನ ಕರ್ಮಿಎಂದು ದೂರಿದರೆ ಬಪ್ಪದೇನು। ಮೀರಿದವಗೆ ಮಲತು ಎದುರಿಗೆ ನಿಂದವನಲ್ಲಾ। ಆರತನಾದವನಾ ಸಂಸಾರದಲ್ಲಿ ಪೊಗಿಸುವರೆ। ಹಾರವಲ್ಲ ಎನಗಿದು ವಿಜಯ ವಿಠ್ಠಲ ಉ। ದ್ಧಾರಮಾಡು ಮಾಡದಿರು ಕೀರುತಿ ನಿನ್ನದಯ್ಯಾ॥೫॥

### ಜತೆ

ಒಂದಾವಸ್ಥಾನವೆ ಆವಲ್ಲಿ ಎನಗಿಲ್ಲಿ ।
ಎಂದಿಗೆ ನಿನ್ನವ ವಿಜಯ ವಿಠ್ಠಲ ಮೂರ್ತಿ ॥೬॥



# ಸುಳಾದಿ-೧೪

(ಶ್ರೀಹರಿ ಸ್ವತಂತ್ರ ಪ್ರಮೇಯ ಸ್ತೋತ್ರ ವಿ॥)

ಆ ಎಂಬುದು ಮೊದಲಾದ ಎಲ್ಲ ಶ್ರೀಹರಿ ನುಡಿಸಿದುದೆಸತ್ಯ ಸಕಲ ಕಾಲದಲ್ಲಿ ಜೀವನು ಅಸ್ವಾತಂತ್ರ. ದೇವರೇ ಸರ್ವ ಕೃರ್ತಾನೆಂಬ ಸ್ತೋತ್ರವು

**ರಾಗ-ಮನದಿಚ್ಛೆ ಧ್ರುವತಾಳ**

ಒಡಿಯಾ ನಿಲ್ಲಲಾವು ನಿಲುವೆವಯ್ಯಾ। ಒಡಿಯಾ ನಡಿಯಲಾವು ನಡಿವೇವಯ್ಯಾ। ಒಡಿಯಾ ನೋಡಲಾವು ನೋಳ್ವೆವಯ್ಯಾ। ಒಡಿಯಾ ನುಡಿಯಲಾವು ನುಡಿವೇವಯ್ಯಾ। ಒಡಿಯಾ ಕೊಡಲಾವು ಕೊಡುವೇವಯ್ಯಾ। ಒಡಿಯಾ ಕೇಳಲಾವು ಕೇಳ್ವೇವಯ್ಯಾ। ಒಡಿಯಾ ಮಾಡಲಾವು ಮಾಳ್ವೇವಯ್ಯಾ। ಒಡಿಯಾ ಪಿಡಿಯಲಾವು ಪಿಡಿವೇವಯ್ಯಾ। ಒಡಿಯಾ ಸುಮ್ಮನಾಹೆ ಆವು ಸುಮ್ಮನೆ ಎಲ್ಲಾ। ಒಡಿಯಾ ಕುಳ್ಳಿರಲಾವು ಕುಳ್ಳುವೇವಯ್ಯಾ। ಒಡಿಯಾ ಓಡಲಾವು ಒಡನೆ ಓಡುವೇವಯ್ಯಾ। ಒಡಯಾ ಥಕ್ಕನೆ ನಿಲ್ಲಲಾವು ನಿಲ್ಲುವೇವಯ್ಯಾ। ಒಡಿಯಾ ವಾಸನೆ ಕೊಳಲಾವು ವಾಸನೆ ಕೊಂಬೇವಯ್ಯಾ। ಒಡಿಯಾ ಕರವನೀಡಲಾವು ನೀಡುವೇವಯ್ಯಾ। ಒಡಿಯಾ ತಿರುಗಲಾವು ತಿರುಗುವೇವಯ್ಯಾ। ಒಡಿಯಾ ತಲೆದೂಗಲಾವು ತೂಗುವೇವಯ್ಯಾ। ಒಡಿಯಾ ತುತ್ತುಗೊಳ್ಳಲು ಕೊಂಬೆವಯ್ಯಾ। ಒಡಿಯಾ ಮೆಲ್ಲಲಾವು ಮೆಲುವೇವಯ್ಯಾ। ಒಡಿಯಾ ಒಂದಡಿ ಇಡಲಾವು ಇಡುವೇವಯ್ಯಾ। ಒಡಿಯಾ ಮುಟ್ಟಲಾವು ಮುಟ್ಟುವೇವಯ್ಯಾ। ಒಡಿಯಾ ಬಿಡಲಾವು ಬಿಡುವೇವಯ್ಯಾ। ಒಡಿಯಾ ನಮ್ಮೊಳಗುಂಟು ಆವುವೊಡಿಯಾನೊಳಗೆ। ಒಡಿಯಾ ನಮ್ಮಾಧೀನ ಆವುವೊಡಿಯನಾಧೀನ। ಒಡಿಯಾ ಸಿರಿ ಅರಸ ವಿಜಯ ವಿಠ್ಠಲರೇಯ। ಒಡಿಯಾ ಬಾಯಿತೆರಿಯಲಾವು ಬಾಯಿತೆರುವೇವಯ್ಯಾ ॥೧॥

## ಮಟ್ಟತಾಳ

ಒಡಿಯಾ ಪೈಣವವಾಗೆ ಆವು ಮಾಡುದಿದೇ। ಒಡಿಯಾ ಉದಾಸಿಸೇ ಆವು ಮಾಡುವದಿದೇ। ಒಡಿಯಾ ಮನ್ನಣೆ ಮಾಡೆ ಆವು ಮಾಡುವದಿದೇ। ಒಡಿಯಾ ಮಾನವೀಯೇ ಆವು ಮಾಡುವದಿದೇ। ಒಡಿಯಾ ಕರತರಲು ಆವು ಮಾಡುವದಿದೇ। ಒಡೆಯ ಮುಖ ತಿರುಹೆ ಆವು ಮಾಡುವದಿದೇ। ಒಡೆಯ ಸ್ಥಿರವಾಗೆ ಆವು ಮಾಡುವದಿದೇ। ಒಡೆಯ ಪವಳಿಸಾಲು ಆವು ಮಾಡುವದಿದೇ। ಒಡಿಯಾ ಕೊಡಲು ಉಂಟು ಕೊಡದಿದ್ದರೆ ಇಲ್ಲ। ಪೊಡವಿಯೊಳಗೆ ಉಳ್ಳ ಒಡವಿವಾಹನ ವಸ್ತ। ಒಡಿಯಾ ಮಾಡಿದವೆನ್ನಿ ಒಡಿಯಾ ಕಣ್ಣಿನಯವೆ। ಇಡದಿದ್ದರಾವು ಇಡುವ ಸ್ವತಂತ್ರರೆ। ಒಡಿಯಾ ಮತ್ತಾವನೋ ವಿಜಯ ವಿಠ್ಠಲನೆಂಬ। ಒಡಿಯನ ಬಳಿವಿಡಿದು ಪಡಿಯಿರೋ ಸದ್ಗತಿಯಾ ॥೨॥

## ತ್ರಿವಿಡಿತಾಳ

ಒಡಿಯಾ ಭಕ್ತರಿಗಾಗಿ ಬೊಮ್ಮಾಂಡ ಪುಟ್ಟಿಸಿ। ನಡುವೆ ತಾನೆ ಒಂದು ರೂಪದಲ್ಲಿ। ಯಡೆಬಿಡದಲೆ ನಿಂದು ಸರ್ವ ಜೀವಿಗಳನ್ನು। ಜಡ ಒಂದು ತಂದಿತ್ತು ಜನಿಸುವ ಉಪಾಯ। ಒಡನೆ ಕಲ್ಪಿಸಿ ತಾನೆ ಒಳಗಿಪ್ಪ ತೊಲಗದಲೆ। ಕೊಡುವರು ಕೆಲವರು ಕೆಲವರು ಪಿಡಿವರು। ನುಡಿ ಭೇದಗಳಿಂದ ಕುಣಿಸುತಿಪ್ಪ ಮಾಯಾ। ಕಡುಗಾರನೊಬ್ಬನೆ ಎಲ್ಲೆಲ್ಲಿ ಪರಿಪೂರ್ಣಾ। ಬಿಡನು ಭಕ್ತರವಶ ಆಪತ್ತು ಬರಲೀಸಾ। ಹೊಡೆ ಮಗ್ಗಲಿಡಲಾವು ತಾನೆ ಅದೆ ಮಾಡುವ। ಹುಡುಗನಾಗಿ ಗೋಪಳ್ಳಿಯೊಳಗೆ ಎಲ್ಲ। ಪಡೆದ ಗೋಪಿಕೈಯ್ಯ ನುಡಿಸಿ ಬಡಿಸಿಕೊಂಡ। ಕಡುಮೆಚ್ಚು ಈ ದೈವಾ ಕಡೆ ಮೊದಲಿಲ್ಲದೆ। ಕಡಲೊಳಗಿಪ್ಪದು ಒಂದೇ ಕಾಣೊ। ಹಡಗವೊ ಭವಾಬ್ಧಿಗೆ ವಿಜಯವಿಠ್ಠಲರೇಯ। ಒಡಗೂಡಿ ಸರ್ವವು ಬಿಡದೆ ಮಾಡಿಸುವನು ॥೩॥

**ಅಟ್ಟತಾಳ**

ಒಡಿಯನ್ನ ನಿಂದ್ಯೆ ವಡಿಯನಗಾಗನು ಒಡಿಯನ್ನ ಮನಮೆಚ್ಚೆ ಭಕ್ತರಿಗೆ ಬಲು ಮೆಚ್ಚು। ಒಡಿಯಗಾಗದವ ಭಕ್ತರಿಗಾಗದವ ಭಕ್ತಗಾಗದವ। ಒಡಿಯಾಳಿನ ಮಾತು ಒಂದೆ ಮಾತುವೆನ್ನಿ। ಒಡಿಯ ಬಿಟ್ಟಿದ್ದು ನಿಜ ಭಕ್ತ ಬಿಟ್ಟದು ಎನ್ನಿ। ಒಡಿಯ ಸುಜನರಿಗೆ ಕೊಡುವನು ಸುಕೃತ। ತಡಿಯದೆ ದುರುಳರ ಬಡಿಯ ಅಲ್ಲಿದ್ದದು। ತೊಡಕಿದವರ ಗಂಡ ವಿಜಯ ವಿಠ್ಠಲರೇಯ। ಮುಡಿದು ಕುಸುಮ ಬಾಡಗೊಡದಲೆ ಪಾಲಿಪ ॥೪॥

**ಆದಿತಾಳ**

ಇದೆ ತಿಳಿದು ಇದೆ ತಿಳಿದು ಇದರಂತೆ ಪ್ರವರ್ತಿಪ। ಅದೇ ಮಾನವನ್ನ ಜನುಮ ಬದುಕೆ ಬಲು ಸಾರ್ಥಕ। ಪದೋಪದಿಗೆ ಅವನ ಕೂಡ ತ್ರಿದಶರು ತಿರುಗುವರು। ಮದಮತ್ಸರವಳಿದು ಕಾಮದ ಪಾಶೆ ಗೆಲುವನು। ಹದುಳತನದಲ್ಲಿ ಇಹದಲ್ಲಿಪ್ಪ ಅನುದಿನ। ಕ್ಷುಧಿಯಾದಿ ಸಂಕಟವ ಒದೆದು ಕಳವನಯ್ಯಾ। ಇದೆ ಸುಖವೆಂದು ನಂಬಿದನರ ಒಂದುವಾರಾ। ಬದುಕಿದ ಬದಕು ಲೇಸು ಸದಮಲ ಭಕುತಿಯಲ್ಲಿ। ಉದರ ನಯನ ಕರ್ನ ವದನ ನಾಶಿಕ ಕರ। ಪದ ಜಿಹ್ವೆ ಹೃದಯದಲ್ಲಿ ಸದಕೃರ್ತುಕಾರಣವಾ। ಪದೋಪದಿಗೆ ಪ್ರೇರಿಸಿ ಮದನ ಪಿತ ಒಳಗೆ ನಿಂದು। ಇದೆ ಮಾಳ್ಪನೆಂದು ನುಡಿದು ಹಿಗ್ಗಿ ಭಕುತಿ ಎಂಬ। ಉದಧಿಯೊಳಗೆ ಮುಳುಗಿ ನಲಿದು ಹಾರೈಸಲು ಮಹ। ಪದವಿಗೆ ಯೋಗ್ಯನೆಂದು ಮುದದಿಂದ ನಲಿದು ವೇದಗಳು। ವದರಿ ಪೇಳುತಲಿವಕೊ ಚದುರ ಮನದಲಿ ಆ। ರಿಂದನು ಸಂಪಾದಿಸಲು ಅದೆ ಜ್ಞಾನಪೂರ್ಣನು ವೆಂ। ಬದು ಸಾವಿರಕ್ಕೆ ಸಿದ್ಧ। ಶುದ್ಧ ಮೂರ್ತಿ ವಿಜಯ ವಿಠ್ಠಲ ಬದಿಯಲ್ಲಿ ನಿಂದು ಕ। ರ್ಮದ ದಾರಿ ತಪ್ಪಿಸುವ ಉದಯಾಸ್ತಮಾನ ಬಿಡದೆ ॥೫॥

**ಜತೆ**

ಆ ಎಂಬುದು ಮೊದಲು ಹರಿನುಡಿಸಿದನೆಂದು ।
ಕಾಯದೊಳುತಿಳಿಯೊ ವಿಜಯ ವಿಠ್ಠಲ ಸುಳಿವಾ ॥೬॥

❖ ❖ ❖

## ಸುಳಾದಿ-೧೫

**(ಶ್ರೀಹರಿ ಸ್ವತಂತ್ರ ಪ್ರಮೇಯ ಸ್ತೋತ್ರ)**

ಸಕಲ ವಸ್ತುಗಳು ಹರಿಯಾಧೀನವಾಗಿರಲು ಎನ್ನದೆಂಬೋದು
ಪಾರತಂತ್ರನಾದ ಜೀವನಿಗೆಲ್ಲಿ?

### ರಾಗ-ಸೌರಾಷ್ಟ್ರ ಧ್ರುವತಾಳ

ನಿನ್ನಾಧೀನ ದೇಹ ಪ್ರಾಣೇಂದ್ರಿಯ ಕರ್ಮಾಚರಣೆ। ನಿನ್ನಾಧೀನ ಜ್ಞಾನ ಇಚ್ಛೆ ಪ್ರಯತ್ನ ಪರಿಪರಿ। ನಿನ್ನಾಧೀನ ಬುದ್ಧಿ ಮತಿ ಧೈರ್ಯ ಕೀರ್ತಿ ಶಕ್ತಿ। ನಿನ್ನಾಧೀನ ಜಪ ತಪೋದಾನ ಧ್ಯಾನನಿದಾನಾ। ನಿನ್ನಾಧೀನ ಅಭಯ ವಿರೋಗ ಯೋಗ ಭೋಗ। ನಿನ್ನಾಧೀನ ಉಕುತಿ ಯುಕುತಿ ಭಕುತಿ ಮುಕ್ತಿ। ನಿನ್ನಾಧೀನ ವೈರಾಗ್ಯಭಾಗ್ಯ ವಸನ ಭೂಷಣ। ನಿನ್ನಾದೀನ ದೇಶ ಕೋಶ ಓದು ಮಾಧುರ್ಯ। ನಿನ್ನಾಧೀನ ಬಾಲ್ಯ ಯೌವನ ವಾರ್ಧಿಕ್ಯ। ನಿನ್ನಾಧೀನ ಇಷ್ಟಾ ನಿಷ್ಟ ಪಾಪ ಪುಣ್ಯ। ನಿನ್ನಾಧೀನ ಪ್ರಕೃತಿ ಕಾಲ ವೇದ ಜೀವರು। ನಿನ್ನಾಧೀನ ಅಮಿಶ್ರ ಮಿಶ್ರಾತತ್ವ ತತ್ವದಾರ್ಥ। ನಿನ್ನಾಧೀನ ಕಾರ್ಯ ಕಾರಣ ಕಾರ್ಯ ಸಂಗತಿ। ನಿನ್ನಾಧೀನ ನಾನಾ ವ್ಯಾಪಾರ ವ್ಯಕ್ತಾವ್ಯಕ್ತ। ನಿನ್ನಾಧೀನ ಯಾವತ್ತು ಬೊಮ್ಮಾಂಡ। ಅನಂತಾನಂತ ಕಲ್ಪಕಲ್ಪಾ ನಿನ್ನಾಧೀನ। ನಿನ್ನಾಧೀನ ನಿನ್ನಾಧೀನ ನಿನ್ನಾಧೀನ ಒಂದೊಂದೆ ಎರಡೆ। ಏನೆಂತ ಪೇಳಲಿ ಎನ್ನೊಶವಲ್ಲ ಎಲೊ ದೇವರದೇವ। ಪನ್ನಗಶಯನ ವಿಜಯ ವಿಠ್ಠಲ। ಬಣ್ಣಿಸಲಾರೆನು ಭಕುತವತ್ಸಲ ॥೧॥

### ಮಟ್ಟತಾಳ

ಜನುಮಜನುಮಂಗಳು ನಿನ್ನಾಧೀನ। ಹೊಣೆಯಾಗಿದ್ದ ಹಗಲಿರುಳು ನೀನೆ। ಅನುಭವಕೆ ತಂದಿತ್ತದ್ದು ಇತ್ತದೊ। ಮನೋಜಯವಾಗಲಿ ಅನ್ಯವಾಗಲಿ। ತೃಣಯೋನಿ ಬಂದರು ತೊಲಗಬಲ್ಲದು ಏನೊ ಘನ ಮೂರುತಿ ನಮ್ಮ ವಿಜಯ ವಿಠ್ಠಲರೇಯ। ನಿನಗಿದು ಸರ್ವದ ಲೀಲೆ ಲೋಕದಲಿ ॥೨॥

### ತ್ರಿವಿಡಿತಾಳ

ಎಲ್ಲ ನಿನ್ನಾಧೀನವಾಗಿವೆ ಅನ್ಯಥ। ಇಲ್ಲವಲ್ಲವಯ್ಯಾ ಇದರೊಳಗೊಂದು। ಬಲ್ಲವನಾರಯ್ಯಾ ವ್ಯವಧಾನ ಕಾಲಗಳು। ಎಲ್ಲೆಲ್ಲಿಪೋಗಿ ತಿರುಗುವ ಸಂಭ್ರಮ ಸಲ್ಲುವದೇನೊ ಸ್ವಾತಂತ್ರ ಒಬ್ಬರಿಗಾದರು। ಕಲ್ಲು ಕವಣಿ ನಿನ್ನಾಧೀನ ಕಾಣೋ। ತಲ್ಲಣಿಸುತಲಿದೆ ನಿನ್ನ ಭೀತಿಗೆ ಪ್ರತಿ। ಸೊಲ್ಲುನಾಡುವರುಂಟೆ ಸುರರಾದ್ಯರು। ವಲ್ಲೆನೆಂದರೆ ಪಾರ್ಥನ ರಣರಂಗದಲಿ। ನಿಲ್ಲಿಸಿ ವ್ಯಾಪಾರ ಮಾಡಿಸಿದೆ। ಹುಲ್ಲು ಮಾನವರ ಪಾಡೇನು ನಿನ್ನ ಇಚ್ಛೆ। ಯಲ್ಲದೆ ಮತ್ತೊಂದು ಕಾರಣ ಉಂಟೆ। ಅಲ್ಲಿ ಇಲ್ಲಿ ಇಪ್ಪೆನೆಂಬೊ ಸಂಶಯವ್ಯಾಕೆ। ಎಲ್ಲಿ ಪೊಂದಿಸಲಲ್ಲಿ ಇರಬೇಕು। ಬಲ್ಲಿದ ಬಲವಂತ ವಿಜಯ ವಿಠ್ಠಲ ಲಕುಮಿ। ನಲ್ಲ ನಾರಾಯಣ ನಾನಾವತಾರನೆ ॥೩॥

### ಅಟ್ಟತಾಳ

ಇಂತು ಇಂತು ನಿನ್ನಾದೀನವಾಗೆ। ಎಂತು ಎಂತು ಎನ್ನಾಧೀನವು। ಮುಂತೆ ತಿಳಿಯದು ಮಾಡುವಾಲೋಚನೆ। ಭ್ರಾಂತಿ ಜೀವನ ಸಮರ್ಥನೆ। ಸಂತತ ನಿನ್ನಾಧೀನವಾಗಿರೆ। ಮಂತ್ರಜ್ಞ ಮನುಜಗೆ ಮೃಗ ಮರುಳಾದಂತೆ। ತಂತುಗಾರ ನಿನ್ನ ತ್ರಾಣ ಇನ್ನಾವದೊ। ಅಂತರಂಗದಲ್ಲಿ ಆಡುವನೆ। ಸಂತೋಷ ಮೂರುತಿ ವಿಜಯ ವಿಠ್ಠಲ ದೈ। ತ್ಯಾಂತಕ ಭಕುತಬಂಧು ಆನಂದ ॥೪॥

### ಆದಿತಾಳ

ಮಡದಿ ಮಕ್ಕಳು ನಿನ್ನಾಧೀನ। ಒಡವೆ ವಸ್ತಾ ನಿನ್ನಾಧೀನ। ಪಡಿಬಾನವು ನಿನ್ನಾಧೀನ। ಒಡೆತನವು ನಿನ್ನಾಧೀನ। ಬಡತನ ಭಾಗ್ಯ ನಿನ್ನಾಧೀನಾ। ಬಡಿವಾರ ಸೌಖ್ಯ ನಿನ್ನಾಧೀನ। ಕೊಡುವೊದು ಕೊಂಬುವದು ನಿನ್ನಾಧೀನ। ನಡತಿ ನುಡತಿ ನಿನ್ನಾಧೀನ। ಪಿಡಿವದು ಬಿಡುವದು ನಿನ್ನಾಧೀನ। ಉಡುವದು ಹೊದುವದು ನಿನ್ನಾಧೀನ। ಕೆಡುವದು ಉಳಿವದು ನಿನ್ನಾಧೀನ। ಒಡಲಾತೃಪ್ತಿ ನಿನ್ನಾಧೀನ। ಅಡಿ ಇಡುವದು ನಿನ್ನಾಧೀನ। ಕಡಿಗೆ ನಾನೇ ನಿನ್ನಾಧೀನ। ಪೊಡವಿಪತಿ ಸಿರಿ ವಿಜಯ ವಿಠ್ಠಲ। ಒಡನೊಡನೆ ಎನ್ನನು ಪಾಲಿಪನೆ ॥೫॥

### ಜತೆ

ನಿನ್ನಾಧೀನವಾಗಿ ಸಕಲ ವಸ್ತಗಳಿರೆ ।
ಎನ್ನದೆಂಬೋದೇನೊ ವಿಜಯ ವಿಠ್ಠಲ ಸ್ವಾಮಿ ॥೬॥



## ಸುಳಾದಿ-೧೬

**(ಶ್ರೀ ಹರಿ ಸ್ವತಂತ್ರ ಪ್ರಮೇಯ ಜೀವ ಅಸ್ವತಂತ್ರ)**

ದೇವರು ಸರ್ವ ಸ್ವಾತಂತ್ರನಾದರೂ ಜೀವನ್ನಿಷ್ಟ ಧರ್ಮಗಳು ಸ್ವರೂಪ ಭೂತವಾದವು. ಇವುಗಳ ಪ್ರೇರಕನೆಂಬುದು ತಿಳಿಯುವದೇ ಜೀವನಿಗಿತ್ತ ದತ್ತಸ್ವಾತಂತ್ರವೆಂಬೋದು ಹರಿಯಾಧೀನ ಇತ್ಯಾದಿ ಪ್ರಮೇಯ.

### ರಾಗ-ಸಾರಂಗ ಧ್ರುವತಾಳ

ನಾನಲ್ಲ ನಾನಲ್ಲ ನಾನಾಕ್ರಿಯಾ ಕರ್ಮಂಗಳು। ಅನಾದಿಯಿಂದ ಎನಗೆ ಕರ್ಮದಾಧರ ಮಾಡಿ। ಹಾನಿ ವೃದ್ಧಿಗಳೆಲ್ಲ ಕಲ್ಪಿಸಿ ಕಂಗೆಡಿಸಿ।

ಯೋನಿ ಯೋನಿಗಳಲ್ಲಿ ಜನಿತಾನೆನಿಸಿ। ನೀನೆ ಈ ದೇಹದೊಳಗೆ ವ್ಯಾಪ್ತಬಲ್ಲವನಾಗಿ। ನಾನೆಂಬೋದು ನುಡಿಸಿ ತಿಳಿಯಗೊಡದೆ। ನಾನಾ ನರಕದಲ್ಲಿ ಹಾಕಿ ನೀನೊಡನಿದ್ದು। ಬೇನೆ ಬಡಿಸಿದ ಬಲು ವಿನೋದ। ತ್ರಾಣವಂತನೆಂದರೆ ನೀನಲ್ಲದಿಲ್ಲಾ ಗೀ। ವಾರ್ಣಾದ್ಯರ ಮಧ್ಯದಲ್ಲಿ ನೋಡೆ। ಪ್ರಾಣನಾಗಿದ್ದು ಎನ್ನ ದುಃಖಾಸ್ವಪ್ನನ್ನಮಾಡಿ। ಈ ನಿರಂತರ ಇನಿತು ಮಾಡಿಸಿದೆ। ಏನೆಂಬೆನಯ್ಯಾ ನಿನ್ನ ಮಹಾವ್ಯಾಪಾರಕ್ಕೆ। ನಾನಿದೆ ಪೂರ್ವದಲ್ಲಿ ತಿಳಿಯದಾದೆ। ಜ್ಞಾನವಜ್ಞಾನವೆರಡು ನಿನ್ನಾಧೀನವಾಗಿದೆ। ನಾನು ನನ್ನದೆಂಬೊ ಉತ್ತರಗಳು। ಹೀನ ಉತ್ತಮವಾದ ನುಡಿಗಳಾಡುವಾಗ। ಮೌನದಲ್ಲಿ ಇದ್ದಂತಾಗದೇನೊ। ನೀ ನಡಿಸಲು ನಡಿವೆ ನೀನು ನುಡಿಸಲು ನುಡಿವೆ। ಈ ನುಡಿ ಹಿರಿಯರು ಪೇಳಿಪ್ಪರು। ಶ್ರೀನಿವಾಸ ರಂಗ ವಿಜಯ ವಿಠ್ಠಲರೇಯ। ಕಾಣಿಸಿಕೊಳ್ಳದಲೆ ಇನಿತು ಸುತ್ತಿಸ್ಯಾಡಿದೆ ॥೧॥

**ಮಟ್ಟತಾಳ**

ಎನಗೆ ಕರ್ತೃತ್ವವು ಕೊನೆಮಾತುರ ಉಂಟು। **ಅನುದಿನದಲಿ ನಿನ್ನಾಧೀನವೆಂಬೊ ಮಾತು।** ಸನುಮತವೆ ಸರಿ ಸನಕಾದಿಗಳೊಡಿಯ। ಇನಿತಾದರು ನೀನೆ ಎನಗೆ ಪ್ರೇರಿಸದಲೆ। ಅನಬಲ್ಲನೆ ನಾನು ಕನಸಿಲಿ ಮನಸಿಲಿ। ಕನಕರಿಸಿದಾಗ ಅನಿಮಿಷ ದಾನವಗಣದ ಜೀವಿಗಳೊಳು। ಮನೆಮಾಡಿಕೊಂಡಿದ್ದು ಕ್ಷಣಕ್ಷಣಕೆ ಪ್ರೇ। ರಣೆ ಮಾಡಿ ಅವರಿಂದ ಘನ ಪುಣ್ಯಪಾಪ। ವನು ಮಾಡಿಸಿ ಅದನೆ। ಅನುಭವಿಸ ಮಾಯವನೆ ನೇಮಿಸಿ ನಗುವ। ಘನ ಕೃಪಾವನಧಿ ಎಣೆಗಾಣೆನು ನಿನ್ನ। ಮನ ಉತ್ಸಾಹಕೆ ಎಣಿಸಿ ಕಡೆಯ ಮಾಡಿ। ಗುಣವ ಪೇಳುವರಾರು। ಅಣುದೊಳಗತ್ಯಣುವೆ ವಿಜಯ ವಿಠ್ಠಲರೇಯ। ಘನ ಘನ ಮಹಾಘನಕೆ ಘನವಾದ ದೈವಾ ॥೨॥

**ತ್ರಿವಿಡಿತಾಳ**

ಹಲವು ಜನರು ಕೇಳಿ ಹರಿಯ ಪೂರ್ಣ ಶಕ್ತಿ। ಬಲುಪರಿ ಪೊಗಳಲು ಸವೆ(ವಿ) ಯಾದವಯ್ಯಾ। ಒಳಗೆ ಹೊರಗೆ ತಾನೆ

ಸರ್ವವ್ಯಾಪುತನಾಗಿ। ಕಲಕಾಲ ನಡಿಸುವ ತೊಲಗದಲೇ। ಹುಲ್ಲು ಜೀವಿಗಳ ಶಕ್ತಿ ಎಣಿಸಿದರಲ್ಲೇನೊ। ಫಲವಿಲ್ಲವು ಕಾಣೊ ಕಂಡ ಮಾತು। ತಿಳಿ ಆದಿ ಸೃಷ್ಟಿಲಿ ತಾತ್ವಿಕರು ಕೂಡಿ। ನೆಲೆಗಾಣದಲೆ ಪೋದರ್ಯಾಕೊ ಪೇಳೂ। ಬಲವಂತರಾದರೆ ಒಬ್ಬರ ಮೊರೆ ಬಿದ್ದು। ಸಲಹೆಂದು ನಮಿಸಿ ಕೊಂಡಾಡಲ್ಯಾಕೆ। ಜಲಜನಾಭನು ತನ್ನ ಕೃಪೆಯಿಂದ ಜೀವಿಗಳ। ಉಳಹಿಕೊಂಡಿಪ್ಪನು ಮಹಿಮೆ ತೋರಿ। ಮಲತು ಎದಿರುನಿಂತ ಶಕ್ತಮಹರುದ್ರನ್ನ। ಶಿಲಿಯಂದದಿ ಮಾಡಿ ನಿಶ್ಚೇಷ್ಟದಿ। ನಿಲಿಸಿದನು ನೋಡು ಮಹಾ ಪ್ರಬಲವಂತ। ಹಳಿದುಬಿಡುವನೇನು ವಾಳ್ಪವಾಟ। ಜಲನಿಧಿಶಯನನ್ನು ಮುಳಿದು ನಗೆಯಿಂದ। ಕೊಲ್ಲುವೆನೆಂದರೆ ಅಲ್ಲಿ ಲೇಶಮಾತ್ರಾ ಉಳಿದು ಮತ್ತೆನಿತು ಯೋಚಿಸಿ ನೋಡಿದರು। ವೊಲಿದು ಕೇಳಿ ಜನರು ಹರಿಯ ಲೀಲೆ। ಸುಲಭ ಜಗತ್ಪಾಲಾ ಉದಾಸೀನ ಮಾಡಿ। ನೆಲೆಗೊಳಿಸಿ ಇಪ್ಪ ಎಂದೆಂದಿಗು। ನೆಲದ ಮೇಲೆ ಶಿಶುವು ಬೀಳುವಾಗಲದಕೆ। ತಿಳಿದು ನೋಡಿದರೆಷ್ಟು ಸ್ವಾತಂತ್ರವೊ। ನೆಲೆಯಾಗಿಪ್ಪದು ಅಷ್ಟನಾದರು ಕೇ। ವಲ ಹರಿಯಾಧೀನವೆನ್ನಿ ಬಿಡದೆ। ಗಲಭೆಯೊಳಗೆ ವಾಸ ವಿಜಯ ವಿಠ್ಠಲರೇಯ। ಉಳಹಲು ಉಳಿವೇವು ಸತ್ಯಸಂಕಲ್ಪನು ॥೩॥

**ಅಟ್ಟತಾಳ**

ಸುಜನರ ಕೈಯಿಂದ ಪಾಪವಮಾಡಿಸಿ। ನಿಜ ಬುದ್ಧಿಯನು ಕೊಟ್ಟು ಸದ್ಗತಿ ಪಾಲಿಪ। ಕುಜನರ ಕೈಯಿಂದ ಸತ್ಕರ್ಮಮಾಡಿಸಿ। ಭಜನೆಗೆಡಿಸಿ ಐದುಸುವ ಪಾಪದಮಾರ್ಗ। ಸುಜನಕ್ಕೆ ಕುಜನಕ್ಕೆ ದೃಷ್ಟಾಂತರ ಉಂಟು। ತ್ರಿಜಗದೊಳಗಿದು ಸಿದ್ಧಾಂತವೊ। ಅಜಮಿಳ ನೋಡು ಕೆಟ್ಟು ಹೋಗಿದ್ದರು। ರಜದೂರನಮಾಡಿ ಹರಿ ಕಾಯಿದ। ಕುಜನ ಬುದ್ಧರು ಸನ್ಮಾರ್ಗದಲ್ಲಿರೆ ದ। ಸುಜರಿಪು ಬೌದ್ಧನಾಗಿ ಕೆಡಿಸಿದ। ಗಜವರದ ಇಂತ್ಯಾಕೆ ಮಾಡಿದನೆನೆ। ಅಜಪಿತನ ಇಚ್ಛೆ ಅಂಥಾದೆ ಅಂಥಾದೆ। ಅಜರಾ ವೈಚಿತ್ರಕಾಲೋಕಾ ವೈಲಕ್ಷಣ। ವಿಜಯ ವಿಠ್ಠಲರೇಯಾ ನಿಜ ಇಚ್ಛೆ। ನಿಜ ಕ್ರಿಡೆ ನಿಜಜ್ಞಾನಾನಂದಾ ॥೪॥

ಎರಡು ಸಂಬಂಧವಾಗಲು ಬಾಹದೊ। ಪರಿಪರಿ ಕರ್ವ್ಮವು
ಬಂದಾನುಭವಿಸುವ। ಚರಿಯಾ ನೋಡಿದರೆ ನಿದಾನೆ ಕಾಣೆ। ಹರಿಯೆ
ಪ್ರಕೃತಿಯಿಂದ ನಾನಾವಿಪರೀತ। ತಿರಗಿ ತಿರಗಿ ಜನನಾದಿ ಕೊಡುತಿಪ್ಪದು।
ಹಿರಿದಾಗಿ ನಾನೆಂದು ಸ್ವಾತಂತ್ರದಲಿ ನುಡಿಯೆ। ಕರ ಕರೆಭವದೊಳು
ಹೊರಳಿದೆನೊ। ಪರಮಾತ್ಮ ನಿನ್ನ ಬಲುಮಾಯಾವೆಂಬೂ ಪ್ರಕಾಶ। ಹೊರಗೆ
ಒಳಗೆ ವ್ಯಾಪಿಸಿಕೊಂಡಿರೆ। ಅರಿಯದೆ ಪೋದೆನೊ ಮೋಸದಿಂದಲಿ ಬಪ್ಪ।
ದುರಿತವೆನ್ನದು ಎಂದು ಪತಿಕರಿಸೀ। ಪರಮ ಗತಿಗೆ ಮಹಾದೂರಾಗಿದ್ದೆನೊ
ತತ್ವ ಕುರುಹ ತಿಳಿಯದೆ ಮಂದನಾಗಿ ಇವೆ। ನಿರಿಕ್ಷಿಸಿದರೆ ದೋಷ ಎಂದಿಗೆ
ನನಗಿಲ್ಲ। ಕರುಣಾಕರ ನಿನ್ನ ಭಕ್ತಗಿಲ್ಲ। ತರಣಿ ಪ್ರಕಾಶ ಮರದ ಮೇಲೆ
ಬಿದ್ದಂತೆ। ನಿರುತ ಎನ್ನ ಮೇಲೆ ಬಿದ್ದಿಹದೊ। ಪರಿಪೂರ್ಣ ಮೂರುತಿ
ವಿಜಯ ವಿಠ್ಠಲರೇಯ। ಕರುಣಾಶರಧಿ ನಿನಗೆ ಭೇದವಿಲ್ಲ ॥೩॥

**ಅಟ್ಟತಾಳ**

ಪತಿವ್ರತಿ ಗುಣನಾರಿ। ಸತತ ಗಂಡನ ಕೂಡ। ರತಿ ಕೇಳಿಯಲ್ಲಿ ವಿ।
ಹಿತ ಸುಖ ಬಡುತಲಿ। ಕ್ಷಿತಿಯೊಳಗೆ ಬಾಳುತ। ಪ್ರತಿ ಇಲ್ಲದ ಸ। ದ್ಗತಿಗೆ
ಸಾಧನಳಾಗಿ। ಜಿತಕಾಮಳೆನಿಪಳು। ಅತಿಶಯವಾಗಿ ಹಿ। ಗ್ಗುತ ಯೌವನದಲ್ಲಿ।
ಮಿತಿಯಿಲ್ಲದ ಕೀರೂತಿ। ಪೊತ್ತು ಧರೆಯೊಳು। ಚ್ಯುತದೂರ ನಿನ್ನಂಘ್ರಿ।
ಶತಪತ್ರದಲಿ ಭ। ಕುತಿ ಮಾಡುವ ಮಂದ। ಮತಿ ಮಾನವ ಉ। ನ್ನತ
ವಿಷಯಂಗಳು। ಗತಿ ತಪ್ಪದೆ ಭುಂಜಿ। ಸುತಲಿದ್ದರು ನಿತ್ಯಾ। ಜಿತವಂತನು
ಕಾಣೊ। ಶ್ರುತಿ ಶಾಸ್ತ್ರ ಸಮ್ಮತ। ಸತಿಪತಿಯ ಕೂಡಾ। ಡುತ ಕಾಲ ಕಳೆದರೆ।
ನುತಿಸುವರು ಬುಧ। ತತಿ ತಲೆದೂಗುತ್ತ। ಪತಿತಪಾವನರಂಗ ವಿಜಯ
ವಿಠ್ಠಲರೇಯ। ಕೃತಕೃತ್ಯ ನಿನ್ನ ಬಿಡದಿಪ್ಪ ಮಾನವ ॥೪॥

**ಆದಿತಾಳ**

ನಾಮವೇ ಕಾಯ್ವದು, ನಾಮವೆ ಉಣಿಪದು। ನಾಮವೇ ಸರ್ವತ್ರ
ಪವಿತ್ರ ಮಾಡುವದು। ನಾಮವೇ ಘನದುರಿತ ಸಂಹಾರ ಮಾಡುವದು।

**ಆದಿತಾಳ**

ತನಗೆ ತಾನೆ ತರ್ಕೈಸಿ ಸುಜನಕೆ ಸುಖವನೀವ। ತನಗೆ ತಾನೆ ತರ್ಕೈಸಿ ಖಳರಿಗೆ ಕ್ಲೇಶ ಕೊಡುವ। ಅನಿಮೀಷರಿಗೆ ಪ್ರಿಯ ದೈತ್ಯರಿಗಪ್ರಿಯ। ಅನುದಿನ ಅವರವರ ಜನನಮರಣ ಪರಿಯಂತ। ಇನ ವಂಶಜ ರಾಮಾ ಭೃಗವಂಶಜ ರಾಮಾ। ನೆನಿಸಿಕೊಂಡು ಕಾದಿ ಖಳರ ಸಂಹರಿಸಿದ। ಸನುರುಚಿಯಾದ ಜನರ ಇದರಂತೆ ಪಾಲಿಸುವ। ಅನುಮೈಸುವದು ಹರಿಯ ಪದ ಭಕುತಿ ಬಲ್ಲವರಾರು। ಎನಗಾವ ಸ್ವಾತಂತ್ರ ಇದ್ದರಾದರು ಪ್ರಯೋ। ಜನಕೆ ಬಾರದಿರೆ ಇದ್ದನು ಇಲ್ಲ ಕಾಣೊ। ವನಜನಾಭನೆ ನೀನೆ ಸ್ವಾತಂತ್ರ ತೆಗೆದು ಕೊ। ಟ್ಟನಾ ಎಂದು ವೇದದಲಿ ಸಾರಿ ಪೇಳುತಿದೆ। ಎನಗೆ ಮೊದಲಿದ್ದಿಲ್ಲವೆ ಇತ್ತದರಿಂದಲಿ। ನಿನಗೆ ಕಡಿಮೆ ಎಂದು ಯೋಚನೆ ಪುಟ್ಟುತಿದೆ। ದಿನದಿನದಲಿ ಕರ್ಮಾಚರಣೆಯ ಮಾಡಿಸಿ। ಉಣಿಸುವ ಬಗೆ ಮತ್ತಾವದು ತಿಳಿಯದು। ಗುಣನಿಧಿ ಧೀರಮೂರ್ತಿ ವಿಜಯ ವಿಠ್ಠಲರೇಯ। ಮಣಿದು ನಮೊನಮೊ ಎಂಬೆ ಆನಂದ ಉಂಬೆ ॥೫॥

**ಜತೆ**

ನೀನಿತ್ತ ಸ್ವಾತಂತ್ರವೊಲ್ಲೆನೆಂದರೆ ಬಿಡದು ।
ನಾನೆ ನಿನ್ನವನಯ್ಯಾ ವಿಜಯ ವಿಠ್ಠಲ ಕರುಣಿ ॥೬॥



## ಸುಳಾದಿ-೧೭

**(ಶ್ರೀ ಹರಿ ಸ್ವತಂತ್ರ ಪ್ರಮೇಯ ಸಾಧನ)**

ಹರಿ ಸ್ವತಂತ್ರನೆಂದು ತಿಳಿದು ನಡೆದವನಿಗೆ ದೋಷಾದೋಷಗಳು, ಪುಣ್ಯ ಪಾಪಗಳುವೆತ್ತಣದೋ? ಇಲ್ಲೇ ಇಲ್ಲ. ಶ್ರೀ ಹರಿ ದೋಷಭಂಜಕನು.

## ರಾಗ-ಭೈರವಿ ಧ್ರುವತಾಳ

ಅಭಯ ಕೊಡುವದಿಂದು ದೀನ ಮಾನವ ಬಂದು। ಪ್ರಭುವೆ ಪ್ರಸನ್ನಮೂರ್ತಿ ನಿನ್ನ ಕೀರ್ತಿ। ಪ್ರಭೆಯ ನಾನಾಬಗೆಯಿಂದ ಕೊಂಡಾಡುತ್ತ। ವಿಭುದಾದಿ ಗಣವೆಲ್ಲ ತಲೆದೂಗುತ್ತ। ರಭಸಮೀಗೆ ಪೇಳಿಹರಹಿದ ಮಹಿಮೆಯಾ। ನಭ ಭೂಮಿ ಪಾತಾಳ ತುಂಬಿತಿದಕೊ। ಶುಭವಾವದಯ್ಯಾ ನಿನ್ನ ನಾಮದಿಂದಧಿಕ ಸು। ಲಭ ವಿದ್ಯಾ ಕಾಣೆನೊ ವಿಚಾರಿಸೆ। ತ್ರಿಭುವನದೊಳು ನಿನ್ನ ಪಾದ ಪೊಂದಿದವ ವೃ। ಷಭನೆನಿಸಿಕೊಂಬವ ಪ್ರತಿಕಾಲಕ್ಕೂ। ಗಭೀರ ಸಂಸಾರದಿಂದ ಪಾರಾಗುವದಕ್ಕೆ ನಾ। ನಭಿ ವಂದಿಸುವೆನಯ್ಯಾ ಮತ್ತಾರ ಪೂಜೆ ಕಾಣೆ। ಇಭರಾಜ ಮೊರೆ ಇಟ್ಟು ಕಡೆ ಬಿದ್ದದ್ದೇ ಸಾಕ್ಷಿ। ಅಭಿಮೊಗವಾಗಿಪ್ಪ ಚೆಲುವ ಕೇಳೋ। ವಿಭುವೆವ್ಯಾಪ್ತ ಪ್ರಸನ್ನಮೂರ್ತಿ ವಿಜಯ ವಿಠ್ಠಲರೇಯಾ। ಅಭಿಗಾರದಿಂದಲ್ಲಿ ಶುದ್ಧ ಸರ್ವ ಪದಾರ್ಥ ॥೧॥

## ಮಟ್ಟತಾಳ

ಸುಜನರವೊಳಗಿದ್ದು ದ್ವೇಷ ಮಾಡಿಸದಿರು। ರಜಗುಣದವರಲ್ಲಿ ಧೃಡತರ ಕೊಡದಿರು। ಕುಜನಕೆ ಪ್ರೇರಿಸಿ ಪೂಜೆ ಮಾಡಿಸದಿರು। ತ್ರಿಜಗ ಮಧ್ಯದಿ ನಿನ್ನ ವ್ಯಾಪಾರದವಿನಹಾ। ಅಜ ಭವಾದ್ಯರು ಆ ಎನಲಾಪರೆ। ಭಜಿಸಿ ಬೇಡುವನಯ್ಯಾ ಬಹುಕಾಲವಾಗೆ ನಾನು। ಯಜಮಾನನೆಂಬ ಮಾತು ನುಡಿಸಲಾಗದು ಹರಿಯೆ। ವಿಜಯ ಸಾರಥಿ ನಮ್ಮ ವಿಜಯ ವಿಠ್ಠಲರೇಯ। ದ್ವಿಜಕುಲದಲಿ ಎನ್ನ ಕೂಡಿ ಪುಟ್ಟಿದ ದೈವಾ ॥೨॥

## ತ್ರಿವಿಡಿತಾಳ

ತರಣಿ ಉದ್ಭವನಾಗಿ ಆ ತನ್ನ ಪ್ರಕಾಶ। ಮರದ ಮೇಲೆ ಬೀಳಲದರ ನೆಳಲು ಕಪ್ಪು। ತೆರನಾಗಿ ಕಾಣಲು ಅಲ್ಲಿದ್ದ ದೋಷ ಭಾ। ಸ್ಕರನಿಂದ ಬಂದದ್ದು ಮರನ ತಪ್ಪೊ। ಪರಮ ಪುರುಷ ಪೇಳೊ ಇದರ ವಿಚಾರವ।

ಎರಡು ಸಂಬಂಧವಾಗಲು ಬಾಹದೊ। ಪರಿಪರಿ ಕರ್ಮವು ಬಂದಾನುಭವಿಸುವ। ಚರಿಯಾ ನೋಡಿದರೆ ನಿದಾನೆ ಕಾಣೆ। ಹರಿಯೆ ಪ್ರಕೃತಿಯಿಂದ ನಾನಾವಿಪರೀತ। ತಿರಗಿ ತಿರಗಿ ಜನನಾದಿ ಕೊಡುತಿಪ್ಪದು। ಹಿರಿದಾಗಿ ನಾನೆಂದು ಸ್ವಾತಂತ್ರದಲಿ ನುಡಿಯೆ। ಕರ ಕರೆಭವದೊಳು ಹೊರಳಿದೆನೊ। ಪರಮಾತ್ಮ ನಿನ್ನ ಬಲುಮಾಯಾವೆಂಬೂ ಪ್ರಕಾಶ। ಹೊರಗೆ ಒಳಗೆ ವ್ಯಾಪಿಸಿಕೊಂಡಿರೆ। ಅರಿಯದೆ ಪೋದೆನೊ ಮೋಸದಿಂದಲಿ ಬಪ್ಪ। ದುರಿತವೆನ್ನದು ಎಂದು ಪತಿಕರಿಸೀ। ಪರಮ ಗತಿಗೆ ಮಹಾದೂರಾಗಿದ್ದೆನೊ ತತ್ವ ಕುರುಹ ತಿಳಿಯದೆ ಮಂದನಾಗಿ ಇವೆ। ನಿರಿಕ್ಷಿಸಿದರೆ ದೋಷ ಎಂದಿಗೆ ನನಗಿಲ್ಲ। ಕರುಣಾಕರ ನಿನ್ನ ಭಕ್ತಗಿಲ್ಲ। ತರಣಿ ಪ್ರಕಾಶ ಮರದ ಮೇಲೆ ಬಿದ್ದಂತೆ। ನಿರುತ ಎನ್ನ ಮೇಲೆ ಬಿದ್ದಿಹದೊ। ಪರಿಪೂರ್ಣ ಮೂರುತಿ ವಿಜಯ ವಿಠ್ಠಲರೇಯ। ಕರುಣಾಶರಧಿ ನಿನಗೆ ಭೇದವಿಲ್ಲ ॥೩॥

**ಅಟ್ಟತಾಳ**

ಪತಿವ್ರತಿ ಗುಣನಾರಿ। ಸತತ ಗಂಡನ ಕೂಡ। ರತಿ ಕೇಳಿಯಲ್ಲಿ ವಿ। ಹಿತ ಸುಖ ಬಡುತಲಿ। ಕ್ಷಿತಿಯೊಳಗೆ ಬಾಳುತ। ಪ್ರತಿ ಇಲ್ಲದ ಸ। ದ್ಗತಿಗೆ ಸಾಧನಳಾಗಿ। ಜಿತಕಾಮಳೆನಿಪಳು। ಅತಿಶಯವಾಗಿ ಹಿ। ಗ್ಗುತ ಯೌವನದಲ್ಲಿ। ಮಿತಿಯಿಲ್ಲದ ಕೀರೂತಿ। ಪೊತ್ತು ಧರೆಯೊಳು। ಚ್ಯುತದೂರ ನಿನ್ನಂಘ್ರಿ। ಶತಪತ್ರದಲಿ ಭ। ಕುತಿ ಮಾಡುವ ಮಂದ। ಮತಿ ಮಾನವ ಉ। ನ್ನತ ವಿಷಯಂಗಳು। ಗತಿ ತಪ್ಪದೆ ಭುಂಜಿ। ಸುತಲಿದ್ದರು ನಿತ್ಯಾ। ಜಿತವಂತನು ಕಾಣೊ। ಶ್ರುತಿ ಶಾಸ್ತ್ರ ಸಮ್ಮತ। ಸತಿಪತಿಯ ಕೂಡಾ। ಡುತ ಕಾಲ ಕಳೆದರೆ। ನುತಿಸುವರು ಬುಧ। ತತಿ ತಲೆದೂಗುತ್ತ। ಪತಿತಪಾವನರಂಗ ವಿಜಯ ವಿಠ್ಠಲರೇಯ। ಕೃತಕೃತ್ಯ ನಿನ್ನ ಬಿಡದಿಪ್ಪ ಮಾನವ ॥೪॥

**ಆದಿತಾಳ**

ನಾಮವೇ ಕಾಯ್ವದು, ನಾಮವೆ ಉಣಿಪದು। ನಾಮವೇ ಸರ್ವತ್ರ ಪವಿತ್ರ ಮಾಡುವದು। ನಾಮವೇ ಘನದುರಿತ ಸಂಹಾರ ಮಾಡುವದು।

ನಾಮವೇ ನೆನೆವಂಗೆ ವಜ್ರಾಂಗಿಯಾಗಿಪ್ಪದು। ನಾಮವೇ ಸಕಲ ಭಕ್ತ ಸ್ತೋಮವೇ ಪಾಲಿಸುತ್ತ ನಾಮವೇ ಕಂಡಲ್ಲಿ ನಿಂದಲ್ಲಿ ಮಹಾಭಾಗ್ಯ ನಾಮ ಒಂದು ನುಡಿಯೆ ವಿಜಯ ವಿಠ್ಠಲ ನಿನ್ನ। ಧಾಮವಾಗುವದಯ್ಯಾ ತಡಿಯದೆ ನಮಗೆಲ್ಲ ॥೫॥

**ಜತೆ**

ತಿಳಿದು ನಡದವಗೆ ದೋಷವೆತ್ತಣದೊ ನಿ ।
ಶ್ಚಲ ಮೂರ್ತಿ ವಿಜಯ ವಿಠ್ಠಲ ಸರ್ವ ಸ್ವಾತಂತ್ರ ॥೬॥

❖ ❖ ❖

## ಸುಳಾದಿ-೧೮

**(ಜೀವ ಅಸ್ವತಂತ್ರ ಪ್ರಮೇಯ)**

ಶ್ರೀ ಹರಿಯೆ ಎನ್ನ ಅನಾದಿಕರ್ಮ ನೆವನಮಾಡಿ ಅನೇಕ ಜನ್ಮಗಳಿತ್ತು ಬಹು ಕ್ಲೇಶ ಬಡಿಸುವದು ನಿನಗಿಷ್ಟವೇ? ತಾಯಿ ಮಕ್ಕಳ ಪೊರೆದಂತೆ ಸಲಹುವ ಸ್ವಾಮಿ ಸರ್ವ ಸ್ವತಂತ್ರನು. ನೀನಿತ್ತ ಸ್ವತಂತ್ರ ಎನ್ನದಾದರೂ ಒಂದು ಕೋಟಿ ಜನರಿಗೆ ಶೇರು ಸಕ್ಕರಿ ಹಂಚಿದರೆ ಎಷ್ಟೋ ಅಷ್ಟು ಅತ್ಯಲ್ಪ ಸ್ವಾತಂತ್ರವಾದರೂ ನಿನ್ನಾಧೀನ.

**ರಾಗ-ಮಾರವಿ ಧ್ರುವತಾಳ**

ಅನಾದಿ ಕರ್ಮವೆಂದು ಒಂದು ನೆವನ ಮಾಡಿ। ನೀನು ಎನ್ನನು ಮತಿಯ ಭ್ರಮಣನೆನಿಸಿ। ನಾನಾ ಯೋನಿಗಳಲ್ಲಿ ಪೊಗಿಸಿ ಕ್ಲೇಶ ಬಡಿಸಿ। ಹೀನಾಯಾ ಉಣಿಪದು ಉಚಿತವಲ್ಲೊ। ಗೇಣೂದರ ಮಾಡಿ ಅದರ ಚಿಂತೆಯಿಂದ। ಸ್ನಾನಾ ಜ್ಞಾನಾದಿಗಳು ಕಡಿಮೆ ಎನಿಸಿ। ಹಾನಿ ವೃದ್ಧಿಗೆ ಎನ್ನ ಗುರಿಮಾಡಿ ಬಹು ಕರ್ಮ। ನೀನುಣಿಸುವದೇನೊ ನಿತ್ಯಾನಂದ। ಏನೆಂಬೆ ನಿನ್ನ ಮಾಯತನಕ್ಕೆ ಆಲೋಚಿಸಿ। ವಾಣಿ ಭೂ ಪತ್ರಮಾಡಿ ಮೇರುಶೈಲ।

ತಾನಣಿಕಿಯ ಪಿಡಿದು ಸಪ್ತಸಾಗರವೆಂಬೊ। ನಾನಾಬಣ್ಣದ ಕಪ್ಪಿನಿಂದ ನಿತ್ಯ। ಜ್ಞಾನವಧಿಕಳಾಗಿ ಬಲು ಪರಿಯಿಂದಲ್ಲಿ। ಧೇನಿಸಿ ನಿನ್ನ ಮಹಿಮೆ ಬರಹ ಬರೆದು। ಕಾಣದೆ ಪೋದಳಯ್ಯಾ ದಿನಪ್ರತಿದಿನದಲ್ಲಿ। ನಾನಾವದು ಬಲ್ಲವನು ಮಂದಮತಿಯು। ಅನಂತತಾವಿನಲ್ಲಿ ಬಿದ್ದು ಪುಟ್ಟುವಂತೆ। ನೀನಿದೆ ಕಲ್ಪಿಸಿ ನಾನು ನನ್ನದು ಎಂಬೊ। ಈ ನುಡಿಗಳ ಪಾಶ ಕಟ್ಟಿ ಬಿಗಿದು ಎನ್ನ। ತ್ರಾಣಗೆಡಿಸಿ ಇನಿತು ಮೊಸಗೊಳಿಸುತಿಪ್ಪೆ। ಆನಂದ ನಿನಗಾಗಿ ಇಪ್ಪದಲ್ಲೈ। ಭೂನಾಥ ಬಲದೊಡನೆ ತೆರಳಲಾದೇಶಕ್ಕೆ। ಹೀನವಾದ ರಾತಗೆ ಏನು ಚಿಂತೆ। ಶ್ರೀನಾಥ ನಿನ್ನ ಕ್ರೀಡಿ ನಿನಗಾನಂದವಾಗಿಹದೊ। ಮಾನವರಿಗೆ ನೋಡೆ ಕ್ಲೇಶವಹದೋ। ಜ್ಞಾನಿಗಳರಸ ಶ್ರೀ ವಿಜಯ ವಿಠ್ಠಲರೇಯಾ। ಏನಾದರು ಒಂದು ಅಂದುನೋಳ್ಪೆ ॥೧॥

## ಮಟ್ಟತಾಳ

ನೀನು ಬಾಳುವದಕ್ಕೆ ಕಡೆ ಮೊದಲು ಇಲ್ಲ। ಜ್ಞಾನಪೂರ್ಣೇಶ್ವರ್ಯ ನಿತ್ಯತೃಪ್ತ ವಿಮಲ। ಆನಂದ ಗುಣವನಧಿ ಅಚಿಂತ್ಯ ಘನಶಕ್ತ ಶ್ರೀನಾರಿ ನಿನಗೆ ನಿತ್ಯ ಅವಿಯೋಗಿ। ನಾನಾವರ್ಣದ ಅಪ್ರಾಕೃತನಗರಿ। ಭಾನುಕೋಟಿ ತೇಜಾ ಸತತ ಯೋಗ ನಿದ್ರಾ। ದಾನವರ ಎದೆ ದಲ್ಲಣನೆಂಬೊ ಬಿರಿದು। ವೈನತೇಯ ದೇವಾ ವಾಹನನಾಗಿಹನೊ। ಮಾಣಿಕ ಫಣೆಯುಳ್ಳ ಭುಜಗನ ಹಾಸಿಕೆಯು। ಅನಂತ ಮುಕ್ತರು ವಾಲಗ ಮಾಡುವರು। ದೀನ ಉದ್ಧಾರ ವಿಜಯ ವಿಠ್ಠಲರೇಯ। ನೀ ನಿರ್ದೋಷನೊ ನಾನುಡಿವದೇನೊ ॥೨॥

## ತ್ರಿವಿಡಿತಾಳ

ಭುವನಮಧ್ಯದಿ ಬಿದ್ದು ನೊಂದು ನೆಲಗಾಣದೆ। ಲವ ತೃಟಿ ಸಂತೋಷವನು ಪೊಂದದೆ। ಜವಗುಂದಿ ಎಲ್ಲೆಲ್ಲಿ ಪೊರೆವರಿಲ್ಲದೆ। ಅವನಿಯೊಳಗೆ ಪುಟ್ಟಿ ಕಷ್ಟಬಟ್ಟು। ತವಕದಿಂದಲಿ ನಿನ್ನ ಮೊರೆ ಬಿದ್ದು ಸ್ತುತಿಸೆ ಬಹು। ದಿವಸವಾದರಿಂದ ಮುಂದೋರದೆ। ಭವದೂರ

ನಿನಗಾಡಿದೆನು ಈ ಪರಿಯಲ್ಲಿ। ಭವಣೆ ಬಡಲಾರದೆ ದುಃಖದಲ್ಲಿ। ಅವಿಕಾರ ಮೂರುತಿ ವಿಜಯ ವಿಠ್ಠಲ। ಎನ್ನವಗುಣಗಳು ಎಣಿಸಲು ಕಡೆಬೀಳುವನೇನೊ ॥೩॥

**ಅಟ್ಟತಾಳ**

ಮಗನ ಠಕ್ಕಿಸಿ ತಾಯಿ ಮಲಗಿರಲಾಶಿಶುವು। ಮಗುಳೆ ಕ್ರಮಗೆಟ್ಟು ಕಂಡಲ್ಲಿ ಅರಿಸಿ ಕಂ। ಣಿಗೆ ಬೀಳದಿರೆ ತಾಯಿ ಮಗುವು ದುಃಖಿಸೆ ನೋಡಿ ತಾ। ನಗುತ ವೇಗನೆಬಂದು ತಕ್ಕೈಸಿ ಮುದ್ದಾಡಿ ಬಗೆ। ಬಗೆ ಲಾಲನೆ ಮಾಡಿ ದಿವ್ಯನ್ನವನು ತು। ತ್ತುಗಳ ಬಾಯೊಳಗಿಟ್ಟು ತೃಪ್ತಮಾಡಿ ಮ। ಲಗಿಸಿ ಜೋಗುಳಪಾಡಿ ಮತ್ತೆ ಏಳಲು ಎತ್ತಿ। ಮೊಗವನೀಕ್ಷಿಸಿ ಮೊಲೆಗೊಟ್ಟು ರಕ್ಷಿಸುವಳೊ। ಅಗಣಿತ ಮಹಿಮನೆ ತಾಯಿಯಂದದಿ ಯೆ। ನಗೆ ಇಂದು ತಿಳಿದು ಠಕ್ಕಿಸಿ ಲೀಲೆ ತೋರುವ। ಬಗೆ ಇದೆ ಸಿದ್ಧವಾಗಿದೆ ದೇವ ಎನ್ನನು। ಅಗಡುಗೊಳಿಸದಿರು ಅನಿಮಿತ್ತ ಬಾಂಧವ। ಜಗದೊಳು ತಾಯಿ ಬಾಲಕನಿಗೆ ಭೇದವೆ। ಸುಗುಣ ಸುಂದರ ಕಾಯ ವಿಜಯ ವಿಠ್ಠಲರೇಯ। ಮಿಗೆ ಮನದೊಳಗೆ ವ್ಯಾಪಿಸಿದ ಕಲ್ಮಷಕಳೆಯೊ ॥೪॥

**ಆದಿತಾಳ**

ಸೇರು ಸಕ್ಕರೆ ತಂದು ಕೋಟ್ಯಾನುಕೋಟಿ ಜನಕೆ। ತಾರತಮ್ಯದಿಂದ ಹಂಚಿದೋಪಾದಿಯಲ್ಲಿ। ವಾರವಾರಕೆ ಎನ್ನ ಪುಣ್ಯ ಪಾಪಗಳೆರಡು। ಆರಾರ ಭಾಗಂಗಳು ಅವರಿಗೆ ಕೊಡಲಾಗಿ। ಭಾರ ಎನ್ನ ಪಾಲಿಗೆ ಪ್ರಾಪ್ತವಾಗುವದೆಷ್ಟೊ। ಕಾರಣ ಕಾರ್ಯದಲಿ ಪೊಂದಿಪ್ಪನೆ ಪೇಳೋ। ಈ ರೀತಿ ಉಳ್ಳದ್ದಕ್ಕೆ ಬಲು ಜನ್ಮಂಗಳು ಕೊಟ್ಟು। ಗಾರು ಗೊಳಿಸುವರೆ ಘೋರ ಮಾರ್ಗದೊಳಿಟ್ಟು। ನಾರದ ಮುನಿ ವಂದ್ಯ ವಿಜಯ ವಿಠ್ಠಲ ನಿನ್ನ। ಕಾರುಣ್ಯ ರಸದಿಂದ ನೋಡಿ ಸತತಕಾಯೋ ॥೫॥

**ಜತೆ**

**(ಆರಿಸಿ ನುಡಿದರಿಂದ ನಿನಗಾಗುವ ಕೃತ್ಯಾ)**

ಹರಿ ನುಡಿಸಿದದರಿಂದ ನುಡಿದ ಎನ್ನ ಕೃತ್ಯ । (ಪಾಠಾಂತರ)
ಅರಸೆ ವಿಜಯ ವಿಠ್ಠಲ ವಂದಾದರು ಇಲ್ಲ ॥೬॥

❖ ❖ ❖

## ಸುಳಾದಿ-೧೯

**(ಜೀವ ಅಸ್ವಾತಂತ್ರ ಪ್ರಮೇಯ)**

ಶ್ರೀ ಹರಿಯೆ ನೀ ನಡಿಸಿದಂತೆ ನಾವು ನಡಿವೆವು ಸಕಲವೂ ನೀ ಮಾಡಿಸಿದಂತೆ ಮಾಡುವೆವು. ನೀನು ಸಕಲರಲ್ಲಿ ವ್ಯಾಪ್ತ ಆಣುಮಹದ್ರೂಪನು. ನಿನಗೆ ನೀನು ಅಭೇದನು. ಶ್ರುತಿಹರಿಪರನೆಂದು ಪೇಳಿದೆ. ಜಡಾದಿಗಳಲ್ಲಿಯೂ ನೀನೇ ವ್ಯಾಪ್ತನಾಗಿ ಸಕಲ ಕ್ರಿಯೆ ಮಾಡಿಸುವಿ. ಸಕಲರೂ ನಿನ್ನಾಧೀನ. ನಿನ್ನಿಂದ ಭಿನ್ನಳಾದ ನಿತ್ಯ ಮುಕ್ತಳಾದ ಲಕುಮಿ ನಿನ್ನಾಧೀನ.

**ರಾಗ-ಭೈರವಿ ಧ್ರುವತಾಳ**

ನೀನಡದರಾವು ನಡಿವೇವಯ್ಯಾ। ನೀನುಡಿದರಾವು ನುಡಿವೇವಯ್ಯಾ। ನೀ ಪಿಡಿದರಾವು ಪಿಡಿವೇವಯ್ಯಾ ನೀನು ತಡದರಾವು ತಡಿವೇವಯ್ಯಾ। ನೀನಿರ್ದಯವಾಗೆ ಅಜಭವ ಸುರಾದಿಗಳು। ಕಾಣಿಗೆ ಬಾರದೆ ಪೋಗುವರೊ। ನೀನೆ ಸ್ವಾತಂತ್ರ ಅನಾದಿ ಸ್ವಭಾವ। ನೀನೆ ಸೂತ್ರಾವಮಣಿಗಣಕೆಂಬೋದೆ ಸಿದ್ಧ। ನೀನೆ ಜ್ಞಾನಗಮ್ಯ ವಿಜಯ ವಿಠ್ಠಲರೇಯ। ನೀನಡದರಾವು ನಡಿವೇವಯ್ಯಾ ॥೧॥

### ಮಟ್ಟತಾಳ

ನಿನ್ನೊಳು ನೀನೆ ಎನ್ನೊಳು ನೀನೆ ಅನ್ಯರೊಳು ನೀನೆ। ಅನ್ಯೋನನು ನೀನೆ ಚಿನ್ಮಯನು ನೀನೆ। ತನ್ಮಯನು ನೀನೆ ಘನ್ನ ಮಹಿಮನೆ ವಿಜಯ ವಿಠ್ಠಲನೆ। ಅಣುರೇಣು ನೀನೆ ಪರಮಾಣು ನೀನೆ ॥೨॥

### ರೂಪಕತಾಳ

ಬಂದವನು ನೀನೆ ಭಕ್ತರ ಹೃದಯಾಬ್ಜಾ ಮಂದಿರದೊಳು ವಿಠಲಾ ಮೂರುತಿಯಾಗಿ। ನಿಂದವನು ನೀನೆ ಶೇಷ ಪರ್ವತದಲ್ಲಿ। ಚಂದದಿಂದ ಸುಂದರ ತಿರುವೆಂಗಳನಾಗಿ। ಸಂದರುಶನವ ನಿನಗೆ ನೀನೆ ಮಾಡುತ್ತ। ಕುಂದದಲೆ ತರ್ಕೈಸಿಕೊಂಬೆ। ಒಂದೆ ಮೂಲವೆರಡು ಅವತಾರವೆಂದೆನಿಸಿ ಮಂದಮತಿಗೆ ಆಶ್ಚರ್ಯ ತೋರಿದೆ। ನಂದಿನೆ ವಿಜಯ ವಿಠ್ಠಲ ತಿರುವೆಂಗಳ। ಒಂದಕೊಂದಾನಂತಾನಂತಾ ಒಂದೆ ॥೩॥

### ಝುಂಪಿತಾಳ

ನಿನಗೆ ನೀನೆ ಐಕ್ಯಾ ನಿನಗೆ ನೀನೆ ಭೇದ। ನಿನಗೆ ನೀನೆ ಮಾತು ನಿನಗೆ ನೀನೆ ಸ್ತ್ರೀ। ನಿನಗೆ ನೀನೆ ಪುರುಷಾ। ನಿನಗೆ ನೀನೆ ಕೂಟಾ। ನಿನಗೆ ನೀನೆ ರಮಣಾ। ನಿನಗಲ್ಲದೀಲೀಲೆ ಬಿನಗುದೈವರಿಗುಂಟೆ। ಅನಯ ವಿಜಯವಿಠ್ಠಲ ನಿನಗೆ। ನೀನೆ ಆಳು ನಿನಗೆ ನೀನೆ ಧೊರೆಯೊ ॥೪॥

### ತ್ರಿವಿಡಿತಾಳ

"ನಯೇಸಃಕ್ಕುಂಚಿತ ಕರ್ಮಾನು" ಎಂದೆಂಬೊ ಈ ಅರ್ಥರುತು ಪ್ರ। ಳಯಾದಲ್ಲಿ ಪೇಳುತಲಿದೆ। ಅಯಶರೀರ ವಾಕ್ಯ ಅವ್ಯಾಕೃತವಾಣಿ। ಆಯಬ (ಅಭಭವ=ಬ್ರಹ್ಮ) ಭವಗೆ ತಪತಪನ ಎಂಬೊ ಸಂಗತಿಗೆ। ಈ ಅರ್ಥವನೆ ತಿಳಿದು ಹರಿಪರ ದೈವಾವೆಂದು। ಶ್ರೇಯಸ್ಸುವನು ಬೇಡಿ ಸತತ ಸಜ್ಜನರು। ಪ್ರಿಯ ಕೃತು ವಿಜಯ ವಿಠ್ಠಲ ತಿರುವೆಂಗಳ। ನೀಯಾಡಿಸಿದಂತೆ ನಾಲಿಗಿಂದಾಡುವೆ ॥೫॥

### ಅಟ್ಟತಾಳ

ಜಡ ಕಾಷ್ಟದೊಳಗಿದ್ದು ನಡಿಸುವನು ನೀನೆ। ಕಡಲ ಥೆರೆಯ ರಭಸವ ಗೈಸುವನು ನೀನೆ। ಗಿಡಕೆ ಹಾರುವ ಖಗದಲ್ಲಿ ಕೂಗುವ ನೀನೆ। ಅಡಿವಿಯ ಮೃಗಗಳಲ್ಲಿ ಧ್ವನಿಗೈಸುವ ನೀನೆ। ಗುಡಿ ಗಿರಿಯೊಳು ಪೇಳೆ ಪ್ರತಿ ಶಬ್ದನು ನೀನೆ। ಕಡಿಗೆ ಸರ್ವ ಶಬ್ದ ವಾಚ್ಯಕನು ನೀನೆ। ಬಡಿದು ಬಾಲಗೆ ಹಾಲು ಕುಡಿಸಿದಂತೆ ಎನ್ನ। ತಡಿಯದೆ ಕರತಂದೆ ತವರಮನೆ ಎಂದದಿ। ಕಡುದೈವ ವಿಜಯ ವಿಠ್ಠಲ ನಿನ್ನ ನಂಬಲು। ಬಡವ ಬಹು ಸೌಭಾಗ್ಯವಂತ ನಾಹನಯ್ಯಾ ॥೬॥

### ಆದಿತಾಳ

ಸಿರಿ ಅರಸನೇ ಪರಮೇಷ್ಟಿ ಮಗನೆ। ಗರುಡನು ರಥವೆ ಉರಗ ಮಂಚವೆ ಪುರಹರ ಮೊಮ್ಮಗನೆ। ಸುರರು ಸೇವಕರೆ ಇವರು ನಿನಗೆ ಬೇಕೆ। ಬರಿದೆ ಮಾಯಹಚ್ಚಿ ಮರಳುಮಾಡುತಿಪ್ಪಿ। ಗಿರಿಯ ಮೀಟುವವಗೆ ಹರಳೊಂದಾನೀಕೆ। ಅರಿಯರೆ ನಿನ್ನ ಮಹಿಮೆ ಶಿರಿಯಾದ್ಯರು ಸ್ವಾಮಿ। ನೊರಜು ನರಗುರಿ ನಾನೇನು ಬಲ್ಲೆನೊ। ಧರಾಧರ ವಿಜಯ ವಿಠ್ಠಲ ನೀನೆ ದಯಾಳು। ಕರದವಗಳು ಕಂದಿ ವರಕಲ್ಪ ಕಲ್ಪಕೆ ॥೭॥

### ಜತೆ

ಈಶ ಜೀವರೊಳು ಲಕುಮಿಗೆ ಭೇದಬಲ್ಲಂಥ ।
ದಾಸರೊಳಿಡುವದು ವಿಜಯ ವಿಠ್ಠಲ ಬಂಧು ॥೮॥



# ಸುಳಾದಿ-೨೦

(ಜೀವ ಅಸ್ವಾತಂತ್ರ ಪ್ರಮೇಯ ಸಾಧನ)

ಸ್ವತಂತ್ರನಾದ ಹರಿಯನ್ನು ನಂಬಲು ಕಾಯುವ, ಎತ್ತಿಗೆ ಭತ್ತವು ಎಷ್ಟು ಬೆಳೆಯತೆಂಬ ಚಿಂತೆ ಯಾಕೆ? ಕರ್ತೃತ್ವನಾನೆಂಬ ಅಹಂಕಾರ ಬಿಟ್ಟು ಕೃತ್ಯ ಹರಿಯಾಧೀನ ತಿಳಿದು ಸರ್ವಾಧಿಷ್ಠಾನದಲ್ಲಿ ಹರಿ ಇದ್ದು ಪಾಲಿಪನು. ಸಕಲ ಇಂದ್ರಿಯಾಭಿಮಾನಿ ದೇವತೆಗಳಲ್ಲಿದ್ದು ಕಾರ್ಯಮಾಳ್ಪನು. ಸಕಲವೂ ನಾನೇ ಮಾಡುವೆನೆಂಬ ಮಾನವನು ನಾನಾಯೋನಿಗಳಲ್ಲಿ ಬಳಲುವನು. ಪ್ರಧಾನವಾಗಿ ಭಕ್ತಿಯಿಂದ ಭಜಿಸಲು ಹರಿಯೊಲಿವ.

## ರಾಗ-ಭೈರವಿ ಧ್ರುವತಾಳ

ಚಿಂತೆ ಮಾಡುವದಿಲ್ಲ ಚಿನ್ಮಯ ಮೂರ್ತಿಯ ಪಾದ। ಕ್ರಾಂತನಾಗಿದ್ದ ಮೇಲೆ ಎಲೆ ಮನವೇ। ಎಂತಾಗುವದೆ ಗತಿ ಎನಗೆಂದು ವ್ಯಾಕುಲದಿ। ಸಂತತ ಬಳಲದಿರೊ ಧೃಢವ ತೊರದು। ಚಿಂತಾಮಣಿಯು ಒಲಿದು ಬೆಂಬಿಡದಲೆ ಇದ್ದು। ನಿಂತಲ್ಲಿ ನಿಧಾನ ಗರಿವು ತಿದಕೊ ಭ್ರಾಂತನಾಗಿ ಬರಿದೆ ಕಂಡದ್ದು ಹಂಬಲಿಸಿ। ಅಂತವಿಲ್ಲದ ನರಕಕ್ಕಿಳಿಯದಿರು। ಮಂತ್ರತಂತ್ರಕ್ಕೆ ಶಿಲುಕ ಮಹದಾದಿಗಳ ಒಡಿಯ। ಸಂತರಿಸುವ ನೋಡು ಗೆಳೆಯನಾಗಿ। ಇಂತೀಪರಿ ನಿನಗೆ ಆನಂದ ವೈಭವ। ಮುಂತೆ ಮುಂತಾಗಿ ನಿಂದಿರುವದು ಕೇಳೆಲೊ। ಚಿಂತಿಸಿದಂತೆ ಜನಕೆ ಸಾಧನ ಮಾಡಿಸುವ। ಕಂತುಪಿತ ನಮ್ಮ ವಿಜಯ ವಿಠ್ಠಲರೇಯ। ಶಾಂತ ಮೂರುತಿ ನಂಬಿದವರಿಗೆ ಸುಧಾಹೃದವೊ ॥೧॥

## ಮಟ್ಟತಾಳ

ಎತ್ತಿಗೆ ಭತ್ತದ ಚಿಂತೆಯಾತಕ್ಕೆ। ಕತ್ತೆಗೆ ಬಣವಿಯ ಯೋಚನೆ ಯಾತಕೆ। ತೊತ್ತಿಗೆ ಒಡಿಯನ ಭವಿಷೋತ್ತರವ್ಯಾಕೆ। ಹೊತ್ತುಹೊತ್ತಿಗೆ ಪಾಲು ಕುಡಿವೊ ಬಾಲಕನಿಗೆ। ಸುತ್ತಲಿದ್ದವರ ಧಾವತಿಗೊಡವ್ಯಾಕೆ। ಮತ್ತವಾದ ಗಜಕೆ

ಅರಸು ಪೋಗಿ ಬರುವ। ಕೃತ್ಯ ಹಚ್ಚಿಕೊಂಡು ಬಡವಾಗುವದೇಕೆ। ಉತ್ತುಮ ಗುಣನಿಧಿ ವಿಜಯ ವಿಠ್ಠಲರೇಯ। ಪೆತ್ತ ಜನಕನಂತೆ ಹಗಲಿರುಳು ಬಿಡದೆ। ತುತ್ತು ಮಾಡಿ ತಂದು ಉಣಿಸುವನು ಸತ್ಯವೊ ॥೨॥

**ತ್ರಿವಿಡಿತಾಳ**

ಸರ್ವಾಧಿಷ್ಠಾನದಲ್ಲಿ ಹರಿಯೆ ಸಂತತ ಇದ್ದು। ಶರ್ವಾದಿಗಳ ಕೈಯ್ಯ ವ್ಯಾಪಾರವ। ನಿರ್ವಹಿಸಿಕೊಂಬನು ನಿರ್ದೋಷನಾಗಿ ಬಲು। ಊರ್ವಿಯೊಳಗೆ ತಾನೆ ವ್ಯಾಪ್ತನಾಗಿ। ದುರ್ವಿಷಯಂಗಳು ನಿನಗೆತ್ತಲೊ ಮನವೆ। ದರ್ವಿಯಂದದಿ ಕಾಣೊ ನಿನಗಿಪ್ಪದು। ಸರ್ವದ ಕೇಳುವದು ಹೊರಗೆ ಬಿಟ್ಟ ಶ್ವಾಸ। ಓರ್ವನಾದರು ಒಳಗೆ ಸೇರಿಕೊಂಬ। ಗರ್ವರ ಕಾಣೆನೊ ನಿನಗೆ ಸಂಶಯಯಾತಕೆ। ಸರ್ವಥಾ ದುಃಶ್ಚಿಂತೆ ಬಡದಿರಿಂದೂ। ನಿರ್ವಾಣದಾಯಕ ವಿಜಯ ವಿಠ್ಠಲರೇಯಾ। ನಿರ್ವಾಹಕರ್ತನು ನಮಗಾವ ಭಯವಿಲ್ಲಾ ॥೩॥

**ಅಟ್ಟತಾಳ**

ನುಡಿಸುವ ವರುಣನು ಮೇಲುವನು ಪಾವಕ। ನಡೆವನು ಜಯಂತ ಕೇಳುವ ದಿಗ್ದೇವ। ಬಿಡದಪ್ಪಿಕೊಂಬ ಅಹಂಕಾರಿಕ ಪ್ರಾಣ। ಒಡನೆ ಗುಹ್ಯಗಳಲ್ಲಿ ಮನುಮಿತ್ರ ಮನದಲ್ಲಿ। ಬಿಡದೆ ಇಂದ್ರನು ಇಪ್ಪ ಅಹಂಕಾರದಲ್ಲಿ ರುದ್ರ। ಪಿಡಿವನು ದಕ್ಷಕ ನೋಡುವ ಸೂರ್ಯನು। ಎಡೆ ತೊಲಗದಲೆ ಇವರಿಂದಲಾಗುತಿರೆ। ಪೊಡವಿಯೊಳಗೆ ನಿನಗಾವದೊ ಆಧೀನ। ಕಡಲಶಯನ ನಮ್ಮ ವಿಜಯ ವಿಠ್ಠಲನಲ್ಲಿ। ಧೃಡ ಬಕುತಿಯನೆ ಮಾಡು ಇದೆ ಸಾಧನಸಿದ್ಧ ॥೪॥

**ಆದಿತಾಳ**

ನಾನೆ ಪೋಗುತಲಿಪ್ಪೆ ನಾನೆ ಬರುತಲಿಪ್ಪೆ। ನಾನೆ ಕೊಡತಲಿಪ್ಪೆ ನಾನೆ ಕೊಳುತಲಿಪ್ಪೆ। ನಾನೆ ಭುಂಜಿಸುತಿಪ್ಪೆ ನಾನೆ ಬಲವಂತನಿಪ್ಪೆ। ನಾನೆ

ಶ್ರೇಷ್ಠನಿಪ್ಪೆ ನಾನೆ ಧನಿಕನಿಪ್ಪೆ। ನಾನೆ ಧನಾಢ್ಯನಿಪ್ಪೆ ನಾನೆ ಎಂದು ಪೇಳಿಕೊಂಡನರನು। ನಾನಾ ಯಾತನೆಗಳ ಬಡುವನು ಪ್ರತಿದಿನ। ದೀನ ಮಂದಾರಹರಿ ವಿಜಯ ವಿಠ್ಠಲರೇಯ। ನೀನೆ ಮಾಳ್ಪವನೆನ್ನೆ ಭಕ್ತರ ಕೈಬಿಡನೊ ॥೫॥

**ಜತೆ**

ಭಕ್ತಿಗೆ ಪ್ರಧಾನವಾದ ಚಿಂತನೆ ಮಾಡು ।
ಮುಕ್ತಿದಾಯಕ ದೇವ ವಿಜಯ ವಿಠ್ಠಲವೊಲಿವಾ ॥೬॥

❖ ❖ ❖

## ಸುಳಾದಿ-೨೧

(ಜೀವ ಪಾರತಂತ್ರ ಹರಿ ಸ್ವತಂತ್ರ ಪ್ರಾರ್ಥನಾ ವಿ॥)

ಸದಾ ಸದ್ಭಕ್ತರು ಶ್ರೀ ಹರಿಯಾಧೀನರಾಗಿ ಶ್ರೀಹರಿ ಯಾವ ಕಾಲದಲ್ಲಿ ಎಂಥ ಕಷ್ಟಸುಖಾದಿಗಳಿತ್ತರೂ ಮನಸಿಗೆ ತಾರದೆ ಹರಿಯ ಆಧೀನ ಚಿಂತಿಸುತ್ತ ಸಕಲ ಭೋಗಗಳು ಹರಿ ಇತ್ತು ಮಾಡಿಸಿದನೆಂದು ಹರಿಗೆ ಅರ್ಪಿಸುತ್ತ ಹರಿಯಿಂದಾಗುವ ವ್ಯಾಪಾರಕ್ಕೆ ನಾನು ಅಡ್ಡ ಬಂದವನಲ್ಲ. ಬಂದರೂ ಸರ್ವಾಧಿಷ್ಠಾನಗತ ಹರಿ ವ್ಯಾಪಾರದಲ್ಲಿ ನ್ಯೂನವಿಲ್ಲ.

**ರಾಗ-ಸಾರಂಗ ಧ್ರುವತಾಳ**

ನಿನ್ನಾಧೀನನಾದವನೊ ನಿತ್ಯದಲ್ಲಿ ನಾನು। ಮನ್ನಿಸು ದಯದಿಂದ ಮಾತು ಕೇಳಿ। ಇನ್ನಾವ ಯೋಚನೆಯೂ ನಿರ್ಧರವಾಗಿ ನುಡಿದೆ। ಎನ್ನಭಾರವು ನಿನ್ನದಲ್ಲವೇನೈ। ಅನಂತ ಜನ್ಮಗಳು ಧರಿಸಿದ ಕಾಲಕ್ಕು। ಅನ್ಯ ಶರಣನಲ್ಲವೊ ಅಮಿತಮಹಿಮ। ಮನ್ನಣೆ ಇತ್ತು ಬಹುಜನರಿಂದ ಈಪರಿ ಬಣ್ಣನೆ ಮಾಡಿಸುವದು ಬೇಕಾಗದೆ। ಮುನ್ನೆ ನಿನ್ನ ಪಾದಕ್ಕೆ ಕೇವಲ ದೈನ್ಯದಲ್ಲಿ। ಬಿನ್ನಪ ಮಾಡಿದದ್ದು ಮನಕಾಗದೊ। ಬಿನ್ನಣದಲ್ಲಿ ಇನಿತು

ನಡಿಸಿದದರಿಂದ। ಎನ್ನ ಸಾಧನಕೆ ವಿಳಂಬಾಗದೆ। ಬನ್ನ ಬಡಿಸಿದರೆ ಸಹ ನಾವಿಲ್ಲೆಂಬೊದು। ನಿನ್ನ ಮಹಮನಸಿಗೆ ತಿಳಿದೇನಯ್ಯಾ। ಭಿನ್ನ ಭಕ್ತನಾದರು ನೀನಿತ್ತ ಧೈರ್ಯದಿಂದ। ಖಿನ್ನನಾಗದಿಪ್ಪ ನಂಬಿದವರು। ಆನಂದವಲ್ಲದೆ ಏನೇನು ಬಂದರು। ಸನ್ನುಮತವೆ ಸರಿ ಏನು ಕಷ್ಟ ಬಂದರು। ಮನಕಾನಂದಹದು ನೀನೊಲಿಯೆ ಚಿನ್ನಗರ್ಭಾಂಡ ಪೆತ್ತ ವಿಜಯ ವಿಠ್ಠಲರೇಯ। ನಿನ್ನ ವ್ಯಾಪಾರಕ್ಕೆ ಮಿತಿಯ ಕಾಣೆನೊ ಎಣಿಸಿ ॥೧॥

### ಮಟ್ಟತಾಳ

ಬೆಟ್ಟದಮೇಲಿರಿಸು ಭಾಗ್ಯವ ಪೋಗಾಡು। ಕಟ್ಟುಕಾವಲೆ ಮಾಡು ಕಳ್ಳತನವೆ ಹೊರಿಸು। ಮಟ್ಟುಮಾಡುವ ಪುಣ್ಯಮಹ ಬಂಧನ ಕಲಿಸು। ಕೆಟ್ಟಮಾತು ನುಡಿಸು ಕಾಶಿನವನ ಮಾಡು। ಅಟ್ಟಿಸುಮಾರಿಗಳು ಅತಿ ಸೌಖ್ಯವ ಕೊಡು। ಬಟ್ಟೆಯ ತಪ್ಪಿಸು ಸತ್ಪಂಥವಪಡಿಸು। ಬಟ್ಟೆ ಕಾಣದಲಿಪ್ಪ ಬಹುಕ್ಲೇಶವ ಬಡಿಸು। ಇಟ್ಟದ್ದು ಪೋಗುವ ಯೋಚನೆ ಕಲ್ಪಿಸು। ತಟ್ಟಲಿ ಪ್ರತಿಕೂಲ ದೈದಿಪ್ಯನಮಾಡು। ಧಿಟ್ಟಮತಿಯ ಕೊಡು ಧರಣಿಯೊಳಗೆ ಅರಸು। ಪಟ್ಟವೆ ಕಟ್ಟಿಸು ತಿರಕಿಯ ಬೇಡಿಸು। ಪೆಟ್ಟುಗಳನೆ ತಿನಿಸು ಪ್ರೀತಿಭೋಜನ ಉಣಿಸು। ಕಷ್ಟವನ್ನೆ ಬಡಿಸು। ಕಾಲಕಾಲಕ್ಕೆ ಸಂ। ತುಷ್ಟ ನರನಮಾಡು ತ್ತುಂಗ ಗುಣವ ಕೊಡು। ಎಷ್ಟೆ ದಿವಸವಾಗೆ ಎನ್ನ ವದನದಲ್ಲಿ। ಕೃಷ್ಣರಾಮನೆಂಬೊ ಸ್ಮರಣೆ ಮರಿಸದಿರು। ಅಷ್ಟಸೌಭಾಗ್ಯನೆ ವಿಜಯ ವಿಠ್ಠಲರೇಯ। ಅಷ್ಟಷ್ಟೇನಯ್ಯಾ ನಿನ್ನ ಮನಕೆ ಬಂದ। ಚೇಷ್ಟಿಯ ಮಾಡಿಸೊ ಈ ಚೇತನ ಕೈಯಿಂದ ॥೨॥

### ತ್ರಿವಿಡಿತಾಳ

ಅಂಗಡಿಹರಹಿಕೊಂಡು ಊರು ಕೇರಿಯ ತಿರುಗಿ। ಹಿಂಗದೆ ಪರರ ಮನೆಗೆ ಪೋಗಿ ಬಲು। ಸಂಗತಿಯನೆ ಹಚ್ಚಿ ಸಾಕಲ್ಯವಾಗಿ ಸು। ಖಂಗಳ ಬಯಸುವ ವ್ಯಾಜ್ಯಾಮಾಡಿ। ಭಂಗಾರ ಮೊದಲಾದ ದ್ರವ್ಯಂಗಳ ಪಿಡಿದು।

ಭಂಗಾರ ಕಳಕೊಂಬ ವ್ಯವಹಾರವೆಂಬ। ರಂಗರಾಯನೆ ನೀನು ಇನಿತು ನುಡಿದ ಮಾತು। ಸಂಗೀತ ಜನರು ಮೆಚ್ಚುವರೇನೊ। ಜಂಗಮ ಸ್ಥಾವರದಲ್ಲಿ ನಿನ್ನ ವ್ಯಾಪ್ತಿ। ಕಂಗೊಳಿಸುತಿದೆ ಕಡಿಮೆ ಇಲ್ಲ। ಅಂಗದಂಡಣಿ ಮಾಡಿ ಸಾಧನದವನಾಗಿ। ಗಂಗಾದಿ ಯಾತ್ರೆಯ ಚರಿಸದಲೇ। ಸಂಗನಾಗಿ ನಾನು ಬಲು ಜನರಿಂದ ಪಾ। ಪಂಗಳು ಸಂಪಾದಿಸುವ ಸ್ವತಂತ್ರನೇ। ತುಂಗ ವಿಕ್ರಮ ನಮ್ಮ ವಿಜಯ ವಿಠ್ಠಲರೇಯ। ಶೃಂಗಾರ ಮೂರುತಿ ಸತತ ಸತ್ಕೀರುತಿ ॥೩॥

**ಅಟ್ಟತಾಳ**

ನಾನಾಭೋಗಂಗಳು ಬಡುವವನಾನಲ್ಲ। ನಾನಾಜನರ ಕೂಡಾಚರಿಸುವನಾನಲ್ಲಾ। ನಾನಾನಡತಿಯನ್ನು ನಡಿವವ ನಾನಲ್ಲ। ನೀನೆ ಎನ್ನೊಳಗಿದ್ದು ಬಹುಮಾನವರ ಕೈಯಾ। ಅನವರತ ಮನ್ನಣೆ ಕೊಂಬುವ ನೀನೆ। ಅನುಮತ್ಯಾತಕೆ ಯೋಚನೆ ಮಾಡಲಿ। ಆನಂದವಿತ್ತರೆ ಒಳಿತೆ ದುಃಖವನ್ನು। ಅನಂತಾನಂತವಾಗಿ ತಂದಿತ್ತರು ಲೇಸು। ಅನುಭೋಗಿಸದಲೆ ವೊಲ್ಲೆನೆಂಬುವನಲ್ಲ। ಅನಂತಶಾಯಿ ಶ್ರೀ ವಿಜಯ ವಿಠ್ಠಲರೇಯ। ನೀನಡಿಸಿದಂತೆ ನಿತ್ಯ ಸಂಚರಿಸುವೆ ॥೪॥

**ಆದಿತಾಳ**

ದೇವನೀ ಪೂರ್ವದಲ್ಲಿ ಮಾಡಿದ ಸಂಕಲ್ಪ। ಆವಾವನೋ ಬಿಡಿಸಿಕೊಂಬ ಸಮರ್ಥ ನಾ। ನಾಬಲ್ಲೆನೆಂಬೊದಕ್ಕೆ ಸ್ವತಂತ್ರತನವುಳ್ಳ ಮಾ। ನವನಲ್ಲವಯ್ಯಾ ಮಾತ್ರ ಕಾಲಮಾತುರ। ಕೈವಲ್ಯನಾಥಾ ನಮ್ಮ ವಿಜಯ ವಿಠ್ಠಲರೇಯ। ಕಾವದಾತನೀನಿರೆ ಅನ್ಯಚಿಂತೆಗಳ್ಯಾಕೆ ॥೫॥

**ಜತೆ**

ನಿನ್ನಿಂದಾಗುವ ವ್ಯಾಪಾರಕ್ಕೆ ನಾನಡ್ಡೆನೊ ।
ಚನ್ನಿಗ ವಿಜಯ ವಿಠ್ಠಲ ಸರ್ವಾಧಿಷ್ಟನೆ ॥೬॥



# ಸುಳಾದಿ-೨೨

(ಶ್ರೀ ಹರಿ ಸ್ವಾತಂತ್ರ ಅಧ್ಯಾತ್ಮ ಪ್ರಮೇಯ)

ಪುಣ್ಯಪಾಪ ಹರಿ ಮಾಡಿಸಿದಂತೆ ಆಗುವದು. ಕಣ್ಣಿವೆ ಇಕ್ಕುವದು ಜೀವರ ಸ್ವತಂತ್ರವಲ್ಲ. ಹರಿ ಮಾಡಿಸಿದರೆ ಬ್ರಹ್ಮಾದಿಗಳು ನಿಶ್ಚೇಷ್ಟರು ಲಿಂಗ ಉಪಚಯವಾರಂಭಿಸಿ ಶ್ರೀಹರಿ ಚೇಷ್ಟೆ ಮಾಡಿಸುವನು ಸರ್ವ ಸ್ವತಂತ್ರನು ಹರಿ ಪ್ರಯೋಜನ ಮಾಡಿದ ಮೇಲೆ ತಿಳಿವಂಥ ಪರಿ ಜೀವನಿಗುಂಟು. ಇದೇ ಮಾತ್ರ ಜೀವಗಿತ್ತದತ್ತ ಸ್ವಾತಂತ್ರ.

## ರಾಗ-ರೇಗುಪ್ತಿ ಧ್ರುವತಾಳ

ಪುಣ್ಯ ಪಾಪಗಳೆರಡು ಹರಿ ಮಾಡಿದಂತೆ ಜೀವ। ಗಣ್ಯರು ಮಾಡುವರು ಜನುಮ ಜನುಮ। ಅನ್ಯಾಯವೆನ್ನದಿರಿ ಗ್ರಂಥಸಮ್ಮತವಿದಕೆ। ಅನ್ಯಥ ನುಡಿಸಲ್ಲ ಎಂದೆಂದಿಗೆ। ಧನ್ಯರಾದವರಿಗೆ ಮನೋವಾಕ್ಕಾಯ। ಅನುಗುಣ್ಯವಾಗಿಪ್ಪದೊ ಹರಿಯ ಶಕ್ತಿ। ಕಣ್ಣಿವೆ ಇಕ್ಕುವದು ಜೀವರ ಸ್ವತಂತ್ರವೆ। ಸನ್ನ್ಯಾಯವಲ್ಲವಲ್ಲಯವೆ ಇಡದಿರಲಿ ಕಾಲಮೀರಿ। ಕನ್ಯಾರತುನ ಲಕುಮಿ ಜೀವಕೋಟಿಶ ಹಿ। ರಣ್ಯ ಗರ್ಭಾದಿಗಳು ನಿಶ್ಚೇಷ್ಟರೊ ಅನ್ಯರೊಬ್ಬರ ಕಾಣೆ ಬಹಿರಂತರದಿ ಕಾ। ರುಣ್ಯ ಮೂರುತಿ ಹರಿ ನಿಯಾಮಕ ಸನ್ಯಾಸ ಮೊದಲಾದ ಆಶ್ರಮಧರರಾಗೆ ಅ। ರಣ್ಯ ರೋದನ ಕಾಣೊ ತಿಳಿಯದಿರಲು। ಮನ್ಯು ಮಾಡುವನ್ಯಾರು ಕಾಲಕಾಲಕೆ। ದೈನ್ಯಬಿಡವರಾರೊ ಜೀವಿಗಳೆ। ಗಣ್ಯವೆ ಶ್ರೀಹರಿಯ ಅಚಿಂತ್ಯಾದ್ಭುತ ಕಾರ್ಯ। ಅನ್ಯೋನ್ಯಭಾವದಿಂದ ನಡಿಸುವನು। ಶೂನ್ಯ ಗುಣನಲ್ಲ ಸತತ ವ್ಯಕ್ತನು ಲಾ। ವಣ್ಯನಂತಾನಂತ ರೂಪಾತ್ಮಕ। ಹನ್ನೆರಡು ಎರಡು ಭುವನದೊಳಗೆ ಅಗ್ರ। ಗಣ್ಯನಾಗಿ ಮೆರೆವ ನಿರ್ದುಃಖದಿ। ಜನ್ಯದಿಂದಲಿ ಜನ್ಯವಾಗುವವಸ್ತ ಪ। ರ್ಜನ್ಯ ಮಿಕ್ಕಾದಲ್ಲಿ ಹರಿಸಂಗಡ। ಮನುಗಳಲಿಪ್ಪ ತತತ್ಕಾಲಕ್ಕೆ ಸೌ। ಜನ್ಯರಾ ದುರ್ಜನರ ಕುಣಿಸುವನು। ಪಾಂಚ। ಜನ್ಯ ಪಾಣಿ ನಮ್ಮ ವಿಜಯ ವಿಠ್ಠಲ ನಿ। ರ್ವಿಣ್ಯನಲ್ಲವೊ ಬಲು ವಿಚಿತ್ರ ಸಮರ್ಥ ॥೧॥

### ಮಟ್ಟತಾಳ

ಜೀವಕ್ಕೆ ಆವರಣ ಲಿಂಗ ಶರೀರವು। ಆವಾವಕಾಲಕ್ಕೆ ಇದ್ದದ್ದೇ ಸರಿ ಇದ್ದರೆ। ನೋವಿದ್ದಿಲ್ಲವೊ ಭವಿಷ್ಯೋತ್ತರದಲ್ಲಿ ತಾ। ವ್ಯವಧಾನದಲಿ ತಗಲಿಸುತಿಪ್ಪದು। ಆವ್ಯಾಳ್ಯದಲಿ ಜ್ಞಾನೇಚ್ಛಾಪ್ರಯತ್ನ। ಜೀವಕೆ ಸ್ವರೂಪಭೂತವಾದರು ಸ್ವಸ್ವ ಭಾವಾಚರಣೆಮಾಡದೆ ಸುಮ್ಮನಿದ್ದದ್ದೇನು। ದೇವದೇವೇಶನ್ನ ಉತ್ತಮ ಕ್ರೀಡೆಗೆ ಆವನನು ತುತಿಸಿ ನೆಲೆಗಂಡವನಾರು। ಕೋವಿದರರಸ ವಿಜಯ ವಿಠ್ಠಲರೇಯ। ಜೀವರ ವಿಭಕ್ತನ ಮಾಡುವ ಬಗೆ ನೋಡೊ ॥೨॥

### ತ್ರಿವಿಡಿತಾಳ

ಒಣಗಿದ ಗಜಗಿನ ಕಾಯೊಳದರ ಬೀಜ। ಅನುಸರಿಸಿ ಇದ್ದಂತಾ ನಾದಿಯಿಂದ। ಗುಣತ್ರಂಯಾತ್ಮಕವಾದ ಲಿಂಗದೊಳಗೆ ಚೇ। ತನಪೊಂದಿಪ್ಪದೊ। ಅಸಂಬಂಧದಲ್ಲಿ। ಮಿನಗುವ ಕರ್ಮವ ಪ್ರಕೃತಿಕಾಲವೆಲ್ಲ ಸಾ। ಧನಮಾಡಲಿಲ್ಲೇಕೆ ಅಂದಿನಲ್ಲಿ। ಗುಣವಂತನಾದವ ಕರ್ಮಾದಿಗಧಿಕ್ಯ। ವೇನು ಪೇಳುವನೆ ಶ್ರೀಹರಿಯ ತೊರದು। ವನಜನಾಭನು ಸೃಷ್ಟಿ ಪ್ರಾರಂಭದಲಿ ಜೀವ। ರನ್ನೆ ಪುಟ್ಟಿಸುವ ಲಿಂಗ ದೇಹದಿಂದ। ಘನವಾಗಿ ಜೀವಕೆ ಬಿಡದಂತೆ ತೋದ ವಾ। ಸನ ದೋಷಾದಿಯಲ್ಲಿ ಪಚ್ಚೆಸುವ। ತನುವಿನ ನೆಳಲಂತೆ ಹರಿಯಾಡಲು ಜೀ। ವನ ಪ್ರವರ್ತಿಸುವದು ದ್ವಿವಿಧ ಕರ್ಮ। ವನಜಾಸನಿಗೆಮುಖ್ಯ ವೊಳಗೆ ಹೊರಗೆ ತಾನೆ। ಅನುದಿನ ವ್ಯಾಪಾರ ಮಾಳ್ಪ ಮಿಕ್ಕ। ಅನಿಮಿಷಾದಿಗಳಿಗೆ ತತ್ತದ್ವಾರದಿಂದ। ತಾನೆ ಚೇಷ್ಟಪ್ರದನಾಗಿ ಕರ್ತೃನೆನಿಪಾ। ಮನುಜನೊಬ್ಬನು ನೋಡು ಬಲುವಿಧವಾದ ರಸ। ವನು ಕುಡಿಸಿ। ಪಾನಪ್ರಭೇದವ। ಅನುವಾಗಿ ಮಾಡಿ ತಂದು ಹಚ್ಚಿ ವಸ್ತ್ರಕ್ಕೆ ದೀಪ। ವನೆ ಮುಟ್ಟಿಸಿದರದು ವಸನ ಸುಡದು। ಎಣೆಗಾಣೆ ಒಂದು ರಸ ವಿಶೇಷದಲಿ ಇಂಥ। ಗುಣ ಉಂಟಾಗಿದೆ ನೋಡು ಪ್ರತ್ಯಕ್ಷವು। ಗುಣಗಣಾಂಬುಧಿ ನಿತ್ಯ ನಿರ್ದೋಷ ಪ್ರಬಲ ಲ। ಕ್ಷಣ ಪೂರ್ಣ ವಿಜ್ಞಾನ

ನಿರ್ವಿಕಾರ। ತನಗೆ ತಾನೆ ಕುಣಿದು ಜೀವಿಗಳ ಕುಣಿಸುವ। ಅನಿಮಿತ್ತ ಬಾಂಧವ ಸರ್ವ ವ್ಯಾಪ್ತ। ಜನನ ಮರಣ ರಹಿತ ವಿಜಯ ವಿಠ್ಠಲರೇಯ। ಚಿನುಮಯ ಮೂರುತಿ ಚೇತನಾಚೇತನ ಸ್ವಾಮಿ ॥೩॥

**ಅಟ್ಟತಾಳ**

ದೇಶ ಆಕಾಶ ವ್ಯಾಪಿಸಿಕೊಂಡು ಇದ್ದಂತೆ। ಶ್ರೀಶ ಜೀವನದೊಳು ವ್ಯಾಪ್ತನಾಗಿದ್ದು ಸಂ। ತೋಷ ಪೂರ್ಣನು ಪ್ರಕೃತಿಯನು ಮನೆ ಮಾಡಿ। ಆ ಸೂಕ್ಷ್ಮ ದೇಹಕೆ ಲಿಂಗವ್ಯಾಜದಿಂದ। ಮೋಸವಗೊಳಿಸುವ ಮಾಯವ ಕಲ್ಪಿಸಿ। ತಾ ಸುಮ್ಮನಿರಲೊಲ್ಲ ಒಂದು ಕ್ಷಣವಾದರು। ಲೇಶಬಿಡದೆ ಬಹುಚರ್ಯಮಾಡುವನು। ವಾಸವ ವಂದಿತ ನಮ್ಮ ವಿಜಯ ವಿಠ್ಠಲ ಸ್ವಪ್ರ ಕಾಶಕೆ ಪ್ರತಿಕೂಲ ಉಂಟೇನು ಮರುಳೆ ॥೪॥

**ಆದಿತಾಳ**

ವಾಙ್ಮನೊಗೋಚರ ಜ್ಞಾನಿಗಳಿಗೆ ಇದು। ರಾಗ ತೊರೆಯದವಗೆ ಮನಸಿಗೆ ಹತ್ತದು। ಹೀಗೆ ಹಾಗ್ಯಾಕೆಂದು ತಂಡು ವಾದಿಸಿದರೆ। ಆಗುವದೇನಯ್ಯ ಅವರಿಂದ ಫಲಿತಾರ್ಥ। ಭಾಗೀರಥಿ ಜನಕ ಪುಣ್ಯ ಪಾಪಕೆ ಕರ್ತ। ನಾಗಿಪ್ಪನು ನಿತ್ಯ ಸರ್ವಜ್ಞ ಶಿಖಾಮಣಿ। ಆಗಮ ಶ್ರುತಿಯಲ್ಲಿ ವರದೊರದು ಪೇಳಿದೆ। ಭೋಗಿಸಬೇಕು ಜೀವ ಹರಿ ಇತ್ತ ದ್ವಿವಿಧ ಕರ್ಮ। ಜಾಗು ಮಾಡದೆ ತಿಳಿ ಪರಮಾತ್ಮ ಪಾಪ ದೂರ। ಭೂಗೋಳದೊಳಗೆ ವಿವರಿಸಿ ಪೇಳುವದಕ್ಕೆ। ಸಾಗಿ ಸಾಗದು ಬುದ್ಧಿ ಸುಳಿಯಂತೆ ಸುತ್ತುತಿದೆ। ವೇಗದಿಂದಲಿ ಇನಿತು ಪೇಳಿದ ಕೃತಿ ಎಲ್ಲ। ಯೋಗೇಶ್ವರ ಹರಿ ಒಳಗಿದ್ದು ನುಡಿದದ್ದೆ। ಈಗಾಗ ಎನಸಲ್ಲ ವೈದಿಕ ಲೌಕಿಕ ಸರ್ವ। ಥಾ ಗುಣದಲ್ಲಿ ಗುಣಿಸಿ ಮೌನಪಿಡಿಯಬೇಕು। ನಾಗ ವೈರಿವಾಹನ ವಿಜಯ ವಿಠ್ಠಲ ಸುಮ್ಮ ನಾಗಗೊಡನು ಸುಮ್ಮನಿಡುವನು ಇಚ್ಛೆ ಬೆರಿಸಿ ॥೫॥

**ಜತೆ**

ಹರಿಯ ಪ್ರಯೋಜನ ಮಾಡಿದ ಮೇಲೆ ತಿಳಿವಂಥ ।
ಪರಿಯುಂಟು ವಿಜಯ ವಿಠ್ಠಲನ ಕರುಣದಿಂದ ॥೬॥

❖ ❖ ❖

## ಸುಳಾದಿ-೨೩

**(ಜೀವ ಪಾರತಂತ್ರ ಪ್ರಮೇಯ)**

ಶ್ರೀ ಹರಿಯೇ ಸಕಲ ವ್ಯಾಪಾರವೂ ನನ್ನದಲ್ಲ. ನೀನಿಂತು ಉಣಿಸಿದರೆ ಅನಂತ ಕೃತ್ಯಗಳು ಮಾಡುವೆ. ನಾನೇ ಸ್ವತಂತ್ರನಾದರೆ ಇಷ್ಟವಿಲ್ಲದ ಶ್ವಾನ ಸೂಕರಾದಿ ದೇಹತೆತ್ತು ದುಃಖಿಗಳು ಉಣಬಲ್ಲಿನೆ? ಸ್ವಾಮಿ ನೀನು ಅರಸನಾದ ಕಾರಣ ನಿನಗೇವೆ ಸಲ್ಲಿತು. ಉಚಿತ ಅನುಚಿತ ಸರ್ವ ನೀನೆ ಮಾಡಿಸುವಿ.

**ರಾಗ-ಭೂಪಾಳ ಧ್ರುವತಾಳ**

ನನ್ನದಲ್ಲ ನನ್ನದಲ್ಲ ಏನೇನು ಚರಿಸುವ। ನಾನಾ ವ್ಯಾಪಾರವು ಅನಂತಕಲ್ಪದಲ್ಲಿ। ನೀನೆ ವ್ಯಾಪಕನಾಗಿ ನಾನಾಕ ಪರಿಯಲ್ಲಿ। ನೀನಾಡಿಸುವೆ ಅಭಿಮಾನದೊಡಿಯನಾಗಿ। ಸ್ನಾನ ಸಂಧ್ಯಾವಂದನೆ ಮೌನ ದಾನ ಜಪವ। ಏಣಿಸುವದು ಸರ್ವ ನಾನಾ ಪ್ರಪಂಚಗಳು। ಆನಂದ ಶ್ರವಣ ಮನನ। ಧ್ಯಾನಮೂರುತಿ ಉಪಾಸನ ಗಾಯನ ಜ್ಞಾನ। ದ್ಯುನಾಥ ಉಡುಪ ಗ್ರಹಣ ಪರ್ವಣಿ ಗಂಗೆ। ಭಾನು ನಂದನೆ ಕೃಷ್ಣವೇಣಿ ವಾಣಿ ಕಾವೇರಿ। ಆ ನರ್ಮದಾ ಗೋದೆ ಭವನಾಶಿ ತುಂಗೆ ಮಿಕ್ಕಕ್ಕೆ। ದಾನಾದಿ ಮತ್ತೆ ಕುಂಭಘೋಣ ಗಯಾ ಪ್ರಯಾಗ। ಆನಂದವನ ಸೇತು ಆನೆ ಪರ್ವತ ಶ್ರೀರಂಗನಾಥ ಹೇಮಗಿರಿ ಅನಂತಶಯನ ಜನಾರ್ದನ। ನಾನಾಕಾಪುಣ್ಯನಿಧಿ। ಪಾಪಾಸಂತಾಪವನು ಚರಿತವ್ರತ। ವಾನಪ್ರಸ್ತ

ಮುಂತಾದ ಏನೇನುಧರ್ಮ ಸರ್ವ। ನೀನನುಕೂಲವಾಗಿ ದೀನ ನರಗೆ ಮುಖ್ಯ। ಪ್ರಾಣನಿಂದಲಿ ನಿತ್ಯ ನಾಡಿಸಿದರಿಂದ ನಾನೆ ಧನ್ಯನು ಬಲು ಅನಂತ ಜನುಮದಲ್ಲಿ। ದಾನವ ಮರ್ದನಾ ವಿಜಯ ವಿಠ್ಠಲರೇಯ। ನಾನೆ ಸ್ವತಂತ್ರನೆಂಬನುಡಿ ಎಂತಾಹದೊ ॥೧॥

**ಮಟ್ಟತಾಳ**

ಉಣಿಸಿದರೆ ಉಣಿಪೆ ಉಡಿಸಿದರೆ ಉಡಿಪೆ। ಕುಣಿಸಿದರೆ ಕುಣಿಪೆ ಮಣಿಸಿದರೆ ಮಣಿ। ಪೆ ನಗುಸಿದರೆ ನಗುಪೆ। ದಣಿಸಿದರೆ ದಣಿಪೆ ಧರಿಸಿದರೆ ಧರಿಪೆ। ಅನಿಸಿದರೆ ಅನಿಪೆ ಅರಿಸಿದರೆ ಅರಿಪೆ। ಗುಣಿಸಿದರೆ ಗುಣಿಪೆ ಗುಟಿಸಿದರೆ ಗುಟಿಪೆ। ಎಣಿಸಿದರೆ ಎಣಿಪೆ ಇಡಿಸಿದರೆ। ಮನಸು ಮೊದಲಾದ ಇಂದ್ರಿಯವೊಳಪೊಕ್ಕು। ದ್ವ್ಯಣುಕೆ ಮಿಗಿಲಾದ ಕಾಲ ಭೇದಗಳಿಂದ। ಇನಿತು ಎನ್ನಿಂದಲಿ ಪರಿಪರಿ ವ್ಯಾಪಾರ। ದಿವಸ ದಿವಸದಲ್ಲಿ ಬಿಡದೆ ಮಾಳ್ಪ। ಜಾಣ ವನಜ ಭವನಪೆತ್ತ ವಿಜಯ ವಿಠ್ಠಲರೇಯ। ನಿನಗಲ್ಲದೆ ಎನಗೆ ಸ್ವಾತಂತ್ರ ಉಂಟೇ ॥೨॥

**ತ್ರಿವಿಡಿತಾಳ**

ನಾನೆ ಸರ್ವದಾ ಸ್ವಾತಂತ್ರದವನಾದರೆ। ಹೀನವಾದ ಜನುಮ ಧರಿಸಿ ಬಂದೂ। ಶ್ವಾನಸೂಕರ ಗಾರ್ಧ ಗೃಧ್ರ ಜಂಬುಕ ಮಿಕ್ಕ ನಾನಾ। ಯೋನಿಯೊಳಗೆ ಬಂದು ದುಃಖಿಪನೇ। ಹಾನಿ ವೃದ್ಧಿಯಲ್ಲಿ ಬಳಲಿ ಬೆಂಡಾಗಿ ನಿ। ತ್ಯ ನೆಲೆಗಾಣದಲೆ ಅಳಲುವೆನೊ। ನೀನೆ ಗತಿ ಎಂದು ಆರ್ತನಾಗಿ ನಿಂದು। ಮಾಣದೆ ಮೊರೆ ಇಟ್ಟು ಬೇಡುವೆನೆ। ಕಾಣದವನಾಗಿ ಕಂಡಲ್ಲಿ ತಿರುಗುತ್ತ ದೀನ ಮಾನವರಿಗೆ ಅಲ್ಪರಿದು। ಗೇಣುದರ ಪೊರೆದು ಗತಿಗೆಟ್ಟು ಪುಣ್ಯವ। ನಾನೀಗಿದೆನೆಂಬೊ ಸೊಲ್ಲು ಮತ್ತೆಲ್ಲಿದೊ। ನಾನು ನಿನ್ನಾಧೀನ ಇಲ್ಲದಿರಲು ನಿತ್ಯ ಅನಂತ ಸುಖವನು ಬಡಿಪೆನಯ್ಯಾ। ನೀನೆ ಸರ್ವ ಜಗತ್ಕಾರಣನಾಗಿದ್ದು। ಪ್ರಾಣಿಗೆ ನಡತಿ ತಪ್ಪಿದನು ಎಂದು।

ಯೋನಿಯೋನಿಲಿ ಪೋಗಿಸಿ ಬಳಲಿಪದುಚಿತವೆ। ನೀನರಸಾದ ಕಾರಣದಿಂದೆ ಸಲ್ಲಿತು। ಬಾಣಹಸ್ತಾಂತಕ ವಿಜಯ ವಿಠ್ಠಲರೇಯ। ನಾನುಣಬಲ್ಲಿನೆ ನೀ ಮಾಡಿಸಿದ ಕರ್ಮಾ ॥೩॥

### ಅಟ್ಟತಾಳ

ಆವಲ್ಲಿ ನೋಡಲಿ ಆವಲ್ಲಿ ಆಡಲಿ। ಆವಲ್ಲಿ ಊಣಲಿ ಆವಲ್ಲಿ ಪೋಗಲಿ। ಆವಲ್ಲಿ ತಿರುಗಲಿ ಆವಲ್ಲಿ ಎರಗಲಿ। ಆವಲ್ಲಿ ಕಾಡಲಿ ಆವಲ್ಲಿ ಬೇಡಲಿ। ಆವಲ್ಲಿ ನಗಲಿ ಆವಲ್ಲಿ ಮಲಗಲಿ। ಆವಲ್ಲಿ ಪೇಳಲಿ ಆವಲ್ಲಿ ಕೇಳಲಿ। ಆವಲ್ಲಿ ಬಯಸಲಿ ಆವಲ್ಲಿ ಮೀಯಲಿ। ಆವಲ್ಲಿ ಕೂಗಲಿ ಆವಲ್ಲಿ ಸಾಗಲಿ। ಆವಾವದಾವದು ಆವಾವದಾದರು। ದೇವಶನೆ ನೀನು ಭಾವದಲಿ ನಿಂದು। ಯಾವತ್ತು ಪ್ರೇರಣೆ ನೀವೊದಗಿ ಮನ। ವೀವುತ್ತ ಮಾಣಿಗೆ ಆವದೋಷ ಗುಣಾವಳಿ ಎನಗಿಲ್ಲಾ। ದೇವಕಿನಂದನ ವಿಜಯ ವಿಠ್ಠಲರೇಯ। ಪಾವನಚರಿತ ಪಾವನನಾನಿಂದು ॥೪॥

### ಆದಿತಾಳ

ಉಚಿತವಾಗಲಿ ಮತ್ತನುಚಿತವಾಗಲಿ ಮನಸು। ಪ್ರಚುರ ಮಾಡಿ ನೀನೆ ವಚನಾದಿ ಕರ್ಮಗಳ। ನಿಚಯಮಾಳ್ಪುದು ಖಚಿತವಾಗಿ ಎನಗೆ। ಸಚರಾಚರಾದಲ್ಲಿ ರುಚಿಅರುಚಿ ಪದಾರ್ಥ। ರಚಿಸಿರೆ ನಾನು ಸವಿಯೆ ಪಚನಗೈಸುವ ನೀನೆ। ಅಚಲಮೂರುತಿ ರಂಗ ವಿಜಯ ವಿಠ್ಠಲರೇಯ। ಮುಚಕುಂದಗೊಲಿದ ನಮುಚಿಸೂದನ ಪಾಲಾ ॥೫॥

### ಜತೆ

ನಿನ್ನಂಘ್ರಿ ನಂಬಿದಾದಾಸನು ದಾಸಗೆ ।
ಇನ್ನು ಪಾಪಗಳುಂಟೇನಯ್ಯಾ ವಿಜಯ ವಿಠ್ಠಲ ॥೬॥



## ಸುಳಾದಿ-೨೪

(ಚತುರ್ವಿಂಶತಿ ತತ್ವಾಭಿಮಾನಿ ದೇವತೆಗಳ ವ್ಯಾಪಾರವು ಶ್ರೀಹರಿ ಪ್ರೇರಣೆಯಿಂದಯಾಗುವದು. ಹರಿಸ್ವತಂತ್ರತೆ ಪ್ರಮೇಯ ಪ್ರಾರ್ಥನಾ)

ಐತಿಹಾಸಿಕ ಕಾಶಿ ಯಾತ್ರಾದಿಕಾಲ, ಶ್ರಮಾದಿಗಳ ಪರಿಹರಿಸಿ ಉತ್ತಮ ತ್ರೈಕ್ಷೇತ್ರ ಯಾತ್ರಾ ಮಾಡಿಸಲು ತತ್ವಾಭಿಮಾನಿಗಳೊಡೆಯನ ಪ್ರಾರ್ಥನೆ.

### ರಾಗ-ಭೈರವಿ ಧ್ರುವತಾಳ

ನಮೊನಮೊ ಸಮಸ್ತ ತತ್ವಾಭಿಮಾನಿಗಳಿರಾ। ನಿಮಗೆ ಹಸ್ತವ ಮುಗಿದು ಕೊಂಡಾಡುವೆ। ಕ್ರಮದಿಂದ ಬಿನ್ನಪವ ಲಾಲಿಸಿ ಕೇಳುವದು। ಅಮರ ನಿಮ್ನಗ ಮಜ್ಜನಗೋಸುಗ। ಅಮಲಮತಿ ಇತ್ತು ಜ್ಞಾನ ಭಕ್ತಿಯಿಂದ। ರಮೆಯರಸನ್ನ ನೋಳ್ಪಸಾಧನ ತೋರಿ। ಗಮನಾದಿ ಮೊದಲಾದ ವ್ಯಾಪಾರ ನಿಮ್ಮಾಧೀನ। ಶ್ರಮ ಸಾಧ್ಯವಾಗದಂತೆ ಪೈಣವಿತ್ತು। ತಮೊರಜಗುಣದವರ ಬಾಧಿಯ ತಪ್ಪಿಸಿ ಉ। ತ್ತಮ ಯಾತ್ರಿ ಮಾಡಿಸುವದು ತ್ರಯಕ್ಷೇತ್ರದ। ಕುಮತ ಪೊಂದಿದ ನಿತ್ಯ ಕುಮತಿ ಜನರ ಸಂಗ। ನಿಮಿಷವಾದರೆ ಕೊಡದೆ ಪಾಲಿಸಬೇಕು। ಯಮನೇಮ ಮಿಗಿಲಾದ ಸತ್ಕರ್ಮಾಚಾರದಿಂದ। ಸಮಚಿತ್ತ ಭೇದದಿಂದ ಇರಲಿ ಎನಗೆ। ನಮೊನಮೊ ಸಮಸ್ತ ತತ್ವಾಭಿಮಾನಿಗಳಿರಾ। ಕುಮತಿಯ ಬಿಡಿಸುವದು ನಾನೆಂಬೊ ಮಾತಿನಲ್ಲಿ। ಭ್ರಮಣವಲ್ಲದೆ ಲೇಸ ಲೇಸು ಕಾಣೆ। ರಮೆಯರಸ ನಮ್ಮ ವಿಜಯ ವಿಠ್ಠಲನಂಘ್ರಿ। ಕಮಲ ಹೃತ್ಕಮಲದಲ್ಲಿ ಪೊಳೆವಂತೆ ಕೃಪೆಮಾಡು ॥೧॥

### ಮಟ್ಟತಾಳ

ತನುವೆನ್ನದೆಂಬೆನೆ ತನುವೆನ್ನದಲ್ಲ। ಮನವೆನ್ನದೆಂಬೆನೆ ಮನವೆನ್ನದಲ್ಲ। ಧನವೆನ್ನದೆಂಬೆನೆ ಧನವೆನ್ನದಲ್ಲ। ಜನವೆನ್ನದೆಂಬೆನೆ ಜನವೆನ್ನದಲ್ಲ। ತನು ಮನ ಧನ ಜನವು ಅನುದಿನದಲಿ ನೋಡೆ। ವನಜಭವಾದಿಗಳೆ

ಎಣಿಸಪೇಳುವದೇನು। ಕೊನೆಮೊದಲು ನಿಮ್ಮಾಧೀನವಯ್ಯಾ ಬಿಡದೆ। ಇನಿತು ಪೊಂದಿರಲಿಕ್ಕೆ ಮಣಿದು ಹೇಳುವ ಮಾ। ತಿನ ಉಪಚಾರ್‍ಯಾಕೆ ಘನಮೂರುತಿ ನಮ್ಮ ವಿಜಯ ವಿಠಲನ್ನ ಪ್ರೇ। ರಣೆ ಇಂದಲಿ ನಿಮ್ಮ ಸಕಲ ಚೇಷ್ಟೆಪ್ರದವೊ ॥೨॥

### ತ್ರಿವಿಡಿತಾಳ

ಭೀತಿಪ್ರದ ಜೀವಜಡಗಳೆಲ್ಲ ನಿಮ್ಮ। ಚಾತುರ್ಯ ಪ್ರೇರಣೆ ಸಿದ್ಧವಾಗಿರಲಿಕ್ಕೆ। ಭೂತಳದೊಳು ನಾನಾಯಾತ್ರಿ ಚರಿಸುವಾಗ। ಭೀತಿ ಬಡಲ್ಯಾಕೆ ತಾತ್ವಿಕರೆ ದೈತ್ಯರ ಗಣದಿಂದ ಇಂತಾಗುವದಲ್ಲ। ಪ್ರೀತಿವಂತರು ನೀವು ನಾನನ್ಯನೇ। ಜಾತಕವರ್‍ಯಾರಭ್ಯ ಅಂದಿನ ಪರಿಯಂತ। ಯಾತಕಾಲೋಚನೆ ಸರ್ವರಿರಲು। ಆತುಮದೊಳಗೆ ಸತ್ವ ರಾಜಸ ತಾಮಸ। ಗಾತುರಗೋಳಕ ನಿಮ್ಮ ದೇಹ। ಈ ತೆರದಲಿ ಮೂರು ವಿಧವಾಗಿ ಸಮಸ್ತ ಭೂತದೊಳಗೆ ನೀವು ಪೊಂದಿರಲು। ಭೀತಿ ಎನಗೆ ಉಂಟೆ ಎಲ್ಲಿದ್ದರು ಕೇಳಿ। ಮಾತ್ರಕಾಲವಾಗೆ ಬಲು ಸೌಖ್ಯವೆ। ಗೋತುರತರು ಗುಹ ವನಾರಣ್ಯ ಪೊದೆಮಿಕ್ಕ। ಭೀತಿಗಳಿರಲೇನು ನಿಮ್ಮ ಬಲವು। ಸ್ವಾತಂತ್ರಪುರುಷ ಶ್ರೀ ವಿಜಯವಿಠಲರೇಯನ। ದೂತನಾದವನಿಗೆ ಭಯವಿಲ್ಲ ಭಯವಿಲ್ಲ ॥೩॥

### ಅಟ್ಟತಾಳ

ದೇಶ ಕಾಲ ಕರ್ಮ ಗುಣ ವಿಚಾರಾಚಾರ। ಭಾಷೆ ರೂಪ ಕ್ರಿಯ ಭೇದವಾದರೇನು। ದೋಷದೂರರೆ ನೀವು ತತ್ತತ್ತಸ್ಥಾನದಲ್ಲಿ। ವಾಸವಾಗಿದ್ದು ನಂಬಿದ ಜನರ ಮನೋ। ಪಾಸನೆ ಪ್ರಕಾರದಲ್ಲೀಸುತಿರಲಿಕ್ಕೆ ಏಸುಬಗೆಯಿಂದ ಚಿಂತಿಸೆ ಸಲ್ಲದು। ಈ ಶರೀರವೇ ನಿಮ್ಮ ಚರಣಕ್ಕೆ ಅರ್ಪಿಸಿ। ದಾಸದಾಸನೆಂದು ತಲೆವಾಗಿಕೊಂಡಿಪ್ಪೆ। ಲೇಸು ಹೊಲ್ಲೆಗಳೆಲ್ಲ ನೀವಿತ್ತದಹುದು। ದೇಶಕಾಲಾದಿಯಗೊಡಿವೆ ಎನಗೆ ಯಾಕೆ। ಭಾಸುರಕೀರ್ತಿ ಅಪಕೀರ್ತಿ ನಿಮ್ಮದೆ ಸರಿ। ಈಸುದಿವಸ ನಾನು ಬದುಕಿದಕೆ ಎ। ನ್ನಾಶೆ

ಸಿದ್ಧಿಸಲಿ ಉತ್ತಮರ ಸಂಗತಿಯಿಂದ। ಕೋಶ ಭಂಡಾರಾದಿ ಅಹಿಕ ಬೇಡುವದಿಲ್ಲ। ಸಾಸಿರಕೆ ನಿಮ್ಮ ಪ್ರಸಾದವಾಗಲಿ। ಸಾಸಿವಿಕಾಳಷ್ಟು ನಿಮ್ಮವಿನಾ ವಾಗಿ। ದ್ವೇಷದೂಷಣೆ ಸ್ನೇಹಮಾಡುವರೆ ಇಲ್ಲಾ। ಲೇಶಕಾಲದಿಂದ ಮಹಕಾಲ ಪರ್ಯಂತ। ಈಶನೊಬ್ಬನು ಕಾಣೊ ಸರ್ವರ ಪ್ರೇರಕ। ಕಾಶಿಪುರಾಧೀಶ ವಿಜಯ ವಿಠಲ ಸ। ರ್ವೇಶನ ತೋರಿಸಿ ಕೊಡುವದು ಸರ್ವದಾ ॥೪॥

## ಆದಿತಾಳ

ಶರಣು ಜಯಂತ ಮಿತ್ರ ಮನು ಪ್ರಾಣ। ಧರುಣಿ ವರುಣ ಮರುತ ಬಾಂಧವ ವಾಯು ಗಣಪ ಪಂಚ। ಮರುತ ತರಣಿ ದಿಗ್ದೇವ ದಕ್ಷ ಅಶ್ವಿನಿಯರು ಇಂದ್ರ ಹರ ಶೇಷ ಗರುಡ ವಾಯು ಬ್ರಹ್ಮ ಲಕುಮಿದೇವಿ। ಪರಮ ಕರುಣದಿಂದ ಪ್ರತಿ ಪ್ರತಿ ದಿನದಲ್ಲಿ। ಪೊರೆವುತ್ತ ಬರುವದು ಭಕ್ತಗೆವೊಲಿದು ಎಲ್ಲ। ಚಿರಕಾಲದಲಿ ನಿಮ್ಮ ಸ್ಮರಣೆ ಪಾಲಿಸಿ ಪುಣ್ಯಶರಧಿಯೊಳಿಡುವದು ಹರಿಮೆಚ್ಚುವಂತೆ ಎನ್ನ। ಕರಚರಣಾದಿಗಳಲ್ಲಿ ವ್ಯಾಪಾರ ನಿಮ್ಮದು। ಹಿರಿದಾಗಿ ಪೇಳುವದೇನು ತಾತ್ವಿಕ ಜನರೆ। ಮೊರೆ ಹೊಕ್ಕೆ ನಿಮ್ಮ ಪಾದಮನೋವಾಚ ಕಾಯದಲಿ। ತ್ವರಿತದಲಿ ಎನ್ನ ಮನೋಭೀಷ್ಟಿಯಾಗಲಿ। ಪುರಂದರನುತ ನಮ್ಮ ವಿಜಯ ವಿಠಲರೇಯನ। ಚರಣ ಕಾಣುವಯೋಗ ತೋರಿಸಿಕೊಡುವದು ॥೫॥

## ಜತೆ

ಜಗತ್ತಿನ ವ್ಯಾಪರ ನಿಮ್ಮಿಂದಾಗುವದು ಪ ।
ನ್ನಗಶಾಯಿ ವಿಜಯ ವಿಠಲನಲ್ಲಿ ಮನವಿರಲಿ ॥೬॥



# ಸುಳಾದಿ-೨೫

(ಇಂದ್ರಿಯಾಭಿಮಾನಿ ದೇವತೆಗಳ ವ್ಯಾಪಾರ ಶ್ರೀಹರಿ ಸ್ವಾತಂತ್ರ ಪ್ರಮೇಯ)

ವಿಷಯಂಗಳಲ್ಲಿಚರಿಸಿದರೂ. ಹರಿಸ್ವತಂತ್ರ ಕರ್ತೃನೆಂಬ ಜ್ಞಾನದಿಂದ ಶ್ರೀಹರಿಪೆಸರುಗೊಂಡರೆ ವಿಷಯಾದಿಗಳುಲೇಪವಾಗದೆ ಪುಣ್ಯವೇ ಬರುವುದು

## ರಾಗ-ಭೈರವಿ ಧ್ರುವತಾಳ

ನುಡಿಸುವೆ ನಿರ್ಣಯದಲ್ಲಿ ನಿನ್ನ ಕ್ರೀಡೆಯ ತಿಳಿದು। ಸಂಕಿರುಣ ಉಳ್ಳವರ ಕೈಯ್ಯಪಿಡಿದು। ಪೂರ್ಣ ಗಣ್ಯಗುಣಾರ್ಣವ ನವಮೋಹನ್ನ। ಸ್ವರ್ನಜ್ಯೋತಿ ಸಕಲ ಜೀವ ಜಡರ ಒಡಿಯಾ। ವರ್ನಿಸಬಲ್ಲೆನೆ ನಿನ್ನ ಮಾಯಾ ನಿತ್ಯ। ವರ್ನಾದಲ್ಲಿ ತತುನಾಮಾದಲ್ಲಿ ವರ್ನಾ। ವರ್ನದಿಂದ ಕರಸಿಕೊಂಬುವನೆ। ಸೂಪರ್ನವಾಹನ ಧರ್ಮಸ್ಥಾಪ ಚತುರ। ವರ್ಣಾಶ್ರಮದಲ್ಲಿ ನಿನೇ ನೇಮನನಾಗಿ। ನಿರ್ಣಯ ಕರ್ಮಂಗಳ ಮಾಡಿ। ದುರ್ನಡತಿಯ ಬಿಡಿಸಿ ಸಾಧನ ಸಂಪತ್ತು। ಪೂರ್ಣವಾಗಿ ಮಾಡಿಸುವ ವಧುಸೂದನ। ಕರ್ನದ್ವಾರದಿ ಪೊಕ್ಕ ಬಲುಕಾಲದ ಕರ್ಮ। ಚೂರ್ನ ಮಾಡಿ ಕಳೆವ ಚತುರ ವಟದ। ಪರ್ನಪರಿಯಂಕ ವಿಜಯ ವಿಠ್ಠಲ ಸು। ವರ್ನ ಸಂತತ ಮುಖ್ಯ ಪ್ರತಿಪಾದ್ಯವೇದ್ಯಾ ॥೧॥

## ಮಟ್ಟತಾಳ

ನಿನ್ನ ಕಿರೂತಿ ನಿನ್ನ ಮೂರುತಿ। ನಿನ್ನ ಕೀರ್ತನೆ ನಿನ್ನ ಪ್ರಾರ್ಥನೆ। ನಿನ್ನ ಚರಿತೆ ನಿನ್ನ ವಾರುತೆ। ನಿನ್ನ ಶಕುತಿ ನಿನ್ನ ಯುಕುತಿ। ನಿನ್ನ ವ್ಯಾಪುತಾ ನಿನ್ನ ಗುಪುತ। ನಿನ್ನ ವ್ಯಕ್ತಿ ನಿನ್ನ ಭಕುತಿ। ನಿನ್ನ ಧೈರ್ಯ ನಿನ್ನ ಶೌರ್ಯ। ನಿನ್ನ ಕಾರ್ಯ ನಿನ್ನ ಚರಿಯ। ನಿನ್ನ ಧೊರೆತನ ನಿನ್ನ ಹಿರೆತನ। ನಿನ್ನ ರೂಪ ನಿನ್ನ ಸಲ್ಲಾಪ। ನಿನ್ನ ದಯ ನಿನ್ನ ಸಹಾಯ। ನಿನ್ನ ಸ್ನೇಹ ನಿನ್ನ ಮೋಹ।

ನಿನ್ನ ನಿರ್ಗುಣ ನಿನ್ನ ತ್ರೈಗುಣ। ನಿನ್ನ ಧರ್ಮ ನಿನ್ನ ವರ್ಮ। ನಿನ್ನ ಧೈರ್ಯ ನಿನ್ನ ವೀರ್ಯ। ನಿನ್ನ ಸಿದ್ಧಿ ನಿನ್ನ ಬುದ್ಧಿ। ನಿನ್ನ ವಿನೋದಾ ನಿನ್ನಾನಂದಾ। ನಿನ್ನ ನೋಟ ನಿನ್ನ ಆಟ। ನಿನ್ನ ಭಯವು ನಿನ್ನ ನಯವು। ನಿನ್ನ ಪೊಳವು ನಿನ್ನ ಕಳವು। ನಿನ್ನ ಹಮ್ಮು ನಿನ್ನ ಸೊಮ್ಮು। ನಿನ್ನ ಕೋಪ ನಿನ್ನ ತಾಪ। ನಿನ್ನ ಕುರುಹು ನಿನ್ನ ಅರುಹು। ನಿನ್ನ ಕರುಣ ನಿನ್ನ ಕರಣ। ನಿನ್ನ ಬಗೆ ನಿನ್ನ ನಗೆ। ಇನ್ನು ಎಣಿಪರಾರು ಅನಂತ ಅನಂತ। ಆನಂದನಂದಾ ಅನ್ನ ಆನಂದ। ಪುಣ್ಯಗ್ರಣ್ಯ ಅನಿರ್ವಿಣ್ಯ। ಧನ್ಯವನಧಿ ಕನ್ಯಾಪತಿ। ಸೌಜನ್ಯ ಅನುಗುಣಾ ಮಾನ್ಯ ಚನ್ನಾಗಿಪ್ಪ। ವಿಜಯ ವಿಠಲ ಅನಂತರೂಪ ಅನಂತ ರಮಣ ॥೨॥

## ತ್ರಿವಿಡಿತಾಳ

ಹಿಂದೆ ಈ ಶರೀರದೊಳು ಮನ ಹತ್ತು। ಇಂದ್ರಿಯಂಗಳು ಅಲ್ಲಿ ತದ್ಗತಿವಾಗಿಪ್ಪ। ನಂದ ತಾತ್ವಿಕರಯ್ಯಾ ಬೊಮ್ಮಾದಿಗಳ ಸಹಿತ। ಒಂದೊಂದು ವ್ಯಾಪಾರದಲ್ಲಿ ಸ್ಥಿರವಾಗಿ। ಪೊಂದಿದ್ದರಲ್ಲದೆ ತೊಲಗಿ ಪೋದವರಲ್ಲ। ಅಂದೆ ಇಂಥಾದ್ಯಾಕೆ ಆಗಾದನೊ। ಇಂದಿರಾಪತಿ ನೀನೆ ಇದ್ದು ಇಲ್ಲದಂತೆ। ಮಂದಮತಿಗೆ ತಿಳುಪದಲಾಡಿದೊ। ಇಂದು ವ್ಯಕ್ತನ ಮಾಡಿ ಎನ್ನೊಳಗೆ ನೀನು। ನಿಂದು ಪೂಜೆಗೊಂಬೆನೆಂಬ ಹರುಷದಲಿ। ಕುಂದದೆ ಜಗದೊಳು ತೋರಿದಂತಾಯಿತು। ಅಂದಿದ್ದವನಲ್ಲದೆ ಪೊಸದಾದಿನೆ। ಸಂದೇಹಸಲ್ಲದು ಎನಗೆ ನಿನ್ನ ಲೀಲೆ। ಬಿಂದುಮಾತುರ ನೀನೆ ತಿಳುಹಲಾಗಿ। ಗಂಧ ಕಸ್ತೂರಿಲೇಪಾ ವಿಜಯ ವಿಠಲ ಹೃದಯ। ಮಂದಿರದೊಳಗಿಪ್ಪ ಪರಮಪಾವನ ರೂಪ ॥೩॥

## ಅಟ್ಟತಾಳ

ಇದರಿಂದಲಿ ಜನರು ಕರದು ನಿತ್ಯಾ। ಮಧುರೋಕ್ತಿಯಿಂದ ಭೋಜನ ಮಾಡಿಸಿದರೆ ಹತ್ತದು। ಎಂದು ನಾನಿದು ಬಿಟ್ಟಿದರೆ ಮೊದಲಿಗೆ

ಸುಖ ಬಂದು। ಅದನು ವಲ್ಲೆನೆಂಬ ಮನುಜ ಮತ್ತಾವಾವಾ। ಚದುರಾ
ನೀನಹುದೊ ಏನೆಂಬೆನೆ ನೀನು ಮಾ। ಡಿದ ಮಾಟಕ್ಕೆ ಬಲು
ಸೋಜಿಗವಾಗಿದೆ। ಇದೆ ಸುಖಬೇಕೆಂದು ಹಾರೈಸಿದವನಾನಲ್ಲ।
ಅಧಿಷ್ಠಾನದಲಿ ಬಂದು ಮಾಡಿ ಮಾಡಿಸುವೆ। ಸದರವಿಲ್ಲದ
ಸುಖತರವಾದರೇನು ಮ। ತ್ತದುಃಖವಾದರು ಮಹ ಒಳಿತಯ್ಯಾ। ಇದು
ಅದು ಎನ್ನ ಸ್ವಾತಂತ್ರವೆಂದೆನಲಾರೆ। ಒದಗಲಾರವು ಕೇಳು
ಪಾಪಪುಣ್ಯವೆರಡು। ಪದುಮೇಶ ವಿಜಯ ವಿಠ್ಠಲ ವಿಶ್ವರೂಪ।
ಸದಮಲನಂದ ಸಜ್ಜನಪ್ರಿಯ ಮುನಿಗೇಯ ॥೪॥

**ಆದಿತಾಳ**

ಒಂದು ಹೆಜ್ಜೆ ಇಡಲು ಒಂದು ಮಾತಾಡಲು। ಒಂದು ವಸ್ತಾ
ಪಿಡಿಯಲು ಒಂದು ತುತ್ತು ಮೆಲ್ಲಲು। ಒಂದೊಂದು ಈ ಪರಿ
ಅಂದವಾದರು ನಿನ್ನ ನಿನ್ನಿಂದಾದೆನೊ। ಚಂದವಾಗಿ ನೋಡೊ
ಒಂದೊಂದರೊಳಗೆ ಬಹು। ಮಂದಿಯ ವ್ಯಾಪಾರ ಪೊಂದಿರಲಾಗಿ ನೀ।
ನಂದ ಬಗೆ ಏನೊ ವಂದಿಸುವೆನೊ ನಮ್ಮ ವಿಜಯ ವಿಠಲರೇಯ।
ಮುಂದನಾದವನಿಗೆ ಬಂಧನದೊಳಗಿಡುವೆ ॥೫॥

**ಜತೆ**

ವಿಷಯಂಗಳಲ್ಲಿ ಚರಿಸಿದರೇನೊ ನಿನ್ನ ।
ಪೆಸರುಗೊಂಡರೆ ಪುಣ್ಯಾ ವಿಜಯ ವಿಠ್ಠಲರೇಯಾ ॥೬॥



## ಸುಳಾದಿ–೨೩

ಪ್ರಮೇಯ ಜೀವ ಅಸ್ವಾತಂತ್ರ, ಮನಸ್ಸು ಜಡ ತತ್ಪ್ರೇರಕ ದೇವತೆಗಳು ಅಸ್ವಾತಂತ್ರರು ದೇವತೆಗಳಿಗೆ ರುದ್ರ, ರುದ್ರನಿಗೆ ಪ್ರಾಣ ಪ್ರಾಣನಿಗೆ ಮುಖ್ಯ ಪ್ರೇರಕ ಶ್ರೀ ಹರಿಯು.

### ರಾಗ- ಭೂಪಾಳ ಧ್ರುವತಾಳ

ಅನಾದಿಯಿಂದ ಸುಖ ರೂಪವಾಗಿದೆ। ನಾನಾಪ್ರಕಾರದಿಂದ ನೋಡಿದರು। ಏನೆಂಬೆ ಸೋಜಿಗ ಸಂತತ ತೋರುತಿದೆ। ಜ್ಞಾನವಂತನಾಗಿ ಗುಣಿಸಿದರೂ। ನಾನೆ ಪಾಪಪುಣ್ಯಮಾಡುವೆನೆಂದು ನಿ। ಧಾನದಿಂದಲಿ ಪೇಳುವದು ಎತ್ತ। ಆನಂದವಾದ ಸ್ವರೂಪ ಭೂತಕ್ಕೆ ಅ.ಜ್ಞಾನವೆಲ್ಲಿದೊ ಸತ್ವ ಗ್ರಂಥದಲ್ಲಿ। ಈ ನುಡಿ ಲಾಲಿಪುದು ಪ್ರಕೃತಿ ವಿಕಾರದೇಹ। ಮಾನಾಭಿಮಾನವೆಂಬಿಯಾ ಗುಣಿಸಿದರು। ಕಾಣೆನೊ ಎಂದಿಗೆ ಜಡಕೆ ನಿಯಂತವು। ಮಾಣೊ ಈ ಮಾತು ಮತ್ತೆ ಕಾಲಕರ್ಮ। ಏನೇನು ಇದ್ದರು ಯಾತಕ್ಕೆ ಪ್ರಯೋಜನಾ। ವಾಣಿ ವ್ಯರ್ಥವಲ್ಲದೆ ಅನುಭವವೆ। ಕಾಣಿ ತೂಕವಾದರು ಪಾಪಪುಣ್ಯ ಮಾಡಿಕೊಂಡು। ಪ್ರಾಣಿ ಪ್ರಾಣಂಗಳು ದುಃಖಸುಖಬಡುವಾರೆ। ಅನಂತ ಜೀವರಾಶಿ ಕೂಡಿದ ಕಾಲಕ್ಕೂ। ಮಾನಸದಲ್ಲಿ ಸ್ವಾತಂತ್ರ ಸೊಲ್ಲೆ। ಶ್ರೀನಾಥ ವಿಜಯ ವಿಠ್ಠಲವೊಲಿದು ನಿ। ರ್ಮಾಣಮಾಡಿ ಇಪ್ಪ ಒಂದೊಂದು ಬಗೆಯಿಂದ ॥೧॥

### ಮಟ್ಟತಾಳ

ಮನಸು ಮಾಡುವದೆಂದು ಲೋಕ ವ್ಯವಹಾರ। ಜನರು ಪೇಳುವರಯ್ಯಾ ವಿಚಾರಿಸಿ ನೋಡೆ। ಮನಸು ಜಡವೆಂದು ಯೋಚಿಸಿ ತಿಳಿಯದೆ। ಗುಣಿಸುವದು ಇದೆ ತಾತ್ಪರ್ಯದಲ್ಲಿ। ಅನುಮಾನ ತೀರ್ಥರ ವಚನ "ಸರ್ವೇಷಾಂ। ಮನೋ ನೇತಾ ಮನೋರೂಪಾ ಸ್ತ್ರೀ ಲೋ। ಚನ ತದ್ವಶಾ ಸರ್ವದೇವತಾಶ್ಚ ತೇನ್ನೈವ"। ಇನಿತು ಪ್ರಮಾಣಗಳು ಸಾರಿ ಪೇಳುತಲಿವೆ। ಘನಮೂರುತಿ ನಮ್ಮ ವಿಜಯ ವಿಠ್ಠಲರೇಯನ। ಗುಣವೆ ಕೊಂಡಾಡುವದು ಅಚಿಂತ್ಯದ್ಭುತನೆಂದು ॥೨॥

### ತ್ರಿವಿಡಿತಾಳ

ಮನವೆಂಬೊನಾಮ ಮಹರುದ್ರ ದೇವರಿಗುಂಟು। ಅನುದಿನ ಈತನೆ ಕರ್ಮಗಳೂ। ಮನದಲ್ಲಿ ಇದ್ದು ತಾ ತನ್ನಾಮಕನಾಗಿ। ವಿನಿಯಾ

ಮಕನಾಗಿ ಸರ್ವ ಕರ್ಮಾ। ವಿನಯದಿಂದಲಿ ಮಾಡಿಸುವ ಸಂತೋಷದಲಿ। ಇನಿತಾದರು ಬಿಡದೆ ಜೀವರಿಂದ। ಅನಳಾಕ್ಷನ ಮೇಲೆ ಶಬ್ದ ಇಡುವದಲ್ಲ। ಕೊನೆಗೆ ಆಲೋಚಿಸು ಗ್ರಂಥದಲ್ಲಿ। ಅನಿಲ ದೇವನು ಕಾಣೊ ರುದ್ರನಿಗೆ ನಿಯಾಮಕ। ಮನವೆಂಬೊ ಅಭಿದಾನ ಸೂತ್ರನಿಗುಂಟು। ಗುಣಿಸು ಈತನೆ ಬಲು ಸ್ವಾತಂತ್ರ ಬಲವಂತಾ। ನೆನದಿರು ಎಂದಿಗೆ ವಿಚಾರಿಸು। ನೆನಸು "ನಿಯಂತತ ಸ್ಯಾಚ ಪ್ರಾಣಸ್ತರೋಪಿ"। ಸನುಮತವಹುದು ಮಾರುತಗೆ ಮುಂದೆ "ತನ್ನಿಯಂತ್ರಾ ಹರಿ ಸಾಕ್ಷಾತ್ಪ ರಮಾನಂದಾ" ಲ। ಕ್ಷಣಪುರುಷನೆಂಬೋದು ಶ್ರುತಿಸಿದ್ಧವೊ। ಅನಿಮಿತ್ತ ಬಂಧುವೆ ವಿಜಯ ವಿಠ್ಠಲರೇಯಗೆ। ಮಣಿದು ನಮೊ ಎನ್ನು ನುಡಿಸುವ ಪರಮಾತ್ಮ ॥೩॥

### ಅಟ್ಟತಾಳ

ಕೇವಲ ಮನಶಬ್ದ ಸರ್ವತಂತ್ರರಾ। ಜೀವ ನಯನ ನಾರಾಯಣಗಲ್ಲದೆ। ದೇವತಿಗಳ ಮಧ್ಯ ಮತ್ತೆ ಒಬ್ಬರಿಗುಂಟೆ। ಪಾವಕಾದಿ ಪಾವಕ ನೇತ್ರ ಪಾವಕ। ಜೀವ ಬಾಂಧವ ರಾಜೀವಗರ್ಭಾದಿಗೆ। ಆವಾವ ಕಾಲಕ್ಕೆ ಸ್ವಾತಂತ್ರವಾಗಿ ಸ। ಜ್ಜೀವಾದಿಗೆ ಮಾಡಿಸುವ ಸಾಮರ್ಥಿಕೆ। ಭೂವಲಯದೊಳು ನಾಕಾಣೆ ನಾಕಾಣೆ। ಕೋವಿದನಾದವ ಏನೆಂದು ಕೊಂಬನೊ। ಭಾವದಲ್ಲಿ ತನ್ನ ಅನುಭವ ತಾಬಲ್ಲ। ಜೀವ ಪುಣ್ಯ ಕರ್ಮಮಾಡಿತೆಂದು ವೇ। ದಾವಳಿಯಲ್ಲಿ ಉಂಟೆ ಉಂಟಾದರೆ ಕೇಳಿ। ದೇವದೇವತೆಗಳು ಮಾಡಿಸಿದಂತೆ ಈ। ಜೀವ ಮಾಡಿದ ಕಾರಣದಿಂದ ಜೀವಕ್ಕೆ। ನೋವು ಪ್ರಾಪುತವಾಗಿ ಬಳಲುವದೆಂದು ಸಂ। ಭಾವನೆಯಾಗಿದೆ ಸಂಧಿ ಸಂಕಟದಿಂದ। ಕಾವ ಜನಕ ನಮ್ಮ ವಿಜಯ ವಿಠ್ಠಲ ಕೃ। ಪಾವಲೋಕನ ನಿತ್ಯಾಲೀಲಾವಿನೋದಾ ॥೪॥

### ಆದಿತಾಳ

ಚತುರವಿಂಶತಿ ತತ್ವೇಶರು ಕಾರಣವಲ್ಲ। ಗತಿಗಮನ ಸರ್ಗಾನಂದ ಆನಂದದ ಬುದ್ಧಿ। ಧೃತಿ ಕೀರ್ತಿ ಬಲ ಯಶಸು ನಿರ್ಭಯ ನಿರ್ಯೋಗ।

ಮತಿ ಬುದ್ಧಿ ಜಾಡ್ಯ ವಾಕ್ಪಟು ಸ್ಥಿತಿ ನಾನಾಶುಭಾಶುಭ। ಪ್ರತಿಪ್ರತಿಕಾಲಕ್ಕೆ ಹರಿಯಿಂದಾಗುವದೆನ್ನಿ। ತತುಶಬ್ದಗಳು ಶ್ರೀನಾರಾಯಣಗೆ ಉಂಟು। ಇತರ ಲೋಕಕ್ಕೆ ನೋಡು ಆವದು ಸ್ವಾತಂತ್ರ ಮಿತಿ ಮಾತ್ರ ಇಪ್ಪದು ಮನದಲ್ಲಿ ಬುಧರಿಗೆ ವಿ। ಹಿತವೆನ್ನು ಹರಿ ಇತ್ತ ವ್ಯಾಪಾರ ಮಾಡಬೇಕು। ಪತಿತಪಾವನ ಹರಿ ವಿಜಯ ವಿಠಲರೇಯ। ಚತುರ ಮೂರುತಿ ಕಾಣೊ ಸರ್ವದ ಮಹಾಶಕ್ತ ॥೫॥

**ಜತೆ**

ಜೀವ ಮಾಡುವ ಕರ್ಮ ಒಂದಾದರೆ ಇಲ್ಲಾ ।
ದೇವ ವಿಜಯ ವಿಠಲ ಸುರರಿಂದಾಗುವದೊ ॥೬॥

❖ ❖ ❖

## ಸುಳಾದಿ-೨೭

**(ಅನಾದಿಕರ್ಮ ವಿಷಯ, ಕರ್ಮವಿಭಾಗ ವಿಚಾರ, ವರ್ಣಾಶ್ರಮ ಜಾತಿಭೇದದಿಂದ ಕರ್ಮಾಚಾರ)**

ಅವರ ಸಾಧನಾದಿಗಳೆಲ್ಲವೂ ಶ್ರೀಹರಿಯಾಧೀನ ಅನೇಕ ವಿಷಯಗಳಿವೆ. ಅಂದರೆ ಕರ್ಮಾಕರ್ಮದಲ್ಲಿ ನಿಷ್ಕಾಮಕನಾಗಿ ಕರ್ಮನಾಮಕ ಶ್ರೀಹರಿಯ ಕರ್ತೃತ್ವ ಚಿಂತಿಪುದೇ ಕರ್ಮತಾರಕವು.

**ರಾಗ-ಭೈರವಿ ಧ್ರುವತಾಳ**

ಅನಾದಿಯಿಂದ ಬಂದ ಕರ್ಮ ಪ್ರಕೃತಿರೂಪ। ನಾನಾ ಪ್ರಕಾರ ಉಂಟು ದ್ವಿವಿಧವಾಗಿ। ಏನೆಂಬೆ ಇದೆ ಇದಕೆ ಅನಂತಕಾಲಕ್ಕೆ ಉಪಾ। ದಾನವಾಗಿ ಇಪ್ಪದು ಪಾಪ ಪುಣ್ಯ। ಹಾನಿ ವೃದ್ಧಿಗೆ ಕಾರಣ ಜ್ಞಾನ ಜ್ಞಾನಿಗಳಿಗೆ। ಮಾಣದೆ ಸಾಧನಕೆ ಬೆಂಬಲ ಪ್ರಬಲಾ। ಮೇಣು ತ್ರಿವಿಧ ಪುಣ್ಯ ತ್ರಿವಿಧ ಪಾಪಂಗಳು ಗು। ಣಾನು ಸಾರದಿಂದ ವಾಗುತಿವಕೊ।

ಪ್ರಾಣನಿಗೆ ಮಾತುರ ಕರ್ಮದಿಂದಲಿ ಪ್ರ। ಧಾನ ಸಾಧನ ಕಾಣೆ ಬಲು ವಿಚಿತ್ರ। ವೈನತೇಯುವಿಡಿದು ನೀಚಕ್ರಮದಿಂದಭಿ। ಮಾನಿಗಳಿಪ್ಪರು ಕರ್ಮದಲ್ಲಿ। ದಾನವಾಮರ ನಿಕರ ಸರಿಬೆರಿಸಿಕೊಂಡು ವೈ। ರಾನು ಬಂಧ ಬುದ್ಧಿ ಕೊಡುತಿಹರು। ಸ್ನಾನಮಿಕ್ಕಾದ ಸತ್ಕರ್ಮ ಇದರ ವಿಪರೀತ। ಕ್ಷೋಣಿಯೊಳಗೆ ಕರ್ಮದ ಸ್ಥಿತಿ ಇನಿತು। ಯೋನಿ ಎಂಭತ್ತು ನಾಲ್ಕು ಲಕ್ಷ ಜೀವಿಗಳಲ್ಲಿ। ಕ್ಷೀಣ ಕರ್ಮದಿಂದ ಚರಿಸಬೇಕು। ಆನಂದಮುಕ್ತರಿಗೆ ದೈತ್ಯಾವಳಿಗೆ ದುಃಖ। ಮಾನವರಿಗೆ ಮಿಶ್ರ ಜನಕಾಹದು। ಶ್ರೀನಿವಾಸನೆ ಮುಖ್ಯ ನಿಂಯಾಮಕ ಪ್ರಕೃತಿ। ತಾನಿಪ್ಪಳಾ ತನ್ನ ಕರುಣದಿಂದ। ಕಾಣಿಸಿಕೊಡುವಳು ಸರ್ವಜೀವಿಗಳಿಗೆ ನೀ। ದಾನ ಯೋಗ್ಯತಗುಣ ಕಾಲಾದೊಡನೆ। ಯೇಣಿಸಿ ಕರ್ಮದಿಂದ ಕಡೆ ಬಿದ್ದವರುಂಟೆ। ಅನಂತ ಜನುಮಕೆ ನೋಡಿದರು। ತಾನಾಗಿ ಹರಿವೊಲಿದು ಸಂದರುಶನವಿತ್ತು। ಪ್ರಾಣನಾಗಿ ಇದ್ದು ಅನಾವಸ್ಥಿಕ ಕರ್ಮ ಏನೇನು ಉಳಿಯದಂತೆ ಅನುಭವ ಮಾಡಿಸಿ। ಜ್ಞಾನವೆ ಕೊಟ್ಟು ಪ್ರಾರಬ್ಧ ಉಣಿಸಿ। ಭಾನುಪ್ರಕಾಶದಂತೆ ಪೊಳೆದು ನಿಶ್ಶೇಷ ದೋಷ। ಮಾನರಹಿತನ ಮಾಡಿ ಪೊಂದಿಸುವ। ಮೌನಿಗಳರಸ ವಿಜಯ ವಿಠ್ಠಲರೇಯ। ನೀನೆ ಸ್ವತಂತ್ರನೆನಲು ಕರ್ಮದಿಂದ ಕಡೆಮಾಳ್ಪ ॥೧॥

## ಮಟ್ಟತಾಳ

ನಿತ್ಯ ನೈಮಿತ್ಯಕ ಕಾಮ್ಯಕರ್ಮಗಳೆಂದು। ಸತ್ಯದಲ್ಲಿ ತಿಳಿ ಮೂರೊಂದಾನಂತ। ಬಿತ್ತರಿಸಿ ಉಂಟು ಬಗೆ ಬಗೆ ವಿವರಗಳು। ನಿತ್ಯ ಕರ್ಮವೆಂಬೋದದನೆ ಲಾಲಿಸುವರು। ಮತ್ತೆ ಸ್ನಾನ ಸಂಧ್ಯಾವಂದನೆ ಜಪ ವಿ। ಹೋತ್ರಾಹುತಿ ಯಜ್ಞ ಬಲಿಹರಣ ನಾನಾ। ಸ್ತೋತ್ರ ಶ್ರವಣ ದಾನಮಾಡುವದಿದಕೆ ಕಾ। ಲತ್ರಯದಲಿ ನಿತ್ಯ ಕರ್ಮವೆಂಬುವರಯ್ಯಾ। ದಿತ್ಯ ಕುಮುದಬಂಧು ಉಪರಾಗ ದರ್ಶ। ತೀರ್ಥ ವಿಧಿ ಯಾತ್ರೆ ಮನ್ವಾದಿ ದಕ್ಷ। ಣೋತ್ತರಾಯನ ಪೂರ್ಣಮಾಸಿ ಸಂವತ್ಸರ। ಪೈತ್ರಿಕ ಮೊದಲಾಗಿ

ಮಾಡುವ ಬಗೆ ನೈ। ಮಿತ್ಯಕ ಕರ್ಮಗಳೆಂದು ತಿಳಿದುಪಚರಿಸಬೇಕು। ವಿತ್ತ ದೇಶಕೋಶ ಗಜ ತುರಗ ರಾಜ್ಯ। ಪುತ್ರಾದಿ। ಭೋಗಾಪೇಕ್ಷಿಸಿ ಮಾಡುವದು ಅತ್ಯಂತವಾದ ಕಾಮ್ಯ ಕರ್ಮಗಳೆನ್ನು। ಬಿತ್ತರಿಸಿ ಕೇಳಿ ಇದಕೆ ಯಾಗಾದಿಗಳು। ಜತ್ತಾಗಿ ರಚಿಸಿ ಲೇಸು ಬರುವದು। ಹತ್ತಿದ ದೋಷಗಳು ಕಳಕೊಂಬುವರು ಅ। ನರ್ಥಸಾಧನಕಿದೆ ನೆಸಗಿದರೆ ಮುಂದೆ। ಸುತ್ತಿಸಿ ನರಕಾದಲ್ಲಿ ಜನುಮವೆ ತಂದಿತ್ತು। ತತ್ತಳಗೊಳಿಸದಲೆ ಕೆಟ್ಟು ಪೋಗುವದದಕೊ। ಹತ್ತೊಂದು ವ್ಯಾಪ್ತ ವಿಜಯ ವಿಠ್ಠಲರೇಯ। ಕರ್ತನಾಗಿ ಸರ್ವಕರ್ಮಕೆ ಪ್ರೇರಿಸುವಾ ॥೨॥

### ರೂಪಕತಾಳ

ನೈಮಿತ್ಯಕ ನಿತ್ಯ ಕರ್ಮವೆಂಬುವೆ ಎರಡು। ನಿಮಿಷ ಮಾಡಿದರಾಗೆ ಸಬೀಜ ನಿರ್ಬೀಜ ವಕ್ಕು। ಕ್ರಮದಿಂದ ತಿಳಿವದು ಸಬೀಜ ಕರ್ಮದವಿವರಾ। ತಮದೊಳು ಪಾಪಬೀಜಾ ಪುಣ್ಯತರುವಾಯಾ। ಸಮತಳಿಸಿ ಇಪ್ಪದು ಪುಣ್ಯಬೀಜ ಪಾಪಾ। ಶಮ ದಮೆ ಉಳ್ಳ ಮಹತ್ಮರಿಗಾದರು ಬಿಡದು। ಕುಮತಿಗಳ ಪಾಡೇನು ಇದು ಸಿದ್ಧ ಇದು ಸಿದ್ಧ। ಯಮ ನೇಮ ತಪ ದಾನ ಧರ್ಮ ದೇವರ ಪೂಜೆ। ಸುಮನಸರ ಭಜನೆ ತೀರ್ಥಯಾತ್ರೆ ಸ್ಮೃತಿ ಶಾಸ್ತ್ರ। ಗಮ ಓದು ನಾನಾ ಕರ್ಮಂಗಳು ಮಾಳ್ಪಾಗ। ಮಮಕಾರ ಅಹಂಕಾರ ಅಸೂಯಾ ಈರ್ಷ ಸಂ। ಗಮದಿಂದ ಬೆರಸಿದರೆ ಇದೆ ಪಾಪಬೀಜ ಪುಣ್ಯ। ರಮೆಯರಸ ವಿಜಯ ವಿಠ್ಠಲರೇಯಾ ಸರ್ವೋ। ತ್ತಮ ದೇವತಿ ತಾನೆ ದಯದಿಂದ ನಡಸುವ ॥೩॥

### ಝಂಪೆತಾಳ

ಉತ್ತಮ ಜನರು ತಂದೆ ತಾಯಿ ಗುರುಹಿರಿಯರು। ಮತ್ತೆ ಶರಣಾಗತರು ಸಹೋದರ ಬಾಂಧವರು। ಸುತ್ತಲಿದ್ದ ಪರಿವಾರ ನಾನಾ ಪ್ರಜೆಸತ್ವಗುಣದಲ್ಲಿ ಪ್ರವರ್ತಿಸುತಿರೆ। ಮಿತ್ರ ಮಿಕ್ಕಾದ ಜನಕೆ ಮದುವೆ

ಗೋಸುಗಾ। ಆರ್ತಜನರಿಗೆ ಬಂದ ಕ್ಲೇಶ ಕಳೆವುದಕೆ ಪುಶಿ। ಉತ್ತರದಿಂದವರ ಕಾರ್ಯ ಮಾಡಿಕೊಟ್ಟು। ತೃಪ್ತಿಯನು ಬಡಿಸಿದರೆ ಇದೇ ಪುಣ್ಯಬೀಜ ಪಾಪ। ಪ್ರತ್ಯೇಕ ಪ್ರತ್ಯೇಕ ತ್ರಿವಿಧ ಜನರಿಗೆ ನಿತ್ಯ। ಸತ್ಯವಿದು ಮುಕ್ತರಿಗೆ ಪಾಪ ಕೆಟ್ಟು ಪುಣ್ಯ ಮೊತ್ತ ಅಭಿವೃದ್ಧಿಯಾಗುವದು ದಿನದಿವಸಕ್ಕೆ। ನಿತ್ಯ ಸಂಸಾರಿಗೆ ಸಮ ತಮೋಯೋಗ್ಯರಿಗೆ। ಬತ್ತುವದು ಪುಣ್ಯಮಹ ಪಾಪವೇ ಅಭಿವೃದ್ಧಿ। ಬಿತ್ತಿದಾ ಬೆಳಸು ಉಂಡಂತೆ ಉಂಡು ಕಡಿಗೆ। ತತ್ತಸ್ಥಾನಗಳು ಸೇರುವರು ಬಿಡದಲೆ। ಇತ್ತಲಾಲಿಸು ಪುಣ್ಯಪಾಪ ಇದರಂತಾಗೆ। ಸತ್ತು ಪುಟ್ಟುವದಕ್ಕೆ ಕಾರಣವಾಗಿಪ್ಪದು। ಎತ್ತನೋಡಿದರತ್ತ ಪ್ರಬಲವಾಗಿ। ಕತ್ತೆ ನರಿ ನಾಯಿ ಮೊದಲಾದ। ಜನುಮಂಗಳು ಯಂ। ಭತ್ತು ನಾಲ್ಕು ಲಕ್ಷ ತಂದು ಕೊಡುತ್ತಾ। ಉತ್ತಮಾಧಮರು ಎಂದು ನೋಡಲೆ। ತತ್ಕರ್ಮವೃತ್ತಿ ರೂಪದಿಂದ ಗಂಟುಹಾಕಿ। ಚಿತ್ತಜಪಿತ ನಮ್ಮ ವಿಜಯ ವಿಠ್ಠಲರೇಯನ। ತೆತ್ತಿಗನಾದವಂಗೆ ದುಷ್ಕರ್ಮ ನಿರ್ಲೇಪಾ ॥೪॥

## ತ್ರಿವಿಡಿತಾಳ

ಜ್ಞಾತಾ ಜ್ಞಾತಾವೆಂಬೊ ನಿರ್ಬೀಜ ಪುಣ್ಯವಿವಿಧಾ। ಭೂತಳದೊಳಗುಂಟು ಸರ್ವಜನಕೆ। ಜ್ಞಾತಾ ನಿರ್ಬೀಜ ಪುಣ್ಯಕರ್ಮವೆಂಬೊ ಮಹಾ। ಖ್ಯಾತಿಗೋಸುಗವಾಗಿ ತಾನು ತನ್ನವರು ಸಹಾ। ಮಾತು ಮಾತಿಗೆ ಕೊಟ್ಟ ದಾನಧರ್ಮಾದಿಗಳು। ನೋತಾ ಪುಣ್ಯದಿಂದ ಜನನವಾಗೆ। ಗಾತ್ರದಿಂದಲಿ ಸುಖಬಡಿಸಿ ಆ ತರುವಾಯಾ। ಯಾತಕ್ಕೆ ಬಾರದಲೆ ಪೋಪದು ಕೆಟ್ಟು। ಈ ತೆರದಲಿ ತಿಳಿ ನಿರ್ಬೀಜದ ಪುಣ್ಯ ಜ್ಞಾತಾ ನಿರ್ಬೀಜ ಪುಣ್ಯ ತನಗೆ ರತುನಾ। ವ್ರಾತಭೂಭಣ ತೊಡಿಗೆ ಪರಿಪರಿ ಶೃಂಗಾರ। ಪೋತತನದಲಿ ಧರಿಸಿದರೂ। ಜ್ಞಾತಾವಿಲ್ಲದೆ ಕೆಟ್ಟು ಪೋಗುವದು ಇನ್ನು। ನೀತಾವಲ್ಲವೊ ಮುಂದೆ ಸಾಧನವಿಲ್ಲಾ। ಜಾತನಾದ ಮೇಲೆ ಸಬೀಜ ಕರ್ಮಗಳಿಂದ। ಪಾತಕಾ ಪುಣ್ಯಾತ್ಮನಾಗಬೇಕು। ಜ್ಞಾತಾ ಅಜ್ಞಾತಾ ನಿರ್ಬೀಜಾ ಪಾಪದ ವಿವರ। ಪ್ರೀತಿ ಇಂದಲಿ ಕೇಳಿ ಆರಂಭದಿ।

ಯಾತ್ರೆ ತೀರ್ಥಕೆ ಪೋಪಕಾಲದಲ್ಲಿ ಸ್ನಾನ। ಪ್ರಾತರ ಸಾಯಂಕಾಲ ವಿಹಿತ ತೊರೆದು। ದೂತನಂತೆ ತಿರುಗಿ ಬರುವ ಮಾನವ ಮುಂದೆ। ಭೂತಿರಹಿತನಾಗಿ ಪುಟ್ಟಿ ತಾನು। ಪಾತಕಮಾಡದೆ ಸತ್ಕರ್ಮ ಮಾಳ್ಪನಿದೂ। ಜ್ಞಾತಾ ನಿರ್ಬೀಜಾ ಪುಣ್ಯ ಇದೆ ಎಂಬೋರು। ಜ್ಞಾತಾರಹಿತ ನಿರ್ಬೀಜ ಪಾಪವೆಂಬೋದು। ನೇತ್ರದಿಂದಲಿ ಕಾಣದೆ ಮಾರ್ಗವಿಡಿದುಪೋಪಾ। ಆತುರದಲ್ಲಿ ಕ್ರಿಮಿಕೀಟಕಾದಿಗಳೆಲ್ಲಾ। ಘಾತಿಸಿದ ಪಾಪಾಬಂದದರಿಂದಾ। ತಾ ತರುಳನಾಗಿ ಮತಿ ಇಲ್ಲದೆ ಹೇಯು। ಪೂತಿ ಗಂಧದೊಳು ಪೊರಳುವನೂ। ಈ ತೆರದಲಿ ಉಣಿಸಿ ಕೆಟ್ಟು ಪೋಗುವಾದು ಇ। ನ್ಯಾತಕೆ ಸಂಶಯವೊ ಇದೆ ನಿರ್ಬೀಜ ಪಾಪಾ। ಜ್ಞಾತಾ ಶೂನ್ಯನಾಗಿ ಮಾಡಿದರೆ ಇದೆ ಫಲವೊ। ಧಾತ್ರಿಯೊಳಗೆ ಸಬೀಜ ಪುಣ್ಯಪಾಪಗಳೆರಡೆ। ದೈತೇಯಾ ಸುರರಿಗೆ ಜನುಮಾಜನುಮಾ। ಕೌತುಕ ತೋರುತ್ತ ಸುಖದುಃಖ ಮುಖದಿಂದ। ಶೀತೋಷ್ಣ ಉಣಿಸುವದು ತೊಲಗಗೊಡದೆ। ದ್ವೈತಜನಕೆ ಪುಣ್ಯಮಾಯಿಗಳಿಗೆ ಪಾಪಾ। ವ್ರಾತವಕ್ಕು ಕಾಮ್ಯ ನಿಷ್ಕಾಮ್ಯವು। ಸೋತ್ತಮರು ಜ್ಞಾನ ಪೂರ್ವದಲ್ಲಿ ಬಿಡದೆ। ಪಾತಕ ಪುಣ್ಯಗಳು ಮಾಡಿದರಾಗೆ। ಖ್ಯಾತಿಗೊಂಬ ದುಃಖ ಇಷ್ಟಾನಿಷ್ಟ। ಭೀತಿಯಿಂದಲಿ ಬಲು ದೇಹಗಳ ತಂದಿತ್ತು। ಜೋತಿಯಿಂದಲಿ ಜ್ಞಾನೋತ್ತರ ಕಾಲಕ್ಕೆ। ಯಾತನಿ ಜನರಿಗೆ ಪಾಪ ಪೋಗುವದು ಅ। ದ್ವೈತಕೆ ಬಲವಾಗಿ ದುರ್ಮತಿ ಕೊಡು ತಾ। ನೋತ ನಿಷ್ಟ ಪುಣ್ಯ ತನ್ನವರಿಗೆ ಸತ್ಕರ್ಮ (ಪಾ) ಪಥಕೆ ಸಾಹಾಯ ಭೂತವಾಗುವದು। ನೀತಿಳಿ ಇಷ್ಟಾರ್ಥ ಪುಣ್ಯವೆಂಬೊದೆ ಗತಿಗೆ। ಮಾತುರವಾಗಿದ್ದ ಅಪರೋಕ್ಷಕೆ। ಕೀರ್ತಿಸುವೆನು ಕಾಮ್ಯ ಕರ್ಮದ ಆಚರಣೆ। ಕೀರ್ತಿ ಪುರುಷರಿಗೆ ಬಿಡದು ಮುಂದೆ ಜ್ಞಾ। ನೋತ್ತರದಿ ಮಾಳ್ಪ ಇಷ್ಟಾನಿಷ್ಟ ಪುಣ್ಯ। ಜಾತ ಮೊದಲು ಪುಣ್ಯ ಆನಂದಕಭಿವ್ಯಕ್ತಿ। ಪೂತೂರೆ ಅನಿಷ್ಟ ಪುಣ್ಯವೆಂಬೊದೆ ಲಿಂಗ। ಗಾತುರಕೆ ಕಾರಣ ತನ್ನಾಪ್ತರಿಗೆ ಸಹಾಯಾ। ಆ ತಮೊಯೋಗ್ಯರಿಗೆ ಪಾಪ ಸೇರುವದು। ಮ। ಹಾತಿಶಯವಿದೆಕೇಳು ನಿಷ್ಕಾಮ್ಯ ಕರ್ಮಗಳು। ಮಾತ್ರಾರಹಿತ ನಮ್ಮ ವಿಜಯ ವಿಠಲರೇಯ। ವಾತನಿಂದಲಿ ಸಬೀಜ ಕರ್ಮಗಳ ಮಾಡಿಸುವ ॥೫॥

## ಧ್ರುವತಾಳ

ಖೂಳಜಾತಿಗೆ ಇಷ್ಟಾನಿಷ್ಟಾ ಪಾಪವೆ ಉಂಟು। ವಾಲಾಯ ಪುಣ್ಯ ಉಂಟು ಇಷ್ಟಾ ಎನಿಸದು ಕಾಣೊ। ಮೇಲು ಇವರ ಜ್ಞಾನ ಪೂರ್ವ ಜ್ಞಾನೋತ್ತರದಲ್ಲೆ। ಬೀಳೂ ಕೈಕೊಂಬುವರು ಮುಕ್ತರು ಸುಕೃತವಾ। ಪೇಳುವೆ ದ್ವಿವಿಧ ಇಷ್ಟಾನಿಷ್ಟ ಪಾಪಗಳು ತಾ। ಜಾಲಕೆ ಸಹಾಯ ಭೂತಾ ಅಪರೋಕ್ಷಕೆ ನಿಮಿತ್ತಾ ವಿ। ಶಾಲ ದುಃಖಕೆ ಅಭಿವೃದ್ಧಿಗೆ ಕಾರಣಾ। ನೀಲ ಚಿದ್ರೂಪದವರ ಸುದ್ಧಿ ಈ ಪರಿ ಕೇಳಿ। ಬಾಳುತ್ತ ಲಿಪ್ಪರು ಸಂಸಾರಾವಸ್ಥೆಯಲ್ಲಿ। ಸೀಲ ನಡತೆಯಿಂದ ಸಾಧನಾಮಾಡುತ್ತ ಆಳಾಗಿ ಅರಸಾಗಿ ವೈರಾನುಬಂಧದಿಂದ। ವಾಲಗ ಮಾಡುವರು ತ್ರಿಗುಣವನ್ನೆಬೆರಿಸಿ। ಭೂಲೋಕದೊಳಗಿದು ವೈಚಿತ್ರ ಕರ್ಮ ಧರ್ಮ। ಸಾಲು ಸಾಲಾಗಿ ಅವೆ ಒಂದೊಂದಕ್ಕಾನಂತ। ಕಾಲ ಮೂರುತಿ ವಿಷ್ಣು ವಿಜಯ ವಿಠ್ಠಲರೇಯಾ। ಮೂಲ ಸ್ವಭಾವ ನೋಡಿ ಪ್ರೇರಣೆ ಮಾಡುವಾ ॥೬॥

## ರೂಪಕತಾಳ

ಪ್ರಾರಬ್ಧಾಗಾಮಿ ಸಂಚಿತ ಕರ್ಮಗಳು ಬಲು। ಮೂರು ಪರಿಉಂಟು ಸರ್ವ ಜೀವಿಗಳಿಗೆ। ಬೇರೆ ಬೇರೆ ಅವರವರೋಗ್ಯ ತಾನು। ಸಾರವಾಗಿ ಉಂಡು ಅನುಭವಿಸಿ ಈ ಕುಕರ್ಮ। ತೀರಿಸಬೇಕಲ್ಲದೆ ಸುಮ್ಮನಿರೆ ಪೋಪದೆ। ಆರಿಗಾದರು ಸತ್ಯಸಾಧನದಿಂದಲಿ। ಆರೊಂದಾ ವರ್ಣದ ಬೊಮ್ಮಾಂಡವನು ಪುಟ್ಟಿ। ದಾರಭ್ಯವಾಗಿ ದೇಹವ ತೆತ್ತುವಡನೊಡನೆ। ಕ್ರೂರ ಅಕ್ರೂರ ಕರ್ಮಕೆ ತೊಡಕಿ ಬಿಡದೆ ಉದಾರತನದಲ್ಲಿ ಮಾಡಿದ ಕರ್ತವ್ಯ। ಸಾರಿಸಾರಿಗೆ ಉಂಡು ನೀಚೋಚ್ಚ ಯೋನಿಗಳ। ಸೇರಿ ಸಂತಾಪವನು ಬಿಟ್ಟು ನರಕಬಾಧೆ। ಭಾರಣಿಯಿಂದಲಿ ತಮತಮ್ಮ ಸುಖದುಃಖ। ಪೂರೈಸಿ ಸಾಧನಮಾಳ್ಪ ಜನ್ಮತೋರಿ ಕೊಡುವನು। ಹಾರಿಮನಸೂ ಕಾಯನ್ಮುಖ। ಕಾರುಣ್ಯದಲಿ ವೊಲಿದು ಲೀಲೆಯಿಂದ। ಪೊರೆವನು ಜನನವಾಗಿ ಪ್ರತಿ ಪ್ರತಿಕ್ಷಣ ಕ। ಪಾರ ಕರ್ಮಗಳು ಮಾಡಿದದಕೆ

ಕರ್ಮ ವಿ। ಚಾರಣಿ ಸಪ್ತಋುಷಿಗಳ ಜ್ಞಾನದಂತಾವಾಗೆ। ನೂರು ಇನ್ನೂರು ಮುನ್ನೂರು ನಾನೂರೈದು। ನೂರು ಸಾವಿರ ಲಕ್ಷ ಕೋಟಿ ಜನ್ಮಂಗಳು ವಿ। ಸ್ತಾರವಾಗಿ ಕಟ್ಟಿ ಉಳಹಿ ಅದರೊಳು ಕೆಲವು। ತೀರಿ ಪೋಗುವಂತೆ ದುಃಖ ಸುಖಗಳು ಬಡಿಸಿ। ಹಾರೈಸು ಅಲ್ಲಿಂದ। ಹತ ಶೇಷಕರ್ಮಗಳು। ಮ್ಯಾರೆ ಇಲ್ಲದಿರೆ ಅದರೊಳಗೊಂದೊಂದು। ಧಾರಳವಾಗಿರೆ ನೋಡಿ ಜನ್ಮಂಗಳು। ನೂರಾರು ಕಟ್ಟಿ ಉಣಲೆಂದು ತೀವ್ರಕರ್ಮ। ಧಾರಣಿಯೊಳ ಹಾಕಲವನು ಪುನರಪಿ ಪುಟ್ಟಿ। ಚಾರುಮತಿಯಿಂದ ಮಾಡಲು ಈ ತೆರದಿ। ಈರಾ ಜನರು ಒಂದು ಸಾಧನ ದೇಹವಧರಿಸಿ। ಮೂರು ಗುಣದಿಂದ ಮಾಡಿ ಕರ್ಮದ ಗುಣಿತಾ। ಮೀರಿತು ಅನಾವಸ್ಥಿ ಎಂದೆನಲು ಶ್ರೀಹರಿ। ಕಾರುಣ್ಯದಿಂದಲಿ ಉಪರಮ ಉಪಾಯ। ಆರಿಗಾದರು ಉಂಟೆ ಅಖಿಳ ಜೀವರ ನಡಿವೆ। ಕಾರಣ ಅಂತಃಕರಣಕೆ ಶುದ್ಧಿ ಶುಭಕರ್ಮ। ಸಾರಾ ಹೃದಯ। ರ ಸದ್ಗತಿಗೆ ಕರಣ ಶುದ್ಧಿ। ಕಾರಣವಾಗುವದು ಸಜ್ಜನ ಸಂಗತಿಯಿಂದ। ವೀರ ವೈಷ್ಣವ ಸಚ್ಛಾಸ್ತ್ರಕೆ ಅನುಕೂಲ। ದಾರಿಯಾಗುವದಯ್ಯಾ ಆ ಮೇಲೆ ಮನನ ವಿ। ಚಾರ ನಿಜಾಸನ ಧ್ಯಾನ ನಿಶ್ಚಯ ತತ್ವ। ತಾರತಮ್ಯದಿಂದ ಹರಿಗುಣೋಪಾಸನೆ। ಮೂರೊಂದು ಗುಣವಿಡಿದು ಕ್ರಮಾನುಸಾರದಲಿ। ಪ್ರಾರಬ್ಧದಲಿ ಸಂಖ್ಯಾ ಯೋಗಾ ಆ ತರುವಾಯ। ಈ ರೀತಿಯಲಿ ತಿಳಿದು ಧೃಡವಾಸನ ಮಯಾ। ಪರೋಕ್ಷಜ್ಞಾನ ಅಪರೋಕ್ಷದಿಂದಲಿ ಜಡಾ। ಕಾರ ಮೂರುತಿ ನೋಡಿ ಅಲ್ಲಿಂ ದತ್ತ ಪ್ರಾಜ್ಞ। ಮೂರುತಿಯನು ಕಾಣಬೇಕು ಈ। ಪ್ರಕಾರ ತಾರಮಂತ್ರದಿಂದ ಅಂತರಂತರ ಉಂಟು। ಧೀರರಿಗೆ ತಿಳಿವದು ಸಾಧನ। ಸಾಧ್ಯಭಾವಾ। ವೈರಾಗ್ಯ ವೈರಾನುಬಂಧ ಜ್ಞಾನ ಮುಖ್ಯ। ವಾರ ವಾರಕೆಬೇಕು ಇಹಪರದಲಿ ಬಿಡದೆ। ವಾರಿಜಭವ ತತ್ವೇಶರು ಮಿಕ್ಕಾದವರಿಗೆ। ಮೀರಲೋಶವಲ್ಲ ಕರ್ಮ ಕಾರಣಗಳಾ। ಕಾರವಂತನಾಗಿ ನಡಕೊಂಡು ತಮತಮ್ಮ। ಸ್ವರೂಪ ಸುಖದಲ್ಲಿ ಸುಖಿಸುತಿಪ್ಪರು ಕೇಳಿ ಮಾರಮಣ ವಿಜಯ ವಿಠ್ಠಲ ಭೀತಿಯಿಂದ। ಶಾರೀರಧಾರಿಗಳು ಪ್ರವರ್ತಕಮಾಡುವರು॥೭॥

## ಝಂಪಿತಾಳ

ಅನಪರೋಕ್ಷ ಕಾಲದಲಿ ಮಾಡಿದ ಕರ್ಮ। ಜನನ ಗರ್ಭಾನರ ವಾಸದಲಿ ಬಿದ್ದು। ಅನುಭವಿಸಲಾಗಿ ಉಳಿದ ಕರ್ಮಸಂಚಿತ। ವೆನಿಸುವದು ಸಾಧನಮಾಳ್ಪಾಗಲಿ। ಅನಿತರೊಳು ಪ್ರಾಜ್ಞನ್ನಸಂದರುಶನವಾಗೆ। ಘನ ಸಂಚಿತನಾಶವಾಗುವದು। ಇನಿತು ಲಾಲಿಸುವದು ಕ್ರಿಯಮಾಣ ಕರ್ಮಗಳು। ಮೊನೆದೋರದಲೆ ಪೋಪವು ನಿಶ್ಚಯ। ಮಿನುಗುವಾ ಪರೋಕ್ಷ ಅಧಿಕಧಿಕವಾದಂತೆ ನಾ। ಶನ ಕಾಣೊ ಪ್ರಾರಬ್ಧ ನಾನಾ ಜನುಮ। ಅನುಭವಿಸದಲ್ಲದೆ ತಾನೆ ಪೋಗುವದಲ್ಲ। ಎಣೆ ಹರಿಕರುಣವಾದಡೊಂದೆ। ದಿನದೊಳಗೆ ಪ್ರಾರಬ್ಧ ಏನೇನು ಇದ್ದರು। ಉಣಿಸುವನು ಉಪಮರ್ದವೆಂಬೊ ಸೊಲ್ಲು। ಗುಣಿಸು ಪ್ರಾರಬ್ಧಕರ್ಮದ ಸುಖ ದುಃಖಗಳು। ಹೊಣೆಯಾಗಿ ಕರ್ಮಭೂಮಿಯಲ್ಲಿ ಪುಟ್ಟಿ। ಉಣುತಲಿಪ್ಪದರೊಳಗೆ ಉಳದದೆ ತತು ತತೂ। ಜನುಮ ಪೊತ್ತು ಪೋದ ಸಂಬಂಧವೊ। ಪ್ರಣತ ಜನ ಮಂದಾರ ವಿಜಯ ವಿಠ್ಠಲರೇಯನ। ನೆನಿಸಿದ ಮನುಜಂಗೆ ಸರ್ವ ಸೌಖ್ಯಾ ॥೮॥

## ತ್ರಿವಿಡಿತಾಳ

ಅಪರೋಕ್ಷನಂತರದಿ ಮಾಡಿದ ವಿವಿಧ ಕರ್ಮ। ಸ್ವಪನ ಜಾಗ್ರತಾವಸ್ಥೆವಿಡಿದು ನಿತ್ಯಾ। ಅಪರಿಮಿತವಾಗಿ ಇದ್ದವಗೆ ಗತಿಕೇಳು। ಅಪವರ್ಗದಲಿ ಆನಂದಭಿವ್ಯಕ್ತಿಗೆ। ನಿಪುಣತನದಲ್ಲಿ ಒದಗುವದಿದೆ ಯಿಷ್ಟಾ। ಸಪುಣ್ಯವೆನಿಸುವದು ಅನಿಷ್ಟ ಪುಣ್ಯ। ಉಪಕಾರ ಮಾಡಿದ ಜನರಿಗೆ ಪೋಪದು। ವಿಪುಳವಿರಜಾಸ್ನಾನಕ್ಕೆ ಕಾರಣವಾಹದು। ಉಪಚರಿಸಿದ ಪಾಪಾವಾನಂದಕ್ಕೆ ಹ್ರಾಸ। ಸುಪವರ್ಣ ಜನರಿಗೆ ಪ್ರಾಪ್ತವ್ಯಕ್ಕೆ। ಕ್ಲಿಪುತಕ್ಕೆ ಮನುಷ್ಯಾದಿಗಳಿಗೆ ಸಿದ್ಧಾವೆನ್ನಿ। ತಪನ ಚಂದ್ರಮ ಸಾಕ್ಷಿ ಪೇಳಿದದಕೆ। ತಪಶೀಲಾನಾದರೂ ಪಾಪಕ್ಕೆರಗದೆ ಬಿಡನು। ಗುಪುತ ಇದು ಮಹಾ ಗುಪುತ ಗಹನ ಕರ್ಮ। ಅಪರಿಹಾರವಯ್ಯಾ ಒಂದಾರಂಭಿಸಿ ಒಂದು।

ಆ ಪಾಪ ಎಣಿಸಲರಿದು ವನಜಾಸನಗೆ। ಜಪ ಹೋಮ ವ್ಯಾಖ್ಯಾನ ದಾನ ಧರ್ಮ ನಾನಾ। ಉಪಸರ್ಗದಿಂದಲಿ ದೀಕ್ಷಿತನಾಗಿ। ಸಪುತ ಸಪುತ ಭುವನವೆತ್ತಿ ಆಳುವ ಪ್ರತಿ। ನೃಪತಿಯಾದರೂ ಕಲ್ಪಕಲ್ಪಕ್ಕೆ ಬಿಡದೆ ಶಪುತವಮಾಡಿ ಕರ್ಮದ ನೆಲೆಗಾಣನು। ಅಪಸ್ಮಾರಿ ನರನೆಂತು ಕಡೆ ಬೀಳುವ। ಕೃಪಣವತ್ಸಲ ವಿಷ್ಣುವಾಲಯದಲಿ ಒಲಿದು। ಕೃಪೆಮಾಡಿದರೆ ಲೇಶ ತಡವಾಗದು। ವಿಪರೀತ ಜನರಿಗೆ ತದ್ವಿಲಕ್ಷಣ ಗ್ರಹಿಸು। ಅಪರಂಪಾರ ಭಿನ್ನ ಸಿರಿ ವಿಜಯ ವಿಠ್ಠಲ ನಿತ್ಯ। ತೃಪುತನೊಬ್ಬನೆ ಕರ್ಮಬಂಧಾತೀತನು ಕಾಣೊ ॥೯॥

## ಧ್ರುವತಾಳ

ಸತತ ಕರ್ಮವನೆಸಗುವ ಮುಖಜಾ ಬಾಹುಜಾ ವೈಶ್ಯ। ಚತುರವರ್ಣದವ ಶೂದ್ರರಿವರು। ಪ್ರಥಮ ಜಾತಿಗಳನ್ನ (ನ್ನು) ತರುವಾಯ ಅನುಲೋಮ। ಪ್ರತಿಲೋಮ ಇವರಿಗೆ ನಾಮಭೇದಾ। ಕ್ಷಿತಿಸುರನಿಂದ ಪುಟ್ಟಿದ ಅನುಲೋಮರು। ಕ್ಷಿತಿಪ ವೈಶ್ಯ ಶೂದ್ರಗನ್ಯರಲ್ಲಿ। ಅತಿಶಯ ಮೂರ್ಧ್ವಾಭಿಸಿಕ್ತಾ ಅಂಬಷ್ಟ ಶೂ। ದ್ರಾದಿಯಲ್ಲಿ ಜನಿಸಿದವ ಪರಾಶವನು। ಪ್ರತಿಲೋಮಾರೆಂಬೊರಿಲ್ಲ ವಿಪ್ರಜಾತಿಗೆ ಮುಂದೆ। ಕ್ಷಿತಿಪಂಗೆ ಬ್ರಾಹ್ಮಣ ಸ್ತ್ರೀಯಳಿಂದ ಉ। ತ್ಪತ್ತಿಯಾದವ ಸೂತನೆನಿಸಿಕೊಂಬ। ಪ್ರತಿಲೋಮ ಇವನೊಬ್ಬನು ಉಳಿದೀರ್ವರು। ತ್ರಿತಿಯ ಚತುರ್ಥ ವರ್ಣದಿಂದ ಜನಿಸಿ ವಿ। ಹಿತವಾಹದು ಮಾಹಿಷ್ಯ ಉಗ್ರಕನಾಮ। ಜತೆಂಬಾಗಿ ಅನುಲೋಮರೆಂದೆನಿಸುವರು ಶಾ। ಶ್ವತವೆನ್ನಿ ವೈಶ್ಯಜಾತಿಗೆ ಈರ್ವರು। ಪ್ರತಿಲೋಮ ವೈದೇಹ ಮಾಗಧರೆತೆಂದು। ಕ್ಷಿತಿಸುರ ಭೂಭುಜರಲಿ ಪುಟ್ಟಿ ಚತುರ ವಂಶದಲಿ ಕರ್ನನೆಂಬನುಲೋಮ। ಮತಸಿದ್ಧ ಓರ್ವನೊ ಪದಜಾತಗೆ। ಪ್ರತಿಲೋಮರೆ ಸತ್ಯ ಅನುಲೋಮರೆಂಬೊರಿಲ್ಲ। ಕ್ಷಿತಿವಿಭುದ ಕ್ಷತ್ರಿಯ ಕೋಮಟಗರ। ಸುತರಲ್ಲಿ ಪುಟ್ಟಿ ಚಂಡಾಲಾಕ್ಷತಾಯೋಗವ ಎ। ನುತ ಕರಿಸಿಕೊಳ್ಳುತಲಿಪ್ಪರು। ದ್ವಿತಿಯ ಜಾತಿಗಳವರು ದ್ವಾದಶ ಜನಂಗಳು।

ಪ್ರತಿಲೋಮ ಅನುಲೋಮ ಅರ್ಧರ್ಧರೂ। ಶ್ರುತಿ ಉಕ್ತ ಕರ್ಮ
ಹಲಬರಿಗುಂಟು ಕ್ರಮವಾಗಿ। ಕೃತು ಮೊದಲಾಗಿ ಮಾಡುವ ವಿವರಾ। ಶ್ರುತಿ
ಶ್ರವಣಾದಿಯಿಂದ ಕೆಲವರಿಗೆ ಸಾಧನ। ಗತಿಗೆ ಪೋಗುವರು ಈಪರಿ ಚರಿಸಿ।
ಮೃತಭರ್ತರಿಂದ ಅನ್ಯರಿಗೆ ಜ। ನಿತವಾದವರು ಕುಂಡಗೋಳಕರು। ಇತರ
ಸಂಶಯಸಲ್ಲ ಕೂಡಿಸಿ ಎಲ್ಲ ಗ। ಣಿತ ಮಾಡಲು ಹದಿನೆಂಟು ಜಾತಿ। ಪ್ರತಿ
ಪ್ರತಿಜಾತಿಯಿಂದ ಪುಟ್ಟಿದ ಜಾತಿ ಎಣಿಸೆ। ಶತಶತನಾಲ್ಕು ಯೋನಿ
ಪ್ರಭೇದವ್ರೊ। ಶತ ಧೃತಿ ಪಿತ ನಮ್ಮ ವಿಜಯ ವಿಠ್ಠಲರೇಯ। ತುತಿಸಿದ
ಜೀವಿಗಳ ಕರ್ಮದಿಂದುದ್ಧರಿಸುವ ॥೧೦॥

### ತ್ರಿವಿಡಿತಾಳ

ದೈಶಿಕ ಕಾಲಿಕ ದೈಹಿಕ ಸ್ವಾಭಾವಿಕ। ಈಸು ಬಗೆ ಕರ್ಮ
ನಾಲ್ಕುವಿಧವ್ರೊ। ಸೂಸುತಿಪ್ಪವು ಕೇಳಿ ಅನಂತಾನಂತವಾಗಿ। ಲೇಸು
ಹೊಲ್ಲೆಗಳೆಂದು ಉಭಯಜನಕೆ। ದೈಶಿಕವೆಂಬೊದು ತೀರ್ಥಯಾತ್ರೆಗಳನ್ನು।
ರಾಸಿಪುಣ್ಯಬಪ್ಪದು ಕರಣವೆ ಸಾಕ್ಷಿ। ದೋಷವೆಂಬೊದೆ ಬೀದಿಯೊಳಗೆ
ಶಾಸ್ತ್ರಗಳು ಅ। ಭ್ಯಾಸ ಮಾಡಿಸುವವೆ ಇದೆ ನಿಶ್ಚಯಾ। ಮಾಸಮನ್ವಾದಿಗಳು
ಮಾಡುವದೆ ಕಾಲಿಕ। ಆಶ್ರಮಗಳು ವರ್ಣಾವಯಾ ಯುಗಾನುಸಾರ। ಲೇಶ
ಬಿಡದೆ ಮಾಳ್ಪದು ದೈಹಿಕ ಕರ್ಮ। ಆ ಸತ್ವ ರಾಜಸ ತಾಮಸವೆಂಬೊದೆ
ಸ್ವಾಭಾವಿಕ। ಕ್ಲೇಶಾದಿಗಳು ಉಂಟು ಸಂಸಾರದಿ। ಈ ಸಮಸ್ತ ಜನಕೆ
ಪ್ರಾಬಲ್ಯಾ ಪ್ರಾಬಲ್ಯಾ। ವಾಸೆ ಇಂದಲಿ ಕರ್ಮ ಉಣಿಸುವದು।
ಘಾಸೆಬಡಲಿ ಬೇಕು ತೀರಿ ಪೋಗುವತನಕ। ಭಾಸಾಸಾಧನ
ಮೂರ್ತಿಯಾದಮೇಲೆ। ಶೇಷ ಪ್ರಾರಬ್ಧ ಮುಗಿವಪರಿಯಂತ ವಿ।
ಲಾಸಗುಣವಿಲ್ಲದೆ ಮಿಳಿತವಿಲ್ಲ। ತ್ರೀಸಂಬಂಧಕಾಯ ಮಿಳಿತ ಜನರಿಗೆ।
ನಾಶವಾದಮೇಲೆ ನಿಜಸ್ವರೂಪ ಪ್ರ ಕಾಶ ಅಂಶದಿಂದ ಮುಕ್ತಿಲಿ ತಮತಮ್ಮ।
ಭೂಷಣ ಕರ್ಮದಲ್ಲಿ ಚರಿಸುವರು। ದಾಸಿಪುತ್ರಗೆ ಒಲಿದ ವಿಜಯ
ವಿಠಲರೇಯಾ। ದಾಸೋಹಂ ಎಂದವನ ಸತ್ಕರ್ಮದಲ್ಲಿ ಇಡುವಾ ॥೧೧॥

### ಝಂಪಿತಾಳ

ಇದೆ ಇದೆ ಪ್ರಕಾರ ಯಾವತ್ತು ಶುಭಕರ್ಮ। ವಿಧಿ ತಪ್ಪದಲೆ ತರತಮ್ಯವಿಲ್ಲದೇ। ಪದೋಪದವಿಗೆ ಮಾಡಿದರೆ ಆ ಪುಣ್ಯದಿಂದಲಿ। ತ್ರಿದಶಾದಿ ಲೋಕದಲಿ ವಾಸವಾಗಿ। ವದಗಿಬಂದ ಸುಕೃತ ಅನುಭವಿಸಿ ಅಲ್ಲಿಂದ। ಉದಭವಿಸಬೇಕು ಧಾರುಣಿಯಮೇಲೆ। ಮುದದಿಂದ ಉಂಡು ಉಂಡು ಚರಿಸುವದರೊಳಗೆ ತ್ರಿ ವಿಧ ಜೀವರಿಗೆ ಹರಿಯ ಇಚ್ಛೆಯಿಂದ। ಅದುಭೂತವಾದ ಕರ್ಮವ ಕಟ್ಟಿ ಅವರವರ। ಪದವಿಯನು ಕೊಡುವನು ಲೀಲೆಯಿಂದ। ಸದಮಲಾನಂದ ಸಿರಿ ವಿಜಯ ವಿಠ್ಠಲರೇಯಾ। ವಿಧಿನಿಷೇಧ ತನ್ನ ಮನಬಂದಂತೆ ಉಣಿಪಾ ॥೧೨॥

### ಮಟ್ಟತಾಳ

ಮುಕ್ತಿಯಲಿ ಇಹಕರ್ಮ ಪ್ರಯೋಜನವಿಲ್ಲ। ಭುಕ್ತಿ ಮೊದಲಾದ ಜಡಗಸ್ತುಗಳಿಲ್ಲಾ। ಮುಕ್ತಜನರು ಅಲ್ಲಿ ಮಾಡಿದ ಕರ್ಮಕ್ಕೆ ವ್ಯಕ್ತಿಯಾಗುವದು ಇದ್ದಾನಂದಕೆ ಸತ್ಯ। ಭಕ್ತಿಭರಿತಾನಾಗಿ ನಾನಾರೂಪದಲಿ। ಉಕ್ತಿ ಸಿದ್ಧವೆನ್ನಿ ತರತಮ್ಯವೆ ಉಂಟು। ತ್ಯಕ್ತವೈದಿಕರು ಸರ್ವರು ಅಲ್ಲೆಲ್ಲಿ। ಶಕ್ತಿ ಮೊದಲಾದ ಗುಣರೂಪವೆನ್ನಿ। ಭಕ್ತವತ್ಸಲ ಸ್ವಾಮಿ ವಿಜಯ ವಿಠಲಾ ವೀ। ರಕ್ತಿ ಇಲ್ಲದವಗೆ ಒಲಿಯಾ ಒಲಿಯ ಕಾಣೊ ॥೧೩॥

### ಅಟ್ಟತಾಳ

ಗುರುಭಕ್ತಿ ತರತಮ್ಯ ವಿಷ್ಣು ವೈಷ್ಣವ ಜ್ಞಾನ। ನಿರುತ ತದೇಕ ಧ್ಯಾನದಲ್ಲಿ ಕರ್ಮವಾ। ಚರಣೆ ಮಾಡಲಿ ಬೇಕು ಸಂಕಲ್ಪ ಮೌನವು। ಸ್ಪರಶ ಸಂಭಾಷಣ ಭೋಜನೇಕಾಸನ। ಕರಣ ಶುದ್ಧಿಯಿಂದ ಆರು ಬಗೆ ಸುಜ। ನರ ಬಳಿಯಲಿ ಇದ್ದು ಮೆಚ್ಚಿಸಬೇಕು ಆ। ದರದಿಂದ ಶಬ್ದಾರ್ಥ ತಿಳಿದು ಸದ್ಭಾವದಿ। ಬರಿದೆ ಡಾಂಭಿಕದಿಂದ ಜನನ ನಿರಯ ಕಾಣೊ। ಪರಾವರ ತತ್ವಕ್ರಮಾನು ನಿಶ್ಚಯವಾದ। ತರುವಾಯಾ ಭಗವತ್ ಸ್ಮರಣೆ ವಾಸನಮಯ।

ದರುಶನ ಅವಸ್ಥಿ ಪ್ರೇರಕ ಪ್ರಾಜ್ಞಾ (ಜ್ಞ) ನ। ನಿರಿಸುವ ಭಾಗ್ಯ ಅಲ್ಲಿಂದಾ ವಿಚಾರ। ಹೊರಗೆ ಈ ಪರಿತತ್ವಸ್ಮರಣೆ ಸಮಾಧಿಯು। ಸುರರ ಸಮೇತದಿ ಅನುಭವ ಸಿದ್ಧಿಸಿ। ಮಿರಿಮಿರಿ ಮಿಂಚುವ ಬಿಂಬವೆ ಲಿಂಗದ। ಹೊರಗೆ ಕಾಣಲಿಬೇಕು। ಧ್ಯಾನಗತನಾಗಿ। ಕುರುಹು ತನ್ನೊಳಗಹುದು ಬಾಹಿರದಲಿ ಜೀವಾಂ। ತರದೊಳಗಿದ್ದದೆ ಪ್ರತ್ಯಕ್ಷಾಗಮನುಮಾನ। ಸರುವೋತ್ತಮನ ಪೂಜಿಸಬೇಕು। ಚರಾಚರದಿ ಕರ್ಮದ್ವಾರದಿಂದಲ್ಲದೆ। ಮರುಳೆ ಮತ್ತೊಂದು ಉಪಾಯವೆಂಬೊದೆ ಪುಶಿ। ಸುರನರೋರುಗಪತಿ ವಿಜಯ ವಿಠ್ಠಲರೇಯ। ಸರಿ ಬಂದಂತೆ ಮಾಳ್ಪಾ ಕರ್ಮಾಶ್ರಯನಾಗಿ ॥೧೪॥

**ಆದಿತಾಳ**

ಆವಾವ ಕರ್ಮಗಳು ಮಾಡಿ ಫಲವೇನೊ। ಕೈವಲ್ಯ ಮಾರ್ಗಕೆ ಸಂಗತಿಯಾಗದು। ಶ್ರೀವಲ್ಲಭನೆ ಸರ್ವಮಾಡಿಸಿದಂತೆ ಎಲ್ಲ। ಜೀವಿಗಳು ಕರ್ಮವಮಾಡುವರೆನ್ನು ಮನುಜಾ। ದೇವತಿಗಳಿಗೆ ಅಸ್ವಾತಂತ್ರ ಪ್ರಯೋಜನಕಾವದು ಕೊಡುವದು ಹರಿಯಾಧೀನವೋ। ದೈವತಂತ್ರಾಖ್ಯವೆ ಬಿಂಬಕ್ರಿಯವೇ ತಿಳಿ। ಧಾವತಿಗೊಳದಿರಿ ಇದನೆ ತೊರದು ವ್ಯರ್ಥ। ನಾವಿ ಇಲ್ಲದೆ ಹುಟ್ಟು ಹಾಕಿದಂತೆ ಕರ್ಮ। ಕ್ಕಾವ ಮುಖ್ಯತ್ವವಳಿದು ಮಾಡಿದವನು। ಕೋವಿದನಲ್ಲವೆನ್ನಿ ಶುದ್ಧ ವಿಮೂಢತಮ। ಜೀವನ ಮುಕ್ತನಿಗೆ ಮುಖ್ಯ ಧರ್ಮಗಳು ಸ್ವ ಭಾವಹರಿ ಹರಿಭಕ್ತರಲಿ ಸದಾಗಮ। ಈ ವಿಧ ಇರಬೇಕು ಭೇದ ಜ್ಞಾನ ಇತ್ತಂಡ। ಪಾವಮಾನಿ ಮತದಲ್ಲಿ ಸೇರಲಿಬೇಕು। ಪಾವಿತ್ರ ದೇಹದಲ್ಲಿ ಪರಿಪರಿ ಕರ್ಮಂಗಳು। ನೋವು ಕೊಡದಂತೆ ಯಾಗೋವು ಪುಣ್ಯಬೀಜ। ಭೂವಿಭುದ ಜನ್ಮಂಗಳು ತ್ತೆತ್ತದಲ್ಲದೆ ಸಾಧನ। ಆವಾಜೀವಿಗಾದರು ಪೂರ್ತಿಯಾಗುವದೆ। ಪಾವಕಾಹುತಿ ಮಿಕ್ಕ ಕರ್ಮಮಾಡಿದರಾಗೆ। ದೇವಕಿ ನಂದನಂಗೆ ಅರ್ಪಿತವೆನಲು ಪುಣ್ಯ। ಪೂವಿಲ್ಲಿನಯ್ಯಾ ರಂಗ ವಿಜಯ ವಿಠ್ಠಲರೇಯ। ದೈವದೈತ್ಯ ಜಾಲಕ್ಕೆ ಅಪೂರ್ವದಿಂದ ಮಾಳ್ಪ ॥೧೫॥

**ಜತೆ**

ಕರ್ಮಾಕರ್ಮದಲ್ಲಿ ನಿಷ್ಕಾಮಕನಾಗಿ ।
ಕರ್ಮನಾಯಕ ವಿಜಯ ವಿಠ್ಠಲನ್ನ ಚಿಂತಿಸು ॥೧೬॥

❖ ❖ ❖

## ಸುಳಾದಿ-೨೮

(ಪ್ರಮೇಯ ಸಾದನ ಭಾಗ ಅನಾದಿ ಕರ್ಮ ಪಾಪ ಪುಣ್ಯ ವಿಚಾರ)

ಎಲ್ಲವೂ ಶ್ರೀಹರಿಯಾಧೀನವಾಗಿರುವವು. ಪುಣ್ಯ ಪಾಪವೆರಡು ದೇವ ದೈತ್ಯರಿಗೀವ, ಎನ್ನವೆಂದು ಹಿಗ್ಗಬೇಡ. ರುದ್ರ ಮೊದಲಾಗಿ ಪುಣ್ಯಾದಿಗಳ ಹ್ರಾಸವುಂಟೆಂದಮೇಲೆ ನಿನಗೆ ಸ್ವಾತಂತ್ರವೇನು? ನಿನ್ನ ಪಾಡು ಯಾವದು? ಎಂಭತ್ತುನಾಲ್ಕುಲಕ್ಷ ಯೋನಿಯಲ್ಲಿ ಬಂದು ಚರಿಸುವದೆಲ್ಲ ಈಶಾಧೀನ ಇತ್ಯಾದಿ.

**ರಾಗ-ತೋಡಿ ಧ್ರುವತಾಳ**

ಮನವೆ ನಿನಗಿತು ತೃಣವಿತ್ತು ಪೇಳ್ವೆ ಕಾ। ಮನ ಮಿಕ್ಕ ಮೋಹನಕ್ಕೆ ಜುಣಗುತಿಪ್ಪೆ। ಮನೆಯಲ್ಲ ಇಲ್ಲೆ ಸುಮ್ಮನೆ ಎರಡು ದಿನ ಕ್ರ। ಮಣೆ ಮಾಳ್ಪನೆಂದು ಬಂದದೆ ಗುಣಿಸಿಕೋ। ಮನುಗಳನು ನೋಡುರತುನ ಗರ್ಭದಲ್ಲಿ ಪುಟ್ಟಿ। ಇನಿತು ಕಾಂಚನ ರತುನ ವೈದರೆನೊ। ಬಿನಗುತನ ಬಿಡದಿರಾ ಲನಿಬರು ಬಂದು ನಿನ್ನ। ಘನತೆಯನು ಪಿಡಿದು ಯಮನಿಗೆ ಒಪ್ಪಿಸೆ ಕು। ಮ್ಮನ್ನೆ ಗಾಣಾಗಸಿಮಾಡಿ ನರಕಕ್ಕೆ ಕೆಡಹುವ। ಅನುಮಾನವಿಲ್ಲ ಸಜ್ಜನರ ಕೇಳೊ। ಮುನಿವಿನುತ ಸ್ಥಾವರ ವಿಜಯ ವಿಠ್ಠಲನ್ನ। ವನಜಾಂಘ್ರಿ ಮಧುರಲೋಚನದಿಂದ ಸುರಿಯೊ ॥೧॥

### ಮಟ್ಟತಾಳ

ವನದೊಳಗೆ ವನಜಾ ದಿನ ಹಾಕಿದಂತೆ। ಅನುನಯದಲಿ ಇದ್ದು ಅನುಭವಿಸುವದೀ। ತನುವಿನೊಳಗೆ ನೀ ವನದೊಳಗೆ ಪಂಚಾ। ನನ ಶೋಭಿಸುವಂತೆ ಭಣಗು ಮಹದುರಿತ। ಗಣಕೆ ಭಯವ ತೋರು ಗುಣಭೃತೆನಾಮ ವಿಜಯ ವಿಠ್ಠಲನ್ನ। ದಣಿ ದಣಿ ದಣಿ ನೋಡು ಮಣಿ ಮಣಿ ಮಣಿದಾಡೊ ॥೨॥

### ರೂಪಕತಾಳ

ಆರ್ಯರ ಸೇವಿಸಾಕಾರ್ಯರ ತೊರೆದು। ಧೈರ್ಯದಿಂದಲಿ ಯೋಗಾಧುರ್ಯವನರಿದು। ವೀರ್ಯದಲ್ಲಿ ಶುದ್ಧ ಮರ್ಯಾದೆ ತಪ್ಪದೆ। ತೂರ್ಯ ಗುಣದಲ್ಲಿ ಕೂರ್ಯಾನೆಂದೆನಿಸು। ಸೂರ್ಯನಾಮಕ ದೇವ ವಿಜಯ ವಿಠ್ಠಲನ ಚಾ। ತುರ್ಯದಿಂದಸ್ತುತಿಸಿ ಧಾರ್ಯಮತಿಯಾಗೊ॥೩॥

### ಝುಂಪಿತಾಳ

ಪುಣ್ಯಪಾಪದ್ವಯವು ನನ್ನವೆನ್ನುವು ಎಂದು। ಮುನ್ನೆ ಹಿಗ್ಗಲಿಸಲ್ಲ ಅಳಲಸಲ್ಲ। ಪುಣ್ಯ ಪಾಪದವರು ನಿನ್ನ ಎಡಬಲದಲ್ಲಿ। ಚನ್ನಾಗಿ ಕುಳಿತಿಪ್ಪರು। ಘನ್ನ ನೋಡೊ। ಪುಣ್ಯವಧಿಕವಾಗೆ ಸುರರಿಗೆ ಕೊಡುವನು। ಕನ್ನಪಾಪವು ಹೆಚ್ಚೆ ದೈತ್ಯರಿಗೆ ಈವ। ಪುಣ್ಯಪಾಪಗಳಧಿಕ ನಿನ್ನವೆಂದೆನಿಸನು। ಕನ್ಯ ಲಕುಮಿ ರಮಣ ದೈತ್ಯಹರಣ। ತನ್ನ ಪೊಂದಿದವರ ತಾನೆ ದಯದಿಂದ ಕಾವ। ಪುಣ್ಯ ಕೀರ್ತನ ನಾಮ ವಿಜಯ ವಿಠ್ಠಲಧೀಮಾ ॥೪॥

### ತ್ರಿವಿಡಿತಾಳ

ರುದ್ರ ಮೊದಲು ಕರ್ಮ ದೇವತೆ ಪರಿಯಂತ। ವೃದ್ಧಿಹ್ರಾಸುಂಟು ಕೇಳು ಮನವೇ। ಸಿದ್ಧಿ ಸೋತ್ತಮ ದ್ರೋಹದಿಂದಲವರ ಪುಣ್ಯ। ವೃದ್ಧಿಯಾಗದು ತಿರುಗಿ ಸೇರದೂ। ಇದ್ದು ಮಾನಸೆ ನಿನ್ನ ಅಧಿಕಾರ

ನೀನೆಷ್ಟು। ಹೊದ್ದಿರು ಕಂಡಕಡೆ ಹಂಬಲಿಸದೆ। ರುದ್ರಾತ್ಮಾ ವಿಜಯ ವಿಠ್ಠಲನೆ ಮೋಹನರೂಪಾ। ಚಿದ್ರೂಪ ಆರಾರವಧಿಕಾರದಂತೀವ ॥೫॥

### ಅಟ್ಟತಾಳ

ಮೂಲೇಶ ಮೂರ್ತಿಯ ಪಾದಾಗುಂಟದಲ್ಲಿ। ವಾಲಯ ಬಿಡದೆ ಎನ್ನವಾಸ ನೋಡೊ। ಕಾಲಕಾಲಕೆ ಗುರು ಎನಗೆ ದಯದಿಂದ। ಪೇಳುವ ಮಂತ್ರಾನಂದವ ನೋಡೊ। ಸಾಲದೆ ಈ ಭಾಗ್ಯ ನೀಮಾತುರ ಪೊಂದೆ। ಸೋಲೆನು ಮಿಗಿಲಾದ ಇಂದ್ರಿಯಂಗಳಿಗೆ। ವಾಲಗವಾಗೋದು ಸಂಸ್ಥಾನ ವಿಜಯ ವಿ। ಠ್ಠಲನ್ನ ದಾಸರಾ ತೊತ್ತೇರ ಬಳಿಯಾ ॥೬॥

### ಆದಿತಾಳ

ಲಕ್ಷ ಎಂಭತ್ತು ನಾಲ್ಕು ಪಕ್ಷಿ। ಮಿಕ್ಕಾದ ಜೀವದ। ಕ್ಷುಕ್ಷಿಯೊಳು ಬಂದು ಬಂದೂ। ಪೇಕ್ಷದಲಿ ಬದುಕಿದಾಗ। ಅಕ್ಷಿ ಕರ್ನ ಘ್ರಾಣ ಜಿಹ್ವೆ। ಕುಕ್ಷಿಕಾರ(ಯ) ಸರ್ವದಲ್ಲಿ। ಅಕ್ಷಯ ಪುಣ್ಯವೆಂಬೋದು। ಈ ಕ್ಷಣದಿಂದ ರಿಯಾ। ಈ ಕ್ಷಿತಿಯೊಳಗೇ ಅಧ್ಯಕ್ಷವಾಗಿ ಅಗ್ರ ಜನ್ಮ। ಮೋಕ್ಷ ಸಾಧನಕ್ಕೆ ಬಹಳಾ ಪೇಕ್ಷವೆಂದು ವೇದ ಮತ ಸು। ಭೇಕ್ಷಣ ವಿಜಯ ವಿಠ್ಠಲ। ಅಕ್ಷರಾಕ್ಷರ ಪುರುಷ। ಶೀಕ್ಷ ಕರ್ತಾ ಎನಗೆ ನಿನಗೆ ಸಹಿತವಾಗಿ ಮನವೆ ನೋಡು ॥೭॥

### ಜತೆ

ಮನದಾನಿಗೆ ರುದ್ರ ಮಾವುತಂಕುಶ ಜನಾ ।<br>
ರ್ದನನಾಮವೇ ನಿಜ ವಿಜಯ ವಿಠ್ಠಲವೊಲಿವಾ ॥೮॥



# ಸುಳಾದಿ-೨೯

(ಸ್ವಪ್ನ ಪ್ರಕರಣ)

ಜೀವರಿಗೆ ಸ್ವಪ್ನದಲ್ಲಿ ಆಗುವ ವ್ಯಾಪಾರ ಸತ್ಯ ಶ್ರೀ ಹರಿಯಾಧೀನ. ಅಲ್ಲಿ ಆಗುವ ಕಾರ್ಯವಿಚಾರ ಇತ್ಯಾದಿ.

## ರಾಗ-ಭೈರವಿ ಧ್ರುವತಾಳ

ಸ್ವಪ್ನ ನಿತ್ಯ ಯೋಚಿಸಿ ತಿಳಿಯಬೇಕು। ಗುಪುತವಾಗಿದೆ ಇದು ನೋಡಿದರು। ಸಪುತ ಸಪುತ ಭುವನಾಂತರ್ಗತವಾಗಿದ್ದು। ಕ್ಲಿಪುತ ದುಃಖ ಸಂತೋಷ ಕಾರಣವೆನಿಸಿ। ಅಪರಿಮಿತ ಜನ್ಮಂಗಳು ಬಂದರಾದಡೆ ಇದು। ಉಪಕ್ರಮ ಉಪಸಂಹಾರವಾಗುತಿದಕೊ। ದಿಪುತವಾದ ಮನಸು ಆಶ್ರಯವೆನ್ನಿ ಜಡ। ತ್ರಿಪರಿಗುಣ ಸಂಯುಕ್ತ ಪ್ರಕಾಶವೋ। ಚಪಲ ಸದೃಶವಾಗಿ ಹೃದಯ ಕಂಠ ನಯನ। ಜಪಿಸು ಪೂರ್ವೋಕ್ತ ಕ್ರಮಣ ಕರಣ ಭೇದ। ತಪನ ಕಾಲ ಪ್ರಾರಂಭ ಬಾಹಿರ ವ್ಯಾಪಾರವೆ। ನಿಪುದು ಜಾಗ್ರದಾವಸ್ಥೆ ಎಂಬೊ ನಾಮಾ। ಕೃಪಣ ವತ್ಸಲ ವಿಶ್ವನಂತ ಪ್ರಾಜ್ಞಾಚಕ್ಷುಸ। ನೃಪ ತ್ರಿಣಿಮೊಗ ಮನುಜ ಹಸ್ತಿವದನ। ಕೃಪಪಯೋನಿಧಿ ಪೂರ್ಣ ಸ್ಥೂಲ ಭುಕುಸತ್ವಪ್ರವರ್ತಕ। ತಪನೀಯ ಕಾಯ ಈತನೆ ವಿಷ್ಣು ನೋ। ತಪವ ಮಾಡೆಲೊ ನಿತ್ಯ ವಿಶ್ವನ್ನ ಸೃಷ್ಟಿ ಕಾಲ। ಸುಪವರ್ನ ದೈತ್ಯ ತಲೆಯ ಪುಟ್ಟಿಸುವ। ಸುಪಥ ದುಷ್ಪಂಥ ಚರಿಯದಿಂದ ತಿಳಿಯಬೇಕು। ವಿಪುಳದೊಳಗೆ ನೋಡುವ ಕರ್ಮದಿ। ನಿಪುಣ ಮನೋರಥ ಸೃಷ್ಟಿ ಸೂಕ್ಷ್ಮ ಸ್ಥೂಲ। ತಪನೀಯ ಗರ್ಭವಾಯು ಗರುಡಾದಿ ಇಂದ್ರಾದ್ಯರು। ಅಪಭ್ರಷ್ಟ ದೇವ ಮೊದಲಾದ ಸುರರು। ರಿಪುವಂಶಾವಳಿ ಸರ್ವಗಣವೆಲ್ಲ ತುಂಬಿ ಲೋ। ಉಪರಾಗಿ ಮಹಾ ಪ್ರವಹದಂತೆವೊ ಪ್ರಪಂಚವ ನುಡಿಸುವರು ಒಂದು ದಶಭಾಗದಲ್ಲಿ। ಕಪಟನಾಟಕ ಹರಿಯ ನೇಮನದಿಂದ। ಶ್ವಪಚ್ಯಾದಿ ಜನ್ಮಗಳು ಬರುತಿಪ್ಪದೊ ಪಂಚೇಕದ್ವಿ ಶಫಲ ಶಬರ ನಾನಾ ದೇಹವೊದಗಿ।

ವಿಪರೀತಕಾರ್ಯ ಮೇಲು ಸಂತೋಷ ಲಾಭವೆಲ್ಲ। ಸ್ವಪನಾವಸ್ಥೆಯಲ್ಲಿ ಆಗುವದು। ಕಪಿಲಾದಿ ಭಗವದ್ರೂಪ ವಾಸನಮಯದಲ್ಲಿ। ಅಪರೋಕ್ಷವಾದರಾಗೆ ಇದರ ಸ್ಥಿತಿ। ಕಪಿವರೆಗೆ ತದಾಕಾರ ಮಹತತ್ವಕಾಯ ಸೂಕ್ಷ್ಮ। ಉಪಕ್ರಮವಾಗುವದೊ ತತ್ಕಾಲಕ್ಕೆ। ಸುಪರ್ನ ವಾಹನ ಆ ಪ್ರಾಣನ್ನ ಮಧ್ಯದಲ್ಲಿ। ವಪುಧರಿಸಿ ಅಂಶದಿಂದ ಕಾಣಿಸುವನೊ। ತ್ರಿಪುರಾರಿ ಮಿಕ್ಕಾದ ಸಾಂಶಜೀವರು ವ। ರ್ಣಪದೇನು ಗಾತ್ರ ಧರಿಸಿ ತೋರುವದು। ಅಪವರ್ಗದಾತ ನಮ್ಮ ವಿಜಯ ವಿಠಲರೇಯ। ತಪ ತಪ ಮಾಡದಲೆ ಮನಕೆ ಪ್ರೇರಕನಾಗಾ ॥೧॥

### ಮಟ್ಟತಾಳ

ಕನಸಿನಲಿ ಗಜ ತುರಗ ಮನೆ ಸತಿ ಸುತ ವಾಜಿ। ಧನ ಭೂಗೋಳ ಕ್ಷೇತ್ರ ವನ ಕಾಂಚನ ವಸ್ತ್ರ। ಮಣಿ ಅಂದಣ ದೇಶ ಜನನದಿ ಸಮುದ್ರ ಜನನಿ ಜನಕ ಬಂಧು ತೃಣ ಪಶು ಮೊದಲಾಗಿ। ಅಣು ಘನ ಗುರು ಲಘುವು ಇನಿತಿನಿತು ಎಲ್ಲ। ಎಣಿಕೆ ಇಲ್ಲದೆ ಯೋಚನೆ ಮಾಡದೆ ಕಾಂಬ ಜನನ ಸ್ಥಿತಿ ನಾಶ ಗುಣ ದುರ್ಗುಣ ವೃತ್ತಿ। ಕ್ಷಣಕ್ಷಣಕೆ ಬಿಡದೆ ತನುವಿನೊಳಗೆ ಸ್ವ ಪನ ಕಾಲದಲ್ಲಿ ಜೀವನ ಭಿನ್ನವಾದ। ಜನ ಜಡ ಚೇತನವ ದಿನರಾತ್ರಿ ಎಂದು। ಗಣನೆ ಮಾಡುವ ಇದಕ್ಕೆ ನೆನಿಸಿ ಪ್ರತ್ಯಕ್ಷದಲ್ಲಿ। ಅನುಮಾನವಿಲ್ಲದಲೆ ಮನೋವಾಕ್ಕಾಯದಲ್ಲಿ। ಪ್ರಣವ ಮೂರುತಿ ನಮ್ಮ ವಿಜಯ ವಿಠಲರೇಯ। ಅನಿಮಿಷರೊಡನೆ ಜನ್ಮಜನ್ಮದಲಿದ್ದ ಅನುಭವ ಮಾಡಿಸುವ ॥೨॥

### ತ್ರಿವಿಡಿತಾಳ

ದಿವಸದಲ್ಲಿ ಮನುಜ ಮನಸು ನಯನ ಮತ್ತೆ। ಶ್ರವಣದಿಂದ ವಸ್ತ ತಿಳಿದವೆಲ್ಲಾ। ವಿವರಾವಿವರವಾಗಿ ಪಾಪಪುಣ್ಯ ವೃತ್ತಿ। ನವನವನೆಸಗಲು ಇವಕೆ ಮಾನಿ। ಕವಿಶಿಷ್ಯ ನಿರ್ಜರರು ನಿಜವಾಗಿಯಿಪ್ಪರು। ತವಕದಿಂದಲಿ

ಕೇಳು ಮನುಜಾದಿಲಿ। ವಿವರಿಪೆ ಮನದಲ್ಲಿ ಈ ಬಗೆ ಅಭಿಮಾನಿಗಳು। ಇವರಿಂದ ಮಾಡಿಸುವ ಕರ್ಮದೊಳಗೆ ಪೋ। ಗುವ ಬರುವ ಕಾರ್ಯದಲಿ ವಿಶ್ವನೊಳಗೆ। ಲವ ತೃಟಿ ಕಾಲ ಪರಿಮಿತದಲ್ಲಿ ಬಂದು। ಪ್ರವಿಷ್ಟರಾಗುವದು ಭೂತ್ಯೈದರೊಡನೆ। ರವಿ ಮೇರು ಮರೆಯಾಗೆ ದಿವಸಾಂತನೆನಿಸುವದು। ಅವಸರದಲ್ಲಿ ಮಲಗಲಾಗ ವಿಶ್ವ ದ್ವಿವಿಧಾವಸ್ಥಾ ಸ್ಥಳಕೆ ತೆರಳಿ ಪೋಗುವ ಸರ್ವ। ದಿವಿಜದಾನವ ತತಿಯ ಗರ್ಭದಿ ಧರಿಸಿ। ಶಿವನ ಮನೆಗೆ ಇಳಿದು ತೈಜಸದಲ್ಲಿ ಕೂ। ಡುವ ಏಕೀಭೂತ ಸಪ್ತಾಂಗ ಪ್ರಾಜ್ಞ। ಇವರಿಗೆ ಸ್ವಪನಾವಸ್ಥಿ ತಂದುಕೊಡುವ ಶ್ರೀ। ಧವನು ವಾಸನಾಮಯ ಸೃಷ್ಟಿಯಿಂದ। ದಿವದ ವ್ಯಾಪಾರದ ಗತಿಯಂತೆ ಜೀವಕ್ಕೆ। ಭವದಲ್ಲಿ ಇದ್ದದು ತತ್ತ ಸದೃಶ। ಪ್ರವರ್ತಕ ಇದಕೆಲ್ಲ ದೇವ ದೈತ್ಯರ ಗಾ। ತ್ರವನು ನಿರ್ಮಾಣವ ಮಾಡಿನೋಳ್ಪ। ಪವಿತುರ ಲೀಲೆಗೆ ತ್ರಿದಶತತಿ ಹೇಯುಕ್ಕೆ। ಅವಗುಣದವರೆನ್ನಿ ನಿತ್ಯದಲ್ಲಿ। ಇವರೆ ಸಪ್ತ ಗೋತ್ರ ಪಿತೃಮಾತೃಸಹ। ಭವ ನಾನಾಪರಿಯಾಗಿ ಕಾಣಿಪರಯ್ಯಾ। **ಭವನಾಮಕ ರುದ್ರ ಸತಿದ್ವಾರದಿಂದ ಉ। ದ್ಭವರಾಗುವರು ತೈಜಸ ಮುಖ್ಯ ಕರ್ತ।** ಗ್ರೀವದಲ್ಲಿ ಇಂಥ ಪ್ರಯೋಜನವಾಹದೊ। ಪವನಂತರ್ಯಾಮಿ ವಿಜಯ ವಿಠಲ ತ್ರಿ ಭುವನದೊಳಗೆ ಸರ್ವ ಸ್ವಪನ ವ್ಯಾಪಾರವೊ ॥೩॥

### ಅಟ್ಟತಾಳ

ತೆತ್ಕರ್ಮ ತತ್ಕ್ರಿಯ ತದ್ರೂಪ ತದ್ಗುಣ ತತ್ಕರಣ। ತತ್ಕಾಲ ತತ್ಪ್ರಕಾರ ಚರ್ಯ ತತ್ತಳ ದೇವತೆ ದಾನವ ಮಿಕ್ಕಾಯ। ತತ್ಕಟಕವ ಮಾಡಿ ತೆತ್ತುವ ದೇಹವ। ಸತ್ಕರ್ಮ ದುಷ್ಕರ್ಮ ಹಗಲು ನೋಡಿದ ಚ। ಮತ್ಕೃತಿ ದೇಹವ ಭೂತಗಳು ಬಂದು ಸ್ಥೂಲ ಭಕು। ಚಿತ್ರಕೃತಿ ಪತಿ ವಿಶ್ವನ್ನ ಜಠರದೊ। ಳುತ್ಕೃಷ್ಟವಾಗಿ ಪ್ರವೇಶವಾಹವು। ತತ್ಕಳೇವರದಿಂದ ದಿವಸ ದಿವಸದಲ್ಲಿ। ತತ್ಕಲ್ಪಾನುಸಾರ ಅನುಭವವಾಗೋದು। ಶಿತ್ಕಂಠನಿವಾಸ ವಿಜಯ ವಿಠಲರೇಯನ। ಸತ್ಕಥ ಕೇಳಿದವರಿಗೆ ವೇಗವೊಲಿವಾ ॥೪॥

### ಆದಿತಾಳ

ಅಕಾರ ವಿಶ್ವನಲ್ಲಿ ಪುಣ್ಯಪಾಪ ದೇವತಾ। ಏಕಾನೇಕವಾಗಿ ಜಾಗ್ರತಾವಸ್ಥಿಯಲ್ಲಿ। ವಾಕು ಮೊದಲಾದ ಇಂದ್ರಿಯಂಗಳಿಂದ ಪುಟ್ಟಿ। ನಾಲ್ಕು ಬಗೆಯಿಂದ ವಆಸವಾಗುವರು। ಶ್ರೀಕಾಂತ ವಿಶ್ವಮೂರ್ತಿ ಚಕ್ಷು ಸ್ಥಾನವೆ ಬಿಟ್ಟು। ಉಕಾರ ತೈಜಸನನ್ನು ಕೂಡಲು ಸ್ವಪ್ನವೆನ್ನಿ। ಪಾಕಶಾಸನ ಉಳಿದ ಸಮಸ್ತ ಜನರಿಗೆ। ವೈಕಾರಿಕ ದೇಹದ ವ್ಯಾಪಾರ ಶೂನ್ಯಕಾಣೊ। ಕಾಕ ಬಕ ಗಧ್ರ ಶ್ವಾನ ನರಿ ಕತ್ತೆ ವಿಡ್ವರಾಹ। ಘೂಕ ನಾನಾದೃಷ್ಟಜಂತುಗಳ ದೇಹ। **ನಾಕ ವೈರಿಗಳು ಒಂದಂಶದಿಂದಾಗುವರು। ಶೋಕ ಭೇದ ಭೇದ ಇವರಿಗಾಗುವದು।** ಈ ಕಾಯ ಧಾರಿಗೆ ಭೋಗ ಭೂಷಣ ತ। ನ್ನಾಕಾರ ದೇಹಕ್ಕೆ ಸುಖ ದುಃಖಾನುಭವ। ಪ್ರಕಾಶ ಭೂತ ವಾಸನ ಸಮಯದಲ್ಲಿ ಪೊಕ್ಕು। ಪ್ರಾಕು ಕರ್ಮಗಳಿಂದ ಸಂಚಾರ ಮಾಡುವ। ಲೋಕದೊಳಗೆ ಇಷ್ಟಾನಿಷ್ಟ ಸಂಗತಿಯಿಂದ। ಆ ಕಾಲೀಕಾಲವೆನದೆ ಸರ್ವರಿಗೆ ಇದೇ ಸಿದ್ಧ। ಶ್ರೀಕಾಂತ ಪ್ರಾಜ್ಞ ನಮ್ಮ ವಿಜಯ ವಿಠಲರೇಯ। ಏಕಮೇವನೊ ಸರ್ವ ಸ್ವಾತಂತ್ರ ಪುರುಷ ॥೫॥

### ಜತೆ

ಇಂದ್ರಯೋನಿಯ ಮಧ್ಯ ಇನಿತು ವ್ಯಾಪಾರ ಸುಖ ।<br>
ಸಾಂದ್ರ ವಿಜಯ ವಿಠಲ ಮಾಡುವ ಬಲು ಲೀಲಾ ॥೬॥



# ಶ್ರೀಗೋಪಾಲ ವಿಠ್ಠಲರ ಸುಳಾದಿಗಳು

## ಸುಳಾದಿ-೩೦

ಸಕಲ ಸಾಧನ ಶ್ರೀಹರಿಯ ಅಧೀನ ತಿಳಿವುದೇ ಸಾಧನದಲ್ಲಿಯ ಮುಖ್ಯಾಂಶ
ಇದನ್ನರಿತವರಿಗೆ ಶ್ರೀ ಹರಿಯುವೊಲಿವ.

### ರಾಗ-ಕಾಂಬೋದಿ ಧ್ರುವತಾಳ

ಹರಿಯ ಸೇವಿಸುವವ ಅವ ಪಾಮರನೆ? ಮರದು। ಹರಿಯ ಸೇವಿಸುವವ ಅವ ಪಾಮರನು ಅಲ್ಲೆ। ಹರಿಯ ತಿಳಿದವನು ಅವನು ಜ್ಞಾನಿಯೆ ನೋಡಾ। ಹರಿಯ ತಿಳಿದವ ಪೂರ್ಣ ಅವನು ಜ್ಞಾನಿಯೆ ನೋಡಾ। ಹರಿಯೆ ಕರ್ತಾ ನಾ ಕರ್ತುನಲ್ಲಾನೆಂದವ ಜ್ಞಾನಿ। ಹರಿಕರ್ತು ನಾನು ಕರ್ತುನೆಂದವನು ಜ್ಞಾನಿಯೆ?/ ಹರಿಯೆ ಸ್ವಾತಂತ್ರನಾನಲ್ಲವೆಂದವ ಜ್ಞಾನಿಯೆ। ಹರಿಯೆ ಸ್ವತಂತ್ರ ನಾನು ಸ್ವತಂತ್ರನೆಂದವ ಜ್ಞಾನಿಯೆ ಹರಿ ಮಾಡಿಸಲು ಮಾಡಿದೆನೆಂಬೊವ ಜ್ಞಾನಿಯೆ/ ಹರಿ ಮಾಡಿ ಮಾಡಿಸಲು ಮಾಡಿದೆಂದವ ಜ್ಞಾನೆ। ಹರಿ ಮಾಡೆನ್ನೆ ಮಾಡಿದೆನೆಂದವನು ಜ್ಞಾನಿಯೆ। ಹರಿ ಮಾಡಿದರೆ ನಾಮಾಡೇನೆಂದವ ಜ್ಞಾನೆ। ಹರಿಯು ಕೂಡಾ ನಾನು ಮಾಡಿದೆಂಬವ ಜ್ಞಾನೆ। ಹರಿಯೆ ಮಾಳ್ಪವ ನಾನ್ಯಾತಕಲ್ಲೆಂದವ ಜ್ಞಾನೆ। ಹರಿಯನರಿಯದವ ಅವನು ಒಬ್ಬ ಜ್ಞಾನಿಯೆ। ಹರಿಯ ಬಲ್ಲೆನೆಂದವ ಅವನು ಒಬ್ಬ ಜ್ಞಾನಿಯೆ। ಹರಿಯೆ ಸರ್ವ ಚೇಷ್ಟಪ್ರದ ಗೋಪಾಲ ವಿಠ್ಠಲ ನರ। ಹರಿ ಎಂದರಿದವನು ನರನೆ ನರನೆ ನೋಡಾ॥೧॥

### ಮಟ್ಟತಾಳ

ಮಂತ್ರಮಾಡಿದರೇನು ತಂತು ತೋರಿದರೇನು। ಎತೆಂತು ಕರ್ಮ ನಿರಂತರ ಮಾಡಲೇನು। ಚಿಂತನೆ ಹರಿ ಸ್ವತಂತ್ರ ಪರತಂತ್ರ। ಇಂತು ಜೀವೇಶರ ವಿವೇಕನರಿಯದಾ। ನಂತ ಜನುಮಗಳು ಆಗಿ ಬಂದಿದ್ದರು।

ಸಂತೋಷವು ಕೊಡವು ಸಾಧನ ಕರ್ಮಗಳು। ದಂತಿಮಜ್ಜನ ಕಾಣೊ। ಹರಿಯ ತಿಳಿಯದ ಕರ್ಮ। ಗ್ರಂಥಿ ಬಿಡುವದಲ್ಲ ಅಜ್ಞಾನದ ಸರಕು (ಸುರಕು)। ನಿಂತು ನಿದ್ರೆಮಾಳ್ಪನಂತೆ ಕೊನಿಗೆ ಸೌಖ್ಯ। ಚಿಂತಿತ ಫಲದಾತ ಗೋಪಾಲ ವಿಠ್ಠಲ। ನೆಂತೆಂತುಪಾಸ್ಯರಂತಂತೆ ಫಲವೀವ ॥೨॥

### ರೂಪಕತಾಳ

ಚೇತನರೆ ಸರಿ ಜೀವ ಚಲನೆ ಮಾಡಿಸೆ ಹರಿ। ಚೇತನವೆ ಜಡತುಲ್ಯ ಚಲನೆ ಮಾಡಿಸದಿರಲಿ। ಚೇತನಾಚೇತನಕೆ ಸಾಮ್ಯವೆ ಸರಿಹರಿ ವಿನಹ। ಯಾತರಿಂದಲಿ ನೋಡು ಜ್ಞಾನಿಚ್ಚೆ ಪ್ರಯತ್ನವು। ಪಾತಕ ಪುಣ್ಯಕ್ಕು ಹರಿಯೆ ಪ್ರೇರಕನೆಂದು। ತಾ ತಿಳಿದು ಇಪ್ಪವಗೆ ಯಾತನೆಂಬದು ಎಲ್ಲೊ?। ತಾ ತಿಳಿಯದಲೆ ಪುಣ್ಯಮಾತುರಕೆ ನಾನೆನಲು। ಪಾತಕವವನೆಮಾಡಿ ಪುಣ್ಯವಾದರು ನೋಡ। ಪತಿವ್ರತಿ ಸ್ತ್ರೀ ತನ್ನ ಪತಿ ಆಜ್ಞೆಯಿಂದ ವಿ। ಜಾತಿ ಪುರುಷನ್ನ ಅನುಸರಿಸೆಂದು ಆಜ್ಞಕೊಡೆ। ಮಾತು ಪತಿಯದು ನಡಿಸೆ ಪಾತಕವಳಿಗೆವುಂಟೆ?। ಯಾತನಿಗೆ ಸರಿ ಯೋಗ್ಯ ಕರ್ಮ ಮಾಡಿದರಾಗೆ। ಪಾತಕಿಲ್ಲವು ನೋಡು ನೋಡಿ ನೋಡು। ಜ್ಯೋತಿರ್ಮಯ ಮೂರ್ತಿ ಗೋಪಾಲ ವಿಠ್ಠಲ। ಯಾತರವ ನಾನಲ್ಲ ಎಲ್ಲ ನಿನ್ನಾಧೀನ ॥೩॥

### ಝುಂಪೆತಾಳ

ಹರಿ ಮಾಡೆನಲು ಮಾಡೆನೆಂಬುವಗೆ ಸಂಸಾರ। ಹರಿಯೆಂಬುವದು ಲಕ್ಷ ಹರುದರಿ ಜಲವುದ್ದ। ಶರದಿಂದ ಕಡೆ ಬೀಳಲರಿಯಾನವನೆಂದಿಗು। ಹರಿಯು ತೋರದು ಅವಗೆ ಎಂದೆಂದಿಗು। ಹರಿ ಕೂಡ ನಾನು ಮಾಡಿದೆನೆಂಬುವಗೆ। ಶರಧಿ ಹರಗೋಲು ಹುಟ್ಟಿಲ್ಲ ಧಾಕಿದಂತೆ। ಹರಿ ಮಾಡಿಸಲು ಮಾಡೆನೆಂಬುವಗೆ ಭವಶರಧಿ। ಹರಗೋಲಿಟ್ಟು ಹುಟ್ಟು ಹಾಕಿದಂತೆ। ಹರಿ ಮಾಡಿಸಲು ನಾನು ಮಾಡಿದೆಂಬುವನಿಗೆ। ಶರಧಿ ಅರಕಾಲು ಪರಿಮಾಣ ಜಲವು। ಹರಿಯ ಕರ್ತೃತ್ವವು ಅರಿದ ಹಾಗೆಲ್ಲ ಭವ।

ಶರಧಿ ಬತ್ತುವದಿನ್ನು ಅರಿದವರಿಗೆ। ಹರಿ ಮಹಾರಾಜ ಗೋಪಾಲ ವಿಠಲ ತನ್ನ। ಅರಿದಂತೆ ಅರಿವ ಅರಿದಿರುವುವರಿಗೆ ॥೪॥

**ತ್ರಿವಿಡಿತಾಳ**

ಮರದು ಮಾಡಿದ ಕರ್ಮ ಮಹಾಮಹತ್ತಾದರು। ಹುರದು ಬೀಜವು ಬಿತ್ತಿ ಫಲ ಅಪೇಕ್ಷಿಸಿದಂತೆ। ದೊರಕಿಸಿಕೊಡದಿನ್ನು ಯೋಗ್ಯ ಗತಿಯು ನೋಡಾ। ಮರಳಿ ಸಂಸಾರದಿ ತಂದಿಡುವದು। ಅರಿದು ಮಾಡಿದ ಕರ್ಮ ಅಲ್ಪವಾದರು ನೋಡು। ಪರಮುತ್ಕ್ಯತ್ತಮವಾದ ಫಲಗಳ ಕೊಡುವದು। ಸರಿ ಬಿಡಿ ಹರಿ ಅರಿದು ಕುಕರ್ಮವನ್ನೆ ಮಾಡೆ। ಮರದವಾನಂತೆ ಮರಳಿ ಫಲಯ್ಯೆದ। ಕುರುಡ ಜನ್ಮಾರಭ್ಯ ಕುರಿತು ಅವಗೆ ಒಂದು। ಗುರುತಪೇಳೆನ್ನೆ ಅದರ ಕುರುಹನರಿವಾನೆ। ಅರಿದು ಬಹುದಿನ ನಾನಾ ಅರ್ಥವು ಮಧ್ಯ। ಕುರುಡನಂತಿಪ್ಪನ ಕುರಿತು ಅಣಿಕಿಸಿ ಒಂದು। ಗುರುತು ತೋರಿ ಅದರ ಕುರುಹ ಪೇಳೆನ್ನೆ ಹುಟ್ಟು। ಗುರುಡನಂದದಿ ತಾನು ಹುಡಿಕ್ಯಾಡುವನೆ ನೋಡ। ಶರಣ ಜನರ ಪಾಲಾ ಗೋಪಾಲ ವಿಠ್ಠಲ ತನ್ನ। ಅರಿದವರ ಹಿಂದೆ ತಿರುಗುವ ಕ್ಷಣಬಿಡದೆ ॥೫॥

**ಅಟ್ಟತಾಳ**

ಕರ್ತುತ್ವವೆಂಬದು ಜೀವಸ್ವರೂಪವು। ಹತ್ತಿ ಇಪ್ಪದು ನೋಡು ಅನಾದಿಯಿಂದಲಿ ನಿತ್ಯ। ದತ್ತವಾಗಿದೆ ಈಶನಿಂದವೆಂಬವಾತು। ಅರ್ತುನೋಡಿ ಹರಿಯ ಹೊರ್ತು ಆಗುವದಲ್ಲ। ಮರ್ತರೆ ಮರೆವುವ ಅರ್ತರೆ ಅರುವುವಾ। ಕರ್ತು ಕಾರ್ಯ ತಾ ಸರ್ವ ಸ್ವಾತಂತ್ರ ಹರಿ ತಾನು। ಸೂತ್ರ ನಾಟಕ ಸರ್ವ ಚೇಷ್ಟಿ ತಾ ಮಾಡಿಸೆ। ಕೀರ್ತಿ ಅಪಕೀರ್ತಿ ಜೀವರ್ಗೆ ತಂದೀವ। ಸ್ವಾರ್ಥ ಪಾರರಹಿತ ಗೋಪಾಲ ವಿಠ್ಠಲ। ಆರ್ತಿತರಿವ ಅರಿದ ಭಕ್ತರ ಮನದ ॥೬॥

ಹರಿ ನುಡಿಸಲಾಗಿನ್ನು ನುಡಿವೆನಯ್ಯಾ ನಾನು। ಹರಿ ಪಿಡಿದರೆ ನಾನು ಪಿಡಿವೆನಯ್ಯಾ ನಾನಾಕು। ಹರಿ ಕೊಡಿಸಿದಡೆ ಆನು ಕೊಡುವೆ ಏನಾದದ್ದು। ಹರಿ ನಡಿಸಿದಾಡಾನು ನಡಿವೆ ನಾನಾ ಕಡಿಗೆ। ಹರಿ ನಿಂತಡಾಯಿತೆ ನಿಲ್ಲುವೆನಯ್ಯಾ ನಾನು। ಹರಿಯು ಮನಸುಮಾಡೆ ಮನಸು ಮಾಡುವೆ ನಾನು। ಹರಿಯು ದ್ವೇಷವುಮಾಡೆ ಆನು ದ್ವೇಷವು ಮಾಳ್ಪೆ। ಹರಿ ಮೋಹಿತನಾಗೆ ಆನು ಮೋಹಿಪೆನಯ್ಯಾ। ಹರಿ ಜಾಗ್ರತನಾಗೆ ಆನು ಜಾಗ್ರತನಾಹೆ। ಹರಿ ಮರದಡಾಯಿತೆ ಮರವುವೆನಯ್ಯಾ ನಾನು। ಹರಿ ನೆನಿಸಲ್ಯೆನಗೆ ನೆನಪು ಆಗುವದು। ಹರಿ ಕಾಮನಮಾಡೆ ಆನು ಕಾಮನಮಾಳ್ಪೆ। ಹರಿ ಇಚ್ಛೆ ಗೋಂದಕನ್ನ ಪ್ರತಿಕೂಲಿನಲ್ಲ ನಾನು। ಹರಿ ಪೂರ್ಣ ಶಕ್ತಿ ಗುಣ ಶರಧಿ ಕಾಣಯ್ಯಾ ನಿರುತ। ಹರಿ ನಿರ್ದೋಷ ಜ್ಞಾನಾನಂದಾ ಪರಿಪೂರ್ಣ ದೇವ। ಹರಿ ಪೂರ್ಣ ಕಾಮಾ ಆನು ಅತ್ಯಂತ ಅಲ್ಪ ನೀರಾ। ಹರಿಯು ಹೋದಾಗೆಯೆಲ್ಲ ತೃಣವು ಪೋಗುವದಯ್ಯಾ। ಹರಿಯೆ ಸ್ವಾತಂತ್ರ ಆನು ಅಸ್ವಾತಂತ್ರ। ಹರಿ ಸರ್ವ ವ್ಯಾಪ್ತ ಮೂರ್ತಿ ಗೋಪಾಲ ವಿಠ್ಠಲ। ಹರಿಯೆ ಭಕುತರ ಮನದ ಸಿರಿಯೆಹೇ ಎನ್ನಧೊರಿಯೆ ॥೧॥

### ಮಟ್ಟತಾಳ

ಕರ್ತುನಾನೆಂದರೆ ಹರಿಯ ಹೊರತಾಗಿನ್ನು। ವ್ಯರ್ಥ ನೋಡುವ ಏನು ಮಾಡಿದ ಕರ್ಮವು। ಮೃತ್ಯು ತನಗೆ ತಾನು ತಂದುಕೊಂಡವ ನಾಹಾ। ಆರ್ತಿ ಅವನಿಗೆ ನಾಶವಾಗದಿನ್ನು। ಕರ್ತು ನಾನಲ್ಲವೆನೆ ಸಾಧನಕೆ ಫಲವೇನು। ಪ್ರತ್ಯಕ್ಷಕೆ ಬಾಧೆ ಮಿಥ್ಯಾಜ್ಞಾನಿಯು ಆವ। ಕರ್ತುತ್ವವೆಂಬೋದು ಜೀವನಿಷ್ಟವು ನೋಡು। ಶ್ರುತ್ಯರ್ಥಗಳಲ್ಲಿ ಸಿದ್ಧವಾಗಿದೆ ನೋಡು। ಮರ್ತು ಹರಿಯು ಮಹಿಮೆನರಿಯದೆ ಜೀವನು। ಸ್ಫೂರ್ತಿಯಿಲ್ಲದ ಅಪಕೀರ್ತಿವಂತನಾಹ। ಕರ್ತು ಕಾರ್ಯತಾ ವಿಷ್ಣು ಗೋಪಾಲ ವಿಠ್ಠಲನ್ನ। ಅರ್ತವ ಧನ್ಯನೊ ಕರ್ತುನೆಂಬದರೊಳಗೆ ॥೨॥

### ರೂಪಕತಾಳ

ಪೃಥಿವಿಮೇಲೆ ಒಂದು ರಥವೇರಿ ಬರಲಾಗಿ। ರಥ ಬರುತಿದೆ ನೋಡು ಎಂಬರು ಜನರೆಲ್ಲ। ರಥರಥಿಕರಿಬ್ಬರಿಗಾವಾಧಾರವು ಎಂಬ। ಮತಿ ಮನದಲ್ಲಿ ಉಳ್ಳರಾಗಿದ್ದರು ಸರಿಯೆ। ಪೃಥಿವಿಯೆ ರಥ ಹೊತ್ತು ಬಾಹದನರ್ಯಾತಕ್ಕೆ। ಪ್ರತಿತ ತೋರಿದರ್ಥ ಎತಾರ್ಥವೆನಬೇಡಿ। ಮತಿ ಎರಡು ಪ್ರಕಾರ ಕತೃತ್ವದೊಳಗಾಗಿ। ಸ್ಥಿತಿ ಅರಿತುನೋಳ್ಪರು ಜ್ಞಾನಿಗಳು। ಖತಿಗೊಳದಿರಿ ಇನ್ನು ಕರ್ತುತ್ವವೆಂಬದು। ಜಿತವಾಗಿ ಜೀವ ಜಡಗಳಿಗನಾದಿ ಸಿದ್ಧ। ಮತಿವುಳ್ಳ ಕರ್ತುತ್ವ ಚೇತನ ನಿಷ್ಟವು ಇನ್ನು। ಮತಿರಹಿತ ಕರ್ತುತ್ವ ಜಡದ ಸ್ಥಿತಿ। ಸತತ ಜಡ ಚೇತನಕೆ ಕರ್ತರೆನಿಸಿ ಹರಿಯು ಗತಿ ಅರಿತು ಅವರವರ ಪಥದಲಿಡುವ। ಪತಿತ ಪಾವನರಂಗ ಗೋಪಾಲ ವಿಠ್ಠಲ। ಚತುರ ಕ್ರೀಡೆಯು ಮಾಳ್ಪ ಸರ್ವರೊಳಗೆ ನಿಂತು ॥೩॥

### ಝಂಪೆತಾಳ

ಆತ್ಮ ಪರಮಾತ್ಮನ ವಿವೇಕ ಜ್ಞಾನವು। ಸೋತ್ತಮರ ಕರುಣದಿಂದಾಗಬೇಕು। ಸೋತ್ತಮರ ಪ್ರಾಸಾದವೆಂಬುವದು ಗತಿಗಿನ್ನು। ಮತ್ತೆ ತ್ರಿರಾವರ್ತಿ ಆಗಬೇಕು। ಉತ್ತಮ ಮಧ್ಯಮ ಅಧಮವಾಗಿ ಪ್ರಸಾದದಿಂ। ಉತ್ತಮವಾದಗತಿ ಪೊಂದಿಸುವದು। ಆತ್ಮ ತನ್ನ ಸ್ವರೂಪ ಜ್ಞಾನನೀವನೊ। ಮತ್ತದೆ ಅಧಮ ಪ್ರಸಾದವೆನ್ನು। ಸತ್ವ ಕರ್ಮಗಳಲ್ಲಿ ಪ್ರವರ್ತನ ಮಾಳ್ಪಾ। ಮತ್ತೆ "ಏನಂ ಮೋಚಯಾಮಿ" ಎಂದು। ನಿತ್ಯ ಅನಿತ್ಯ ಜ್ಞಾನ ಆವಾಗ ಪುಟ್ಟುವದು। ಮತ್ತೆ ಅವನೀಗ ಯಾತಕೆ ಸಲ್ಲ। ಸೋತ್ತಮ ಗುರುವುಪದೇಶವೆಂಬುವದು ಅವನಿಗೆ। ಮತ್ತೆ ಅಶರೀರವಾಕ್ಯದಿ ಆಹುದು। ಪ್ರತ್ಯಕ್ಷ ಪೇಳರು ಅವನಿಗೆ ಇದು ನೋಡು ವಾಚಾ। ಪ್ರಸಾದವೆಂದು ಕರಸೋದು। ಸತ್ಯಸಂಕಲ್ಪ ಗೋಪಾಲ ವಿಠ್ಠಲ ತನ್ನ। ಭಕತರ ಬಲ ಮಾಡದವರಿಗೊಲಿಯಾ ॥೪॥

### ತ್ರಿವಿಡಿತಾಳ

ಒಂದು ಕರ್ಮವು ಮಾಡೆ ಅವರಿಗೆ ಅದರಲ್ಲಿ। ಇಂದಿರೆ ಅಜಭವ ಪರಿವಾರ ಸಹವಾಗಿ। ನಿಂದು ತನಗೆ ಕರ್ಮ ಮಾಡಿಸಿದರೆಂಬ। ಚಂದದ ಸ್ಮೃತಿಯಿನ್ನು ಬಂದುವೊದಗಿದರೆ। ಸಂದೇಹಸ್ಥನಾಗಾ ಸಂಸಾರಕೆ ದೂರಾ। ಬಂಧಮೋಚಕ ಅದೆ ಮಧ್ಯಮ ಪ್ರಸಾದ। ಸಂದರ್ಶನ ಪೂರ್ವ ಸ್ವಚ್ಛಾದಕಿಂತಲಿ। ಹಿಂದಾಗುವವು ಸಂಚಿತಾಗಾಮಿ ಕರ್ಮವು। ಮಂದಮತಿಯು ನಾಶ ಮೊದಲಿಕಿಂತ। ಹಿಂದಾಗ ಈ ಮೇಲೆ ಹರಿಯ ದರಶನದಲ್ಲ್ಯಾ। ನಂದಾಭರಿತನಾಗಿ ಸಂಚರಿಸುವಾ। ಮುಂದೆ ಮುಂದತಿಶಯ ಸಮಾಧಿ ಸಾಧನ। ಪೊಂದಿ ಕೂಡ್ರುವನಾಹ ಜಡನಂದದಿ। ನಿಂದಿರದ ಬಾಹಿರ ಸ್ಮೃತಿಭೇರಿ ತಾಡಣವಾಗೆ। ಒಂದೆ ಅವನ ವ್ಯಾಪಾರ ವೃತ್ತಿನಾಶ। ಸಂದೇಹವಿಲ್ಲದಕೆ ಸದ್ಗುರು ಪ್ರಸಾದ। ಛಂದವಗಾಯಿತೆಂದು ಅರಿವದು। ವೃಂದಾರ ಕೇಂದ್ರ ಶ್ರೀಗೋಪಾಲ ವಿಠ್ಠಲ। ಒಂದು ಮಾತ್ರವು ಇಟ್ಟು ಸಕಲ ಸುಖ ಕೊಡುವ ॥೫॥

### ಅಟ್ಟತಾಳ

ಉತ್ತಮ ಪ್ರಸಾದ ಮತ್ತೆ ಲಕ್ಷಣ ಕೇಳು। ಪ್ರತ್ಯಕ್ಷವು ನೋಡು ಆವಾವ ವಿಷಯದಿ। ತತ್ವ ಸಂದೇಹವಿಲ್ಲ ಪ್ರಾರಬ್ಧ ಕರ್ಮವು। ಅತ್ಯಲ್ಪವಾಗಿನ್ನು ಕಡಿಗೆ ಆಗುವದು। ಹತ್ತಿದ ಲಿಂಗವು ಅಕಾರ್ಯ ಕಾರ್ಯವು। ಎತ್ತನೋಡಿದರು ಹರಿಯ ರೂಪಗಳೆಂಬ। ಚಿತ್ತವ್ಯಾಕುಲನಾಗ ಅಖಂಡ ಧ್ಯಾನದಿ। ಸತ್ಯಲೋಕದಿ ವಾಸವಾಗಿ ಅನಂತರ ಮುಕ್ತನಾಗುವ ತಾನು ಹಿಂದೆ ನಾನಾಜನ್ಮ। ಸುತ್ತಿ ಬಂದದನೆಲ್ಲ ನೆನೆದು ತನ್ನ ಮನೋ। ವೃತ್ತಿ ನಾನಾಪರಿ ವ್ಯಭಿಚರಿಸಿದದೆಲ್ಲ। ಉತ್ತಮರ ಕೂಡ ಸುಖಿಪೇಳಿಕೊಳ್ಳುತ। ಉತ್ಕಟವಾಗಿ ತಮಗಿಂದವರರಿಗೆ। ಮತ್ತೆ ತಮ್ಮೊಡನೆ ಭಕ್ತಿಯು ವೆಗ್ಗಳವ ಮಾ। ಡುತ್ತ ಆನಂದಭರಿತವಾಗುವನಾವ। ಸತ್ಯ ಸಂಕಲ್ಪ ಗೋಪಾಲ ವಿಠ್ಠಲನ್ನ। ಭಕ್ತರಲ್ಲಿ ಭಕ್ತಿ ಮುಕ್ತಸಾಧನವೇ ॥೬॥

### ಆದಿತಾಳ

ಹರಿಪರನೆನ್ನು, ಹರಿವಾರ್ತಿಯು ಕೇಳು ಹರಿಮಾತುಗಳಾಡು। ಹರಿಮೂರ್ತಿಯ ನೋಡು ಹರಿಪೂಜೆಯ ಮಾಡು। ಹರಿಗಡ್ಡವ ಬೀಳು ಹರಿಪರನಾಗು। ಹರಿಭಕ್ತರ ಕೂಡು ಹರಿಯನ್ನೆ ಬೇಡು। ಹರಿಯ ಹೊರತಿನ್ನು ಹರಿಗೆ ಬೀಳದಿರು। ಹರಿಯ ಮಾಯದಿನ್ನು ಹರಿಗುಣವ ತಿಳಿ। ಹರಿಯ ಭಕುತರಿಂದ। ಹರಿಯ ಮರೆದರಘಳಿಗೆ ಇರಸಲ್ಲ। ಹರಿಗರ್ಪಣ ಮಾಡು ಹರಿಮಾಡಿಸಿದ್ದೆಲ್ಲ। ಹರಿಯನ್ನು ತಿಳಿ ಗುರುಗಳಲಿನ್ನು। ಹರಿಧೇನಿಸಿ ಗುರುವಿನ ಗುರುತುಮಾಡು। ಹರಿ ಸರ್ವ ಕರ್ತು ಗೋಪಾಲ ವಿಠ್ಠಲನ್ನ। ಸ್ಮರಣೆಯು ಕ್ಲೇಶ ಹರ ಸುಖಕರ ॥೭॥

### ಜತೆ

ನೋಡಿ ಮಾಡು ಕರ್ಮ ಫಲದಿ ವಿರಕ್ತನಾಗಿ ।
ಬೇಡು ಗೋಪಾಲ ವಿಠ್ಠಲನಂಘ್ರಿಗಳ ಸೇವಾ ॥



## ಸುಳಾದಿ-೩೨

ಹರಿ ಸಕಲ ಕರ್ತನೆಂದು ಮಹಾಮಹಿಮೆಯನ್ನು ಅನೇಕ
ಉಪಮೆಗಳೊಂದಿಗೆ ಶ್ರೀ ಹರಿಯ ಸ್ವಾತಂತ್ರ್ಯ ವರ್ಣನೆ

### ರಾಗ-ಭೈರವಿ ಧ್ರುವತಾಳ

ನೀನು ಪುಟ್ಟಿಸಲು ಪುಟ್ಟುವ ಜೀವ ನಾನೈಯ್ಯಾ। ನೀನು ಪೋಷಿಸಲು ಪೋಷಿಸಿಕೊಂಬ ನಾನಯ್ಯ। ನೀನು ಚಲಿಸಲು ಚಲಿಸುವೆನಯ್ಯಾ ನಾನು। ನೀನು ತಡಹಲು ತಡಹುವೆನಯ್ಯಾ ನಾನು। ನೀನು ನುಡಿಸಲು ನುಡಿವದು ನಾಲಿಗಿ। ನೀನೆ ವ್ಯಾಪ್ತನು ಸ್ಥೂಲ ಸೂಕ್ಷ್ಮ

ದೇಹಗಳಲ್ಲಿ। ನೀನೆ ಕರ್ತಾ ಭೋಕ್ತಾ ನೀನೆ ಆಧಾರನು। ನೀನೆ ನೇಮಿಸಿದಂತೆ ಲಾಭ ನಷ್ಟಂಗಳು। ನೀನೆ ಸರ್ವ ಚರಾಚರ ಪ್ರೇರಕ ನೀನೆ। ನೀನೆ ಸ್ವಾತಂತ್ರ ಸ್ವಾತಂತ್ರ ಸ್ವಪ್ರಕಾಶ। ನೀನೆ ವ್ಯಾಪಕ ಸರ್ವ ಜೀವ ಜಗತ್ತಿನಲ್ಲಿ। ನೀನೆ ನೀನೆ ನೀನೆ ಗೋಪಾಲ ವಿಠ್ಠಲ ॥೧॥

### ಮಟ್ಟತಾಳ

ನಾನಾ ಯೋನಿಗಳಲ್ಲಿ ಜನಿಸಿ ಬರಲಿಕ್ಕೆ। ನಾನು ಸ್ವಾತಂತ್ರನೇನೊ ಪೇಳೆಲೊ ಹರಿಯೆ। ನೀನೆ ಸೃಷ್ಟಿಸುವೆ ಕರ್ಮನೆವನ ಮಾಡಿ। ಏನೋ ಕರ್ಮಕೆ ಸ್ವಾತಂತ್ರ ನಿನ್ನ ವಿನಹ ಉಂಟೆ। ನೀನೆ ಕಾರಣ ಯೋಗ್ಯತ ನಿನ್ನಾದೀನ। ಏನಾದ ಕರ್ಮದ್ವಯು ನೀನೆ ಮಾಡಿಪುವಿ। ನೀನೆ ಮಾಡಿದೆಂದು ನಿನಗೆ ಸಮರ್ಪಿತವು। ನಾನು ನಿನ್ನಾಧೀನ ಗೋಪಾಲ ವಿಠ್ಠಲ ॥೨॥

### ರೂಪಕತಾಳ

ಪೃಥಿವಿಪತಿ ಒಂದು ರಥವ ನಿರ್ಮಾಣವು ಮಾಡಿ। ಅತಿ ಉತ್ತಮವಾದ ವಾಜಿಗಳನ್ನು ಕಟ್ಟಿ ಮಥನಿಸಿ ಸೂತನೊಬ್ಬನಮಾಡಿ ಆಕ್ಷಣ। ರಥದ ಮಧ್ಯದಲ್ಲಿ ತಾ ಕುಳಿತು ಕಂದನಸಹ। ಪಥವನರಿತು ನಡಿಸೆಂದು ಸೂತಗೆ ಪೇಳೆ। ಯಥಾಯಥಾ ಮನದಿಚ್ಛೆ ಬಂದಂತೆ ನಡಿಸೋರು। ರಥಕೆ ಸ್ವಾತಂತ್ರ ಆವದು ಪೇಳೊ ಹರಿಯೆ। ರಥ ಎನ್ನ ದೇಹವು ಪೃಥಿವಿ ಪತಿ ನೀನು। ರಥಿಕರೆ ತಾತ್ವಿಕರು ಕಂದನಂದದಿ ನಾನು। ಅತಿ ಉತ್ತಮ ವಾಜಿಗಳೆ ಇಂದ್ರಿಯಗಳು। ಜತನಾಗಿ ಪಿಡಿದ ಹಗ್ಗವೆ ಎನ್ನ ಮನಸು। ಖತಿಯಿಂದ ಪಿಡಿದಟ್ಟುವ ಮಣಿಯೆ ಕರ್ಮಂಗಳು। ಆ ರಥಕೆ ಈ ರಥಕೇನು ಭೇದ ಉಂಟೆ। ಹಿತದಿಂದ ಪೇಳೆಲೊ ರಥಾಂಗಪಾಣಿಯೇ ಪಾ। ರಥನ ಪಾಲಕನೆ ಗೋಪಾಲ ವಿಠ್ಠಲ ಕೇಳೊ। ಸತತ ನೀ ಪ್ರೇರಕ ಸಥೆ ನಿನ್ನದೊ ॥೩॥

## ಝಂಪಿತಾಳ

ಪತಿಯು ತಾನಾಗಿ ತನ್ನ ಸತಿಗೆ ಪಾಪ ಪುಣ್ಯದ। ವ್ರತವ ಮಾಡೆಂದು ನಿರೂಪ ಕೊಡಲು ಇದೇ। ಶ್ರುತಿ ಸ್ಮೃತಿ ನಿರ್ಣಯಗಳು ಪೇಳುತಲಿವೆ। ಪತಿ ನೀನು ಎನಗೆ ಸತಿಯು ನಿನಗೆ ನಾನು। ಪತಿತ ಪಾವನ ಪಾಪನಿರ್ಲೇಪನಹುದು ಜಗ। ತ್ವತಿ ಎಂದೆನಿಸಿಕೊಂಬ ಅತಿಶಯವು ನಿನಗಯ್ಯಾ। ಹಿತದಿಂದ ಕೇಳೊಂದು ದೃಷ್ಟಾಂತರವು ಎನ್ನ। ಮತಿ ನೀ ಪ್ರೇರಿಸಿದಂತೆ ಪೇಳುವೆನೊ ಹರಿಯೆ। ಅತಿ ಸೀತ ಬಾಧಿಸೆವನ್ಹಿ ಆಶ್ರೈಸುವರೊ। ಜಿತವಾಗಿ ಸೀತವನ್ಹಿಗೆ ಲೇಪಿಸುವದೇ। ಪತಿತ ಪಾವನ ಪಾಪ ನಿರ್ಲೇಪ ನೀ ಸತ್ಯ। ದಿತಿಜಮರ್ದನನೆ ಗೋಪಾಲ ವಿಠ್ಠಲ ನಿನ್ನ। ಕೃತಿ ಅತಿ ಆಶ್ಚರ್ಯವು ಹಿತವೊ ಭಕ್ತರಿಗೆ ॥೪॥

## ತ್ರಿವಿಡಿತಾಳ

ತರಣಿ ಉದಿತನಾಗೆ ತಮವು ನಿಲ್ಲುವದೆ। ಗರುಡನೆದುರಿಗೆ ಉರಗ ಸರಸನಾಡುವದೆ। ಹರಿಯಕೂಡ ಕರಿ ತಿರುಗಿ ಕಾದುವದೆ। ಹರಿ ನಿನ್ನ ಕರುಣವಾಗಲು ದುರಿತದ ಭಯವೆ। ಸುರಪತಿ ವಜ್ರಕ್ಕೆ ಗಿರಿ ಪ್ರತಿನಿಧಿಯೆ। ಪರಮ ಬಲಾಢ್ಯನಿಗೆ ಹೇಡಿ ಅಂಜಿಕಿಯೆ। ಉರೆವ ಮಾರಿಗೆ ತೃಣವು ಅಣಕವಾಡುವದೆ। ಪರಮ ಪುರುಷ ನಿನ್ನ ಸ್ಮರಣೆ ಬಲವಿರಲಿಕ್ಕೆ। ದುರಿತಕಂಜೆನೊ ಜವನರದಂಡಕಂಜೆನೊ। ಪರಮ ದಯಾಳು ಗೋಪಾಲ ವಿಠ್ಠಲ ನಿನ್ನ। ಕರುಣಬಲಕಿನ್ನು ಮಿಗೆ ಬಲವಿಲ್ಲವೊ ॥೫॥

## ಅಟ್ಟತಾಳ

ನಿತ್ಯ ಪತ್ನಿಭಾವ ಲಕುಮಿಗಿತ್ತವ ನೀನು। ಸತ್ಯಲೋಕಾಧಿಪತ್ಯ ಬೊಮ್ಮಗಿತ್ತಲೊ ದೇವಾ। ಮೃತ್ಯುಂಜಯಗೆ ಕೈಲಾಸವಿತ್ತವ ನೀನು। ಭೃತ್ಯ ಇಂದ್ರಗೆ ತ್ರಿವಿಷ್ಟಪಕೊಟ್ಟೆಯ್ಯಾ ಈ। ಮರ್ತ್ಯುಲೋಕದ ಸಂಪದವಿಗಲ್ಲನೆ ಏಕ। ಛತ್ರಾಧಿಪತಿಗೆ ಒಂದು ಆಸ್ತಿನಾಸ್ತಿಗಳುಂಟೆ। ಅತ್ಯುನ್ನತ ನೀನು

ಅಹಿರಾಜತಲ್ಪನೆ। ಮುತ್ತಿವೆ ರೋಮ ರೋಮಕೆ ಕೋಟಿ ಬ್ರಹ್ಮಾಂಡ। ನಿತ್ಯ ಖಗನು ವಾಹನನೇನೊ ನಿನ್ನ। ಕೃತ್ಯ ನೋಡಲು ಅತ್ಯಾಶ್ಚರ್ಯ ತೋರುತಲಿದೆ। ಸತ್ಯಸಂಕಲ್ಪನೆ ಗೋಪಾಲ ವಿಠ್ಠಲ ಉತ್ತಮರಿಗೆ ಸುಲಭ ಭೃತ್ಯಪಾಲಕನೆ ॥೬॥

**ಆದಿತಾಳ**

ಜಲಧಿ ಪೊಕ್ಕರು ಬಿಡೆ ಜಲದಲಡಗೆ ಬಿಡೆ। ನೆಲದ ಮರಿಯಲಿ ಪೊಕ್ಕರೆ ನಿನ್ನ ಬಿಡೆನೊ। ಬಲುಘೋರ ರೂಪತನದಲಂಜಿಸಲು ಬಿಡೆ। ಸುಲಭದಿ ಗತಿಯಿಲ್ಲ ಯಾಚಕನೆನೆಬಿಡೆ। ಬಲವಂತಿಕೆಯಲಿ ಪರುಶ ತೋರಲು ಬಿಡೆ। ತಲೆ ಜಡೆಗಟ್ಟಿ ತಪಸಿಯಾದರು ಬಿಡೆ। ಕುಲಹೀನನಾಗಿ ದನಗಾಯದರು ಬಿಡೆ। ಬಲು ಅರ್ಭಕನೆಂದು ಬತ್ತಲಾದರು ಬಿಡೆ। ಸಿಲುಕದೆ ವಾಜಿಯನೇರಿ ಓಡದಂತೆನ್ನ। ತಲೆ ನಿನ್ನ ಕಾಲಿಗೆ ಕಟ್ಟಿ ಕೆಡಹುವೆನೊ। ಖಳರವಂಚಿಕೆ ವೇಷಗಳು ಬಲ್ಲೆನೊ ನಾನು। ಸುಲಭದಿಂದಲಿ ಕಾಯೊ ಗೋಪಾಲ ವಿಠ್ಠಲ ॥೭॥

**ಜತೆ**

ಗಿರಿಯನೆತ್ತುವನಿಗೆ ಹರಳು ಭಾರವೆ ದೇವ ।
ಪೊರಿ ಎನ್ನ ಕರುಣಾಳೆ ಗೋಪಾಲ ವಿಠ್ಠಲ ॥೮॥



## ಸುಳಾದಿ–೩೩

ಸಕಲವು ಅನಿತ್ಯ ಅಸಾರ ಡೊಂಬನ ಗೂಡಿನಂತೆ ಇರುವುದನ್ನು ನಂಬಬೇಡ. ಸಕಲವೂ ಹರಿಯಾಧೀನ ಚಿಂತಿಸು.

## ರಾಗ-ಮಧ್ಯಮಾವತಿ ಧ್ರುವತಾಳ

ಎಲ್ಲಗೇಹ ಎಲ್ಲದೈಯ್ಯಾ ವೃತ್ತಿ ಕ್ಷೇತ್ರ ಎಲ್ಲದೈಯ್ಯಾ ಗ್ರಾಮ ಸ್ಥಳವು ಎಲ್ಲದೈಯ್ಯಾ ದೇಶವಾಸ। ಎಲ್ಲದಯ್ಯಾ ಧನವು ಧಾನ್ಯ ಎಲ್ಲದಯ್ಯಾ ಸತಿಯು ಸುತರು। ಎಲ್ಲದಯ್ಯಾ ವಸನ ಪಶುವು ಎಲ್ಲದಯ್ಯಾ ಬಂಧುಬಳಗ। ಎಲ್ಲದಯ್ಯಾ ಒಡಿವಿಗಳು ಎಲ್ಲದಯ್ಯಾ ಕರಿ ಊಷ್ಟ್ರಗಳು। ಎಲ್ಲದಯ್ಯಾ ಆಳು ವೇಳ್ಯಾ (ವ್ಯಾಳೆ) ಎಲ್ಲದಯ್ಯಾ ಕೂಪತಟಾಕ। ಎಲ್ಲದಯ್ಯಾ ಸಿರಿ। **ವೃಕ್ಷಗಳು ಎಲ್ಲದಯ್ಯಾ ಮುತ್ತು ಮಾಣಿಕ್ಯಾ। ನಿಲ್ಲದೆ ಪೋಗೊ ನೀರ ಗುಳ್ಳಿಯಂತೆ ದೇಹಕ್ಕೆ। ಇಲ್ಲದ ಕರ್ತೃತ್ವ ಇನ್ನೆಲ್ಲಿಂದ ಪಚ್ಚಿ ಕೊಂಬಿ।** ಸಲ್ಲದು ನಿನಗೀವಾಕು ಎಲ್ಲಿ ಪೋದರು ಅನ್ಯ। ಗೆಲ್ಲಲಾರಿಯೊ ಜೀವ ಬಲ್ಲವಿಕೆಲ್ಲ ನಿನಗೆ। ಎಲ್ಲ ನನ್ನದೆಂಬೊದು ಒಳಿತಲ್ಲವೊ ನಿನಗೆ। ನಿಲ್ಲಿಸಿ ನಿನ್ನ ಮುಂದೆ ಎಲ್ಲವು ಹೋಹಾಗಲಿ। ಕಲ್ಲುಹೊಡೆದಂತೆ ನೀ ಮೆಲ್ಲನೆ ನೋಡುತಿಪ್ಪೆ। ನಿಲ್ಲದೆ ನೀನು ಬಿಟ್ಟು ಚಲ್ಲಿಹೋಗುವಾಗಲಿ। ಹುಲ್ಲುಕಡ್ಡಿಯನ್ನ ನೀ ಬಾಯಲ್ಲಿ ಕೊಂಡು ಹೋಗುವ್ಯಾ। ಎಲ್ಲ ರೂಪದಲ್ಲಿ ಶ್ರೀ ವಲ್ಲಭ। ಅಲ್ಲಲ್ಲಿ ತಾನೆ ಇದ್ದು ಜೀವನೆಲ್ಲರ ಪಾಲಿಸಿನ್ನು। ಗುಲ್ಲು ಎಬ್ಬಿಸಿ ಪ್ರಳಯದಲ್ಲಿ। ಎಲ್ಲರ ನುಂಗೊ ಬಲ್ಲಿದ ರಂಗ ನಾಮ। ಗೆಲ್ಲಿರಿಗೊಡಿಯ ಕಾಣೊ। ಮಲ್ಲ ಮರ್ದನ ರಂಗ ಗೋಪಾಲ ವಿಠ್ಠಲ ತಾ। ಬಲ್ಲದೆ ಮಾಡಿಸುವ ಎಲ್ಲ ಕಾಲದಲಿನ್ನು ॥೧॥

## ಮಟ್ಟತಾಳ

ಖಣದವೊಳಗೆ ಧಾನ್ಯವಣಗಹಾಕಿದರೆ। ಮನಿಗೆ ತರಲಾಗಿ ಖಣದಲಿ ಉಳಿದ ಅಷ್ಟು। ವನಕಿಯಿಂದಲಿ ಧಾನ್ಯ ಘನವಾಗಿ ಕುಟ್ಟಿದರೆ। ವನಕಿ ನುಂಗಿದವೆಷ್ಟು ಅನವರಿತು ನೋಡಿ। ಶುಣಕಗೆ ಪುಷ್ಕರಣಿ ಮಲ್ಕರ್ಣಿ ಇರಲು। ದಣಿ ಕುಡುವದೆ ಉದಕ ಕೊನೆನಾಲಿಗಿ ಎಲ್ಲದೆ। ಮಣಕಕೆ ಸೇರು ತುಪ್ಪ ಮನಿಯೊಳಗಾದರೆ। ಮಣಕಕೆ ಬಂದದೇನು ಮಡಿಯ ಮಾತ್ರವು। ಕನಸಿನೊಳಗೆ ಹಣವು ಕಂಡ್ಹಾಗೆ ಕೊಟ್ಟರೆ। ಎಣಿಸಿ ಕೊಡಬಲ್ಲ್ಯಾರಿಣದವಬೇಡಿದರೆ। ಮುನಸು ಗುಟ್ಟಿದವನ ಮುದ್ದಾಡಿದರಿನ್ನು।

ಮನಸಿಗೆ ಹರುಷತ್ವ ಮದಡ ಜೀವವ ಕೇಳು। ಧನತೂಗೋ ತಕ್ಕಡಿ ಮನಿಯೊಳಗಿರಲಿಕ್ಕೆ। ಧನ ಹೋದರೆ ತಕ್ಕಡಿನ್ನ ಕೇಳೊರುಂಟೆ। ಗುಣಹೀನ ಜೀವ ನಿನಗೆ ಅಲ್ಲದವೆಲ್ಲ ನನಗೆ। ನನ್ನದೆಂಬೊದೆನಿತು ನೀತಿಯ ಕಾಣೊ। ಸನಕಾದಿಗಳೊಡಿಯ ಗೋಪಾಲ ವಿಠ್ಠಲನ್ನ। ಅನುವಾಗಿ ನೀ ತಿಳಿದು ಗುಣವುಪಾಸನೆ ಮಾಡು ॥೨॥

## ತ್ರಿವಿಡಿತಾಳ

ಆರಿಗೆ ವಶವಲ್ಲದ ಲೆಂಕಿಯ ಕಟ್ಟಿದ। ಧೀರರಾದಂಥ ಸುರರಿಂದ ಪೂಜೆಯಗೊಂಡ। ಆ ರಾವಣನನು ಕಡಿಗೆ ಆದ ತೆರನು ನೋಡು। ಆರಾದರು ಆವಗೆ ಆಯುಷ್ಯವಿತ್ತರೆ। ಆರಿಂದ ಮರಣವು ಆಗಲಿಕ್ಕಿಲ್ಲವೆಂದು। ಆ ರುದ್ರನಿಂದ ವರವನು ಪಡಿದಿದ್ದಂಥ। ಆ ರಕ್ಕಸ ಹಿರಣ್ಯಕರಾದರುಳಹಿದರೆ। ಆರಿಗೆ ಆರಿಲ್ಲಾ ಹಾರದಿರಲೊ ಬರಿದೆ। ಕ್ರೂರ ಕಂಸನ ನೋಡು ದುರಿಯೋಧನರ ನೋಡು। ಆರು ಇವರಿಗೆ ತನ್ನವರು ಇದ್ದಿಲ್ಲವೇ। ದೂರು ಮಾತ್ರವೆ ತನ್ನವರು ತನ್ನದೆಂಬೋದು। ಆರಿಗಾರಿಲ್ಲ ವಿಚಾರವ ಮಾಡಲು। ಮೂರು ದಿನದ ಭಾಗ್ಯ ಸ್ಥಿರವೆಂದು ನಂಬಿನೀ। ಕಾರಣ ಕರ್ತನ ಮರಿಯದಿರು। ಸೇರು ಈತನ ವರದ್ವಾರದ ಬಳಿಯಲ್ಲಿ। ಕಾರುಣ್ಯದಿ ಪಾಲಿಸುವ ಕರುಣಾಕರ ರಂಗ। ಮಾರ ಜನಕ ಚಲುವ ಗೋಪಾಲ ವಿಠ್ಠಲನ್ನ। ಆರುಮೂರು ಭಕ್ತಿಲಿ ಭಾರಿಭಾರಿಗೆ ಸ್ಮರಿಸೊ ॥೩॥

## ಅಟ್ಟತಾಳ

ನಷ್ಟವೆಂಬೊದು ನನ್ನದೆಂಬೊದು ಬಲು ನಷ್ಟ। ಇಷ್ಟರೊಳಗೆ ಕೃಷ್ಣನೀನೆ ಎಂಬೋದು। ನಿಷ್ಟಕಷ್ಟದೊಳಗೆ ಪುನಃ ಹುಟ್ಟಿಹೋಹೊದೆ ಕಷ್ಟ। ನಿಷ್ಠೆಯೊಳಗೆ ಹರಿಸ್ಮರಣೆ ಮಾಡೋದೆ ನಿಷ್ಟಾ। ಅಷ್ಟಕರ್ತೃತ್ವವು ಶ್ರೀಹರಿ ಆಧೀನವು ಎಂದು। ಭ್ರಷ್ಟ ಸಂಸಾರವು ದಾಟುವವನೆ ಧಿಟ್ಟ। ಸೃಷ್ಟಿಗೊಡಿಯನಾದ ಗೋಪಾಲ ವಿಠ್ಠಲ। ಮುಟ್ಟಿ ಪೂಜಿಸುವರ ಬಿಟ್ಟೆನೆಂದರು ಬಿಡ ॥೪॥

### ಆದಿತಾಳ

ಧರಿಯೊಳು ಇದ್ದಂಥ ಈ ಪರಿಪರಿ ಪದಾರ್ಥ। ಹರಿಯಿಂದ ನಿರ್ಮಿತಕರವಾದವು ಎಲ್ಲ। ಅರಿದುನೋಡಿ ಇನ್ನು ಕರಕರೆಗಳು ಬಿಟ್ಟು। ಕರಣ ಶುದ್ಧಿಯಲಿನ್ನು ಕರವಡ್ಡಿಕೊಂಡು ನಿಂದು। ವರ ಉದಕದಲಿಂದ ಹರಿಗರ್ಪಿತವೆಂದು। ಹರುಷದಲಿತಿನ್ನು ಸ್ಥಿರ ಪದವಿಯ ಪಡಿ। ಬರಿದೆ ನನ್ನದು ಎಂಬೊ ಮರುಳ ಕರ್ತೃತ್ವವ। ಮರದು ದುರ್ವೃತ್ತಿಯ। ತೊರೆದು ಲೌಕೀಕವ। ಕರುಣಾಕರ ರಂಗ ಗೋಪಾಲ ವಿಠ್ಠಲನ್ನ। ಶರಣರ ಮರೆಬಿದ್ದು ನೆರೆ ಬದುಕನುಗಾಲಾ ॥೫॥

### ಜತೆ

ಡೊಂಬನ ಗೂಡಿನಂತೆ ನಂಬದಿರೀದೇಹ ।
ನಂಬು ಗೋಪಾಲ ವಿಠ್ಠಲನಂಬುಜ ಚರಣ ॥೬॥



## ಸುಳಾದಿ-೩೪

ಅನೇಕ ಜಡಚೇತನರ ನಾನಾಬಗೆ ವ್ಯಾಪಾರ ಹರಿಯಾಧೀನ ಚಿಂತನೆ, ಅಹಂ ಕರ್ತೃತ್ವಾಭಿಮಾನಬಂಧಕವು, ಬಂಧನಿವೃತ್ತ ಸೂತ್ರಾಧಾರನ ವ್ಯಾಪಾರ ತ್ರಿಳಿ.

### ರಾಗ-ಭೈರವಿ ಧ್ರುವತಾಳ

ಪ್ರಸ್ತವ ಮಾಡುವಂತೆ ಕರ್ತನಾನಲ್ಲವಯ್ಯ। ವಸ್ತು ಬೇರೆ ಇದ್ದಾನೆ ಒಳಗೊಳಗೆ ನೋಳ್ಪದು। ಪುಸ್ತಕವಲ್ಲವಿನ್ನು ಬಿಚ್ಚಿ ತೋರಿಸಲು। ವಿಸ್ತರಿಸಿ ನೋಡಿರಿ ವಿವೇಕರು। ಅಸ್ತಮಾನತನಕ ಆದಸೇವೆಗೊಂಬೊ ಗ್ರ। ಹಸ್ತ ನಮಗೆಲ್ಲರಿಗೊಡಿಯ ಕಾಣೊ। ಹಸ್ತಕನ ಪಿಡಿದು ಕರ್ತೃ ಎನಗೆಂದರೆ

ಹುಸ್ತು (ಹುಸಿದು) ಹೋದವು ನಿಮ್ಮ ವಚನಂಗಳು। ಹೊಸ್ತಲಮುಂದೆ ನಿಂತು ಗೋವಿಂದನೆಂದರೆ। ವಸ್ತುವೆನಿಸೂದೆ ತಾ ನಮಸ್ಕಾರಕ್ಕೆ। ಕಸ್ತೂರಿ ಭರಣಿವಳಗೆ ಪರಿಮಳಯಚದರೆ। ವಸ್ತು ಇದೆ ಎಂಬೊರೆ ಭರಣಿಯನು। ದುಸ್ತರ ಎಮಗೆ ಇದು ಆಸ್ತಿಕತನದಿ ನೋಡಿ। ಸ್ವಸ್ಥದಲಿ ಇಪ್ಪೊದು ಯೋಚಿಸದೆ। ವಸ್ತುವಾಹನ್ನ ಗೋಪಾಲ ವಿಠ್ಠಲನೆ ಸ। ಮಸ್ತ ಮಾಡಿ ಮಾಡಿಸುವ ಬಗೆಯ ಕೇಳಿ ॥೧॥

### ಮಟ್ಟತಾಳ

ಒಂದು ಜೀವರಲ್ಲಿ ಕರ್ತನಾಗುವನು। ಒಂದು ಜೀವರಲ್ಲಿ ಭೋಕ್ತನಾಗುವನು। ಒಂದೊಂದು ಪದಾರ್ಥದಲ್ಲಿ ತಾನೇ ನಿಂದು। ಒಂದೊಂದು ರೂಪದಿ ಒಂದು ಆಗಿ ಬಂದು। ಒಂದಕ್ಕೊಂದು ಭೇದ ಒಂದು ವಿಷಯದಲ್ಲಿ। ಒಂದೆ ಒಂದಾಗುವ ಒಂದರಲ್ಲಿ ನೋಡೆ। ಒಂದರ ದ್ವಾರದಿ ಒಂದಕ್ಕೆ ಫಲವಿತ್ತು। ಒಂದರ ದ್ವಾರದಿ ಒಂದಕ್ಕೆ ಉಣಿಸುವ। ಒಂದರಲ್ಲಿಪ್ಪ ಒಂದರಲ್ಲಿ ಇಲ್ಲ। ವೆಂದು ಆಡಲು ಸಲ್ಲ ಇಂದಿರೆ ಅರಸನ್ನ। ಒಂದೆ ದೈವ ನಮ್ಮ ಗೋಪಾಲ ವಿಠ್ಠಲ। ವಂದಿಸಿ ತಿಳಿವರಿಗೆ ಆನಂದಬಿಡುವಾ ॥೨॥

### ರೂಪಕತಾಳ

ತಾ ಯೆಂದೆನಿಸಿಕೊಂಡು ತಾನೆ ತಾಹೂವಾನು (ತರುವನು)। ಬಾ ಎಂದೆನಿಸಿಕೊಂಡು ತಾನೆ ಬಾಹೂವಾನು (ಬರುವನು)। ಓ ಎಂದೆನಿಸಿಕೊಂಡು ತಾನೆ ಓಗ್ಗುಟ್ಟುವಾ। ಕೋ ಎಂದೆನಿಸಿಕೊಂಡು ತಾನೆ ಕೊಂಬುವನು। ಅ. ಎಂದು ಕ್ಷ. ಎಂದು ಐವತ್ತೊಂದಕ್ಷರ। ಬಾಯಿಂದ ಉಚ್ಚರಿಸಿ ಕಾಯ ಶುದ್ಧಿಯ ಮಾಡಿ। ಮಾಯ ಪೊಂದಸದಂತೆ ತತ್ವಗಳ ತೋರಿಸಿ। ನ್ಯಾಯದಿಂದಲೇವೆ ಕರ್ಮಗಳ ಮಾಡಿಸಿ। ತಾ ಇಸಕೊಂಬವ ತಡವಿಲ್ಲದೆ ಭಕುತಿ। ಬಾಯಬಡಿಯ ಭಕ್ತರಿಂದ ಮಾಡಿದ ಕರ್ಮ। ಬಾಯ

ಬಿಡುವ ಭಕ್ತರಲ್ಲದವರದಿನ್ನು। ನಾಯಕನಾಗಿ ಸರ್ವರಂತರದಿ ನಿಂತು। ನಿಯಾಮಕನಾಗಿ ನಿತ್ಯಕುಣಿಸ್ಯಾಡುವ। ಮಯಾರಹಿತ ದೇವ ಗೋಪಾಲ ವಿಠ್ಠಲ। ತಾಯಿ ಆಲಿಸಿದಂತೆ ತನ್ನವರನು ಪೊರೆವ ॥೩॥

## ಝುಂಪಿತಾಳ

ನಾನೆ ಕರ್ತನೆಂದು ನಾಲ್ಕು ದಿಕ್ಕುಗಳಿಂದ ನಾನಾ ಪದಾರ್ಥಗಳನ್ನು ತರಿಸಿ। ಜ್ಞಾನವಿಲ್ಲದ ಯಜ್ಞ ಸ್ನಾನ ಗೋದಾನ ಭೂ। ದಾನ ಹಿರಣ್ಯ ಭೂಸುರರಿಗುಣಿಸಿ। ನಾನಾವ್ರತ ಚಾಂದ್ರಾಯಣಾದಿ ತಪಸುಗಳಿನ್ನು। ಗಾನ ಗಾಯತ್ರಿ ಜಪ ಮೌನಗಳು। ಏನು ಏಸೊಂದು ಪರಿಕರ್ಮಗಳು ಮಾಡಿದರು। ಶ್ರೀನಿವಾಸನು ಇದರಿಂದೊಲಿವನೇ। ಏನು ಮಾಡಿದುದೆಲ್ಲ ವಿಧಿಯು ಆಶ್ರಮ ಧರ್ಮ। ಕಾಣದಿದರೊಳಗೆ ಹರಿ ಕಾಣಿಸುವದು। ಕಾಣದ ಕರ್ಮ ಅನಂತ ಮಾಡೊದಕ್ಕಿಂತ। ಜ್ಞಾನ ಪೂರ್ವಕದಿ ಗೆಲುವ ಯೋಚನೆ। ತಾನು ತನ್ನರಿತು ತವಕವ ಬೀಳದಲೆ ಮಾನಸದಲಿ ಹರಿಗೆ ಮಾರಿಯ ಹೊಕ್ಕು। ನೀನು ಎನ್ನ ಸ್ವಾಮಿ ನಾನು ಭೃತ್ಯನೆಂದು। ಖೂನವರಿದನ ಕುಡತಿ ಜಲವ ಪಿಡಿದು। ದೀನ ರಕ್ಷಕನೆಂದು ದೈನ್ಯಬಟ್ಟಿತ್ತರೆ। ಏನೇನು ಇದಕೆ ಸಮಾನ ಉಂಟೇ। ದಾನ ವಾಂತಕನು ಗೋಪಾಲ ವಿಠ್ಠಲ ನನ್ನ। ನೀನೆ ಗತಿ ಎಂದವರಿಗೆ ನಿಜವ ತಿಳಿಪುವ ॥೪॥

## ತ್ರಿವಿಡಿತಾಳ

ನಿತ್ಯದಿ ನಿಷ್ಕಾಮಕ ಕರ್ಮವ ಮಾಡೆ। ಪ್ರತ್ಯಕ್ಷನಾಗಿ ತಾನಿತ್ಯುಳ್ಳ ಫಲವೀವ। ಸತ್ಯ ಅದಕೆ ಫಲವಿತ್ತರೆ ತಪ್ಪನು। ಭಕ್ತರಿಚ್ಛೆಗನಾಗಿ ಬಹುವೇಗವೊಲಿವುವ। ಮತ್ತೊಂದು ಫಲಕಾಗಿ ಮತ್ತೆ ಕರ್ಮವು ಮಾಡೆ। ದೈತ್ಯರ ದ್ವಾರದಿ ಫಲವನೀವಾ। ನಿತ್ಯವಲ್ಲವು ಅದು ತತ್ಕಾಲಕೆ ಸುಖ। ಚಿತ್ತಜನಯ್ಯನ ಚರಿತೆ ಹೀಗೆ। ಭಕ್ತರಾದರು ಇಂಥ ಕರ್ಮ ಮಾಡಿದರೆ। ಕ್ಲಪ್ತಕೆ ಕಡಿಮಿಲ್ಲ ಅಧಿಕಾನಂದವು ಹ್ರಾಸಾ। ಉತ್ತಮ ಅಪರೋಕ್ಷ

ಆದಮೇಲಕೆ ಇನ್ನು। ಆತುಮಾರ್ಥವಾಗಿ ಹಿಂದೆ ಮಾಡಿದ ಕರ್ಮ। ಜತ್ತಾಗಿ ಪ್ರಾರಬ್ಧವಾಗಿ ಉಣಿಸುವದು। ಮತ್ತೆ ಅದರಿಂದಲಿ ಮೀರಲೋಶವೆ। ಸತ್ಯಸಂಕಲ್ಪ ಗೋಪಾಲ ವಿಠ್ಠಲನ್ನ। ಭಕ್ತರಿಗೆ ಕೇಡಿಲ್ಲ ಭಯವು ಇಲ್ಲ ॥೫॥

### ಅಟ್ಟತಾಳ

ಒಂದು ಫಲವು ಒಬ್ಬನಿಂದ ಆದರೆ ಇನ್ನು। ಎಂದಿಗವನ ಉಪಕಾರವಯರಿಯದು। ಬಂಧಕ ಎಮಗೆ ಅನಾದಿ ಕಾಲದಲಿಂದ। ಇಂದದ್ದು ತನ್ನ ಛಂದುಳ್ಳನೋಟದಿ। ಛಿಂದಿಸಿ ನಮ್ಮ ಆನಂದವ ಬಡಿಸುತ। ಹಿಂದೆ ಮುಂದೆ ಅನಿಮಿತ್ಯ ಬಂಧು ಆಗಿ। ಇಂದಿರಾಪತಿ ದಯಸಿಂಧು ಕರುಣಾಳು। ಕಂದರ್ಪ ಜನಕ ಗೋಪಾಲ ವಿಠ್ಠಲನ್ನ। ಎಂದಿಗೆ ಮರಿಯೆ ನಾ ಮನಮಂದಿರದೊಳಗೆ ॥೬॥

### ಆದಿತಾಳ

ನೋಡಿ ಬಲ್ಲೆವದರಿಂದಲಿ ನೀಡಿ ಬಲ್ಲೆವದರಿಂದಲಿ। ಮಾಡಿ ಬಲ್ಲೆವದರಿಂದಲಿ ಬೇಡಿಬಲ್ಲೆವಂದರಿಂಡ। ನೋಡಿದದಕೆ ಇನ್ನು ಸರಿ ದೈವವಿನ್ನು ಯಲ್ಲಿಗಾಣೆ। ನೀಡಿದದಕು ಈತನಿತ್ತ ಫಲಕು। ಇನ್ನು ಸರಿಯುಗಾಣೇ। ಮಾಡಿದದಕೂ ಈತ ತಿಳುವಂತೆ ದೈವಿನ್ನೊಂದು ಕಾಣೆ। ಬೇಡಿದದಕೆ ತಾನೆವೊಲುವ ಗಾಡಿಕಾರ ಗೋಪಾಲ ವಿಠ್ಠಲ ॥೭॥

### ಜತೆ

ಕರ್ತು ಎನಿಸುವ ನಮ್ಮ ಕರ್ತು ಮಾತ(ತ್ರ)ನಾಗಿ ।
ಸೂತ್ರಧಾರಕ ದೇವ ಗೋಪಾಲ ವಿಠ್ಠಲ ॥೮॥



# ಸುಳಾದಿ-೩೫

ಹರಿ ಸ್ವಾತಂತ್ರ ಜೀವ ಪರತಂತ್ರನೆಂದು ತಿಳಿದವಗೆ ಪಾರತಂತ್ರ ದೂರನಾದ ಶ್ರೀಹರಿಯುವೊಲಿವನು.

## ರಾಗ ಮಧ್ಯಮಾವತಿ ಧ್ರುವತಾಳ

ಆವನ್ನೀಧರಿಯ ವ್ಯಾಪ್ತನೆಂದೆನಿಸುವ। ಆವ ಪುರುಷನೆ ನಮ್ಮ ಸ್ವಾಮಿ ಕಾಣೊ। ಆವಾವ ನಿರ್ದೋಷ ಎಂದೆನಿಸುವನೊ। ಅವನೆ ಎನ್ನ ಭಾಗ್ಯದೊಡೆಯ ಕಾಣೊ। ಆವಾವ ಜ್ಞಾನ ಪೂರ್ಣ ಪೂರ್ಣನೆಂದೆನಿಪನೊ। ಆವನ್ನೆ ಎನ್ನ ಮನದೊಡಿಯ ಕಾಣೊ। ಆವಾವ ಸರ್ವತ್ರ ವ್ಯಾಪ್ತನಾಗಿಪ್ಪನೊ। ಆವನೇ ಎನಗೆ ಮುಖ್ಯವಿಷಯ ಕಾಣೊ। ಆವನಿಂದ ಜಾಗ್ರವು ಸೃಷ್ಟಿ ಸ್ಥಿತಿಲಯವು। ಆವನೇ ಎನ್ನದಾತಾ ಶ್ರೀತನು ಕಾಣೊ। ಆವನಿಂದ ಬಂಧಕ ಮೋಚಕಾದುದೊ। ಆವನೆ ಈಗ ಮನ ಪಿಡಿಯೊ ಕಾಣೊ। ಆವನ್ನ ಕಾವನ್ನ ಬಾವನ್ನ ತಾವನ್ನ। ಈವನ್ನ ಪಾವನ್ನ ಪೂರ್ಣ ಗುಣ ಸಂಪನ್ನ। ಮಾವನ್ನ ಮರ್ದನ ಗೋಪಾಲ ವಿಠ್ಠಲನೆಂಬ। ದೇವನ್ನ ತಂದು ತೋರು ಅನುಭವಕ್ಕೆ ॥೧॥

## ಮಟ್ಟತಾಳ

ರಮ್ಮೆಯ ಅರಸನ್ನ ಬೊಮ್ಮನೈಯ್ಯನ್ನ। ಮೊಮ್ಮಗನೆಂದೆನಿಪ ಹರನ ಪೊರೆವನ್ನ। ಸುಮ್ಮನಸರನೆಲ್ಲ ಪರಿವಾರವು ಮಾಡಿ। ಬೊಮ್ಮಾಂಡವೆ ಮನಿಯ ಗಮ್ಯನೆಂದೆನಿಪನ। ಸುಮ್ಮನೆ ಹೋಗಿನ್ನು ಒಮ್ಮನದಲ್ಲಿ। ಘಮ್ಮನೆ ಅಳಗಿರಿ ತಿಮ್ಮನ್ನ ಕರದು ತಾ। ನಮ್ಮ ಸ್ಥಿತಿಯ ಪೇಳಿ ಸಮ್ಮತಿಸಿಕೊಂಬಾ। ಇಮ್ಮನ ಬೇಡಿದಕೆ ಈಗಲೆ ಸಮ್ಮ್ಯ ಇದಕೆ। ನಮ್ಮ ಪೊರೆವದಾತಾ ಗೋಪಾಲ ವಿಠ್ಠಲ। ಹಮ್ಮೆ ತೊರೆದು ಅಧಮ್ಮನೆಂದವಗೊಲಿವಾ ॥೨॥

### ರೂಪಕತಾಳ

ಆವನಲ್ಲಿ (ಜೀವನಲ್ಲಿ) ಅಸ್ವತಂತ್ರವೆಂಬೋದು ಸಿದ್ಧ। ಆವನಲ್ಲೆ ಅವನಿರೂಪ ಅನುಭವ ತೋರುತಾ। ಅವನೆ ಅವನ ಮಹಿಮೆಯನು ಬಲ್ಲವ। ಅವನೆ ಸಕಲ ವಿಧಿಯನು ಮಾಡಿದವ। ಪಾವನ್ನನಾಗುವ ಅವನೆ ಕಂಡರೆ ಮನುಜ। ಈ ವೇಳ್ಯೆದಲಿ ಮನವೆ ಅನುಭೋಗವಲ್ಲದೆ। ದೇವಕಿನಂದನ ಗೋಪಾಲ ವಿಠ್ಠಲ ತ। ನ್ನವನೆಂದವನಿಗೆ ತನ್ನ ತೋರಿಸಿಕೊಂಬ ॥೩॥

### ಅಟ್ಟತಾಳ

ಕುಣಿದು ಕುಣಿಸುವ ಮಣಿದು ಮಣಿಸುವ। ಉಣಿಸುವ ನುಂಡು ತನಗಭೇದಾಗಿ। ಎಣಿಕೆ ತಟ್ಟುವನಲ್ಲ ಅನುಮಾನವಸ್ತಲ್ಲ। ಘನಜಾಗ್ರ ಪ್ರತಾಪ ನಿತ್ಯವ್ಯಕ್ತ ದೇವ। ಎಣಿಸು ಮನವೆ ನಿನ್ನ ಎಲ್ಲ ಪ್ರಾವರ್ತಕ। ಕ್ಷಣಕ್ಷಣಕೆ ಇನ್ನು ಕಾಣಿಸುವನು ಆ। ರನು ನಾಚದೆ ಪಿಡಿಯಿನ್ನು ನೂಕು ಸಕಲ ಅಘ। ಕ್ಷೀಣಿಸಿ ಪೋಗುವದಿದಕೆ ಅನುಮಾನ ಸಲ್ಲದು। ಘನಮಹಿಮ ನಮ್ಮ ಗೋಪಾಲ ವಿಠ್ಠಲನ್ನ। ನೆನೆಸುವದೆ ಸುಖ ನಿನಗದೆ ಬಹುಲಾಭ ॥೪॥

### ಆದಿತಾಳ

ಭಕ್ತರಿಗೆ ಭಕ್ತನಾಗು ಮುಕುತಿ ಬೇಕಿಚ್ಛೆ ಇತ್ತೆ। ಸಕಲ ವಿಷಯದಿ ವಿರಕ್ತಿವುಳ್ಳವನಾಗು। ಕಕುಲಾತಿ ಬಿಡು ಇನ್ನೊಂದು ದೈವಿಲ್ಲಯೆಂದು। ಲಕುಮಿರಮಣನಲ್ಲಾಸಕುತಿಯುಳ್ಳವನಾಗು। ಸಕಲ ವಿಧಿ ನಿಷೇಧ ಹರಿಗೆ ಆಧಿನವೆಂದು। ಉಕುತಿಗಳಿಂದ ಹರಿಯ ತುತಿಗೆ ದೀಕ್ಷಿತನಾಗು। ಭಕುತವತ್ಸಲ ರಂಗ ಗೋಪಾಲ ವಿಠ್ಠಲ। ಸಕಲ ಬಂಧವ ಬಿಡಿಸಿ ಸುಖ ಅಂಬುಧಿಯೊಳಿಡುವ ॥೫॥

**ಜತೆ**

ಸ್ವಾತಂತ್ರಾ ಸ್ವತಂತ್ರ ತಿಳಿದವನಿಗೆ ಪಾರು ।
ತಂತ್ರವಿದೂರ ಗೋಪಾಲ ವಿಠ್ಠಲವೊಲಿವ ॥೬॥

❖ ❖ ❖

## ಸುಳಾದಿ–೩೩

ಕಾರಣವಿಲ್ಲದೇ ಕಾರ್ಯಮಾಡಿಸುವರಾರಿಲ್ಲಿ. ಮುಖ್ಯ ಕಾರಣ ವಿಷ್ಣು. ಸ್ವಾತಂತ್ರನಿಂದೆಲ್ಲ ಕಾರ್ಯವಾಗುವವು.

**ರಾಗ–ಭೈರವಿ ಧ್ರುವತಾಳ**

ಸರಿಯಾಗಿ ಸಖನಾಗಿ ಸರ್ವೇಶನೆ। ಅರಸಾಗಿ ಆಳು ಆಗಿ ಅಪ್ರಮೇಯ। ಸರಸಾಗಿ ವಿರಸನಾಗಿ ಸಿರಿ ಹರಿಯೆ। ಇರಳಾಗಿ ಹಗಲಾಗಿ ಶ್ರೀ ವಿಷ್ಣುನೆ। ನರಕಾಗಿ ಸ್ವರ್ಗವಾಗಿ ನಾರಾಯಣ। ದೂರಿತನಾಗಿ ದೂರಾಗಿ ದುರುಳಾಂತಕ। ವರ ಮಾತಾಪಿತನಾಗಿ ಪುರುಷೋತಮ। ಪುರನಾಗಿ ಕಾನನಾಗಿ ಪುರಂದರಾ। ತುರವಾಗಿ ಕರುವಾಗಿ ದಾಮೋದರ। ಮರಿಯಾಗಿ ಮಗನಾಗಿ ಮಂಗಳಾಂಗ। ಧರಿಯಾಗಿ ಧೈರ್ಯನಾಗಿ ಶ್ರೀಕೃಷ್ಣನೆ। ನೆರೆಯಾಗಿ ನೆಂಟನಾಗಿ ಶ್ರೀ ರಂಗನೆ। ಹೊರಗಾಗಿ ಒಳಗಾಗಿ ಅನಂತನೆ। ಸರಳಾಗಿ ಕಠಿಣವಾಗಿ ಸರ್ವಜ್ಞನೆ। ಪರವಾಗಿ ಇಹವಾಗಿ ಪರಮೇಷ್ಟಿಯೆ। ದೂರನಾಗಿ ಸಾರ್‍ಯಾಗಿ ಮುಕುಂದನೆ। ಕಿರಿದಾಗಿ ಹಿರಿದಾಗಿ ತ್ರಿವಿಕ್ರಮಾ। ವರನಾಗಿ ಅಭಯನಾಗಿ ವಾಸುದೇವ। ಜಿರಿದಾಗಿ ಅಲ್ಪವಾಗಿ ಸಿರಿಕಾಂತನೆ। ಎರಡಾಗಿ ಏಕೋನಾಗಿ ಸಿರಿ ಕಾಂತನೆ। ಪರಿಪಾಲಿತನಾಗಿಪ್ಪ ಬಿಡದೆ ಎಂದೆಂದು ಎನ್ನ। ಸಂರಕ್ಷಿಸುವ ಭಾರಕರ್ತಾ ಮುಕ್ತ ಅರಿದವರಿಗೆ ಲಭ್ಯಾ ಗೋಪಾಲ ವಿಠ್ಠಲ। ಧೊರಿಯೆ ಪೂರ್ಣಕಾಮ ನಿತ್ಯನಿರ್ಲಿಪ್ತ ॥೧॥

**ಮಟ್ಟತಾಳ**

ಬಲ್ಲೆನೆಂದನ ಅರಿಯಾ ಅರಿಯನೆಂದವ ಬಲ್ಲ। ಇಲ್ಲವೆಂದವ ಗುಂಟು ಇದ್ದೆನೆಂಬವಗಿಲ್ಲ। ಪೊಳ್ಳುಗಟ್ಟ್ಯಾಗುವದು ಗಟ್ಟಿ ಪೊಳ್ಳಾಗುವದು। ವಲ್ಲದವನೆವೊಲಿವಾ ವೊಲಿದು ಇದ್ದವ ಬಿಡುವ। ಕಲ್ಲು ಕಲ್ಲಿಗೆ ತಾಕಿ ಅಗ್ನಿ ಪೊರಟರಿನ್ನು। ನಿಲ್ಲು ಅದಕೆ ಒಬ್ಬ ಪುರುಷ ಬೇಕು। ಇಲ್ಲೊ ಸ್ತ್ರೀಲಿಂಗವು ಪುರುಷ ಎರಡು ಇದ್ದರೆ ಸೃಷ್ಟಿ ಎಲ್ಲ ಆಗುವದೆಂಬೊ ಸೊಲ್ಲನಾಡಲಿಬೇಡ। ಫುಲ್ಲಲೋಚನ ಕೃಷ್ಣ ಗೋಪಾಲ ವಿಠ್ಠಲ। ಎಲ್ಲರಿಂದಲಿ ಭೇದ ಅಭೇದನಾಗಿಪ್ಪ ॥೨॥

**ರೂಪಕತಾಳ**

ಧನದಿಂದ ವಿಕ್ರಯ ಸಕಲ ಪದಾರ್ಥವು। ಧನವ ವಿಕ್ರಯಿ ಪಂಥ ಅರ್ಥಾವದು। ಧನಕಿಂತ ಉತ್ತಮ ಮನುಜಾರಾವೆನೋಡು। ಎನಗಿಂದ ಉತ್ತಮರಾದವರ। ಅನುಸಾರ್‍ಯಾಗಿ ನಡೆದು ಅಲ್ಲಿದ್ದ ಹರಿಯಾ। ಗುಣಗಳೇವೆ ಧನವಮಾಡಿಕೊಂಡು। ಮನಿಯ ಮಾಡಿಕೊಂಡು ಮೂರು ಅವಸ್ಥೆಯ। ನೆನೆದು ನೆನೆದು ದಿನ ಒಪ್ಪಿಸುವೆ। ಸನಕಾದಿಪಳ ಪ್ರಿಯಾ ಗೋಪಾಲ ವಿಠ್ಠಲ। ಎನಗೆ ನೀ ವಿಷಯನೊ ಸರ್ವ ಪರಿಯಲಿ ॥೩॥

**ಝಂಪೆತಾಳ**

ಉಪಜೀವನವೆಂಬದಾವದು ನೋಡಲು। ವಿಪರೀತವಾಗಿಹುದು। ಈಗ ನೋಡ। ತಪರಹಿತನಾಗಿ ಬಿಂಬನ್ನ ಮರೆದು ಅನ್ಯವಿಷಾ(ವಿಷಯ)। ಉಪಜೀವನವೆಂದು ತೋಷಬಡುವೆ। ಕಪರ್ದಿಕವಾದರು ಲಾಭವಾದರು ಕಾಣೆ। ತಪಿಸುವೆನು ಹಗಲಿರುಳು ವಿಷಯದಿಂದ। ಸ್ವಪನದಲ್ಲ್ಯಾದರು ನಿಜಸುಖವನ್ನು ಕಾಣೆ। ಉಪವಾಸ ಬಹುಜನ್ಮದಿನವುದಾರ। ಕೃಪ ಪೂರ್ಣ ನೀ ಎನಗೆ ಗುಪಿತ ಸಖನಾಗಿದ್ದು। ಉಪವಾಸದಲಿ ಎನ್ನ ಇಡಲಿಬಹುದೇ। ಸಪುತ ದ್ವಿಲೋಕಕ್ಕೆ ಅನ್ನದಾತಾನೆಂದು। ಅಪರಿಮಿತ ನಿನ್ನ ಕೀರುತಿಯು

ಯುಕುತಿವಾದ। ಆರಾಧನಿಯ ಮಾಡಿ ಸಾರಭೋಕ್ತ ಸುಂದರ ಮೂರುತಿಯನು। ತೋರಿ ಎನ್ನೊಳಗೆ ಸ್ಫೂರುತಿಯನು ಕೊಟ್ಟು। ಕೀರುತಿ ನಿನ್ನದು ಕೊಂಡಾಡುತ ಸದಾ। ವಾರಣಾಸಿಯು ಮುಂತಾದ ಕ್ಷೇತ್ರಗಳೆಲ್ಲ। ತೋರಿಸಿ ಅಲ್ಲಲ್ಲಿ ಸ್ತೋತ್ರ ಮಾಡಿಸಿ ನಿನ್ನ ಚಾರು ಚರಣದಲ್ಲಿ ಸೇರಿಸಿ ಸಲಹುವದೊ। ಕಾರಣ ನೀ ಬಲ್ಲಿ ಎನ್ನ ತಂದದಕಿನ್ನು। ನಾರಾಯಣ ನಿನ್ನ ತುತಿಯ ಮಾಡಿಸು ಪೂರ್ಣ। ಮೀರಿ ಬಂದವು ದಿನ ಸಾರಿಪೇಳುತ ಹೀನೆ (ಲೀನೆ)। ಶಾರೀರವೆಂಬದು ಅನಿತ್ಯ ಬಲು ಸಿದ್ಧ। ಊರಿಗೆ ಮುತ್ತಿಗೆ ಬರುತಿರೆ ಎಂಬಂಥ। ವಾರುತಿ ಆದರು ಸಾರೋರಪರೋಕ್ಷ। ಭಾರ ನಿನ್ನದು ಕಂಡ್ಯಾ ಗೋಪಾಲ ವಿಠ್ಠಲ ವಿ। ಚಾರ ನಿನ್ನಲ್ಲಿರಳ್ಳಗಳೆನಗಿರಲಿ ॥೬॥

**ಆದಿತಾಳ**

ಛಲವಾಗಿರಿಸು ಮತ್ಕುಲ ಸ್ವಾಮಿಯೇ ನಿಹ। ಫಲವು ಅಧಿಕ ನೋಡಿ ಕಲಿಯುಗ ಸಾಧನ। ಹಲವು ಬಗೆಯಲ್ಲಿ ಬೇಡುವದೇನಿಲ್ಲ। ಸುಲಭದಿ ಸುರನದಿ ಸ್ನಾನವಮಾಡಿಸಿ। ಸ್ಥಳವ ಸೇರಿಸಿ ಬಂಧುಗಳ ಸಹಿತ ತಂ। ದಿಲ್ಲಿ ನಿಲಿಸಿದಮ್ಯಲೆನ್ನತಿಳದದ್ದು ಮಾಳ್ಪೋದು। ಕಳವಳ ಇದರ ಹೊರತೊಂದು ಕಾಣಿಸೊದಿಲ್ಲ। ಉಳಿದ ಧರ್ಮಗಳ ಬಲ್ಲನಾನಾಗಲಿ। ತಿಳಿವಿಕೆ ಬಲುಕೊಡು ನಿನ್ನ ಕಥೆಯಲ್ಲಿ। ಚಲಿಸದೆ ಮನಸಿಗೆ ನಿಲುಕುತ ನೀನಿರು। ಗೆಲಿದೆ ನಾನಾ ಸಂಕಲಿಪಿಸಿದದನೆಲ್ಲ। ಸಲಿಗೆಲಿ ಎನೆ ನಾ ಬಿನ್ನೈಸಿದದನೆಲ್ಲ। ಭಳಿಭಳಿರೆ ಸ್ವಾಮಿ ಭಕುತ ಜನರ ಪ್ರೇಮಿ। ಚಲುವ ಶುಭಕಾರ ಚಕ್ರ ಶಂಖಧರ। ಬಲು ವೈಚಿತ್ರ ಕೋಮಲ ಮನ ಪುರುಷ। ಜಲಜಾಕ್ಷನೆ ಮಹಾ ಕಲುಷ ಸಂಹಾರನೆ। ಜಲಜಸಂಭವ ಪಿತ ಜನನ ಮರಣ ದೂರ। ಚಲ ಅಚಲಾಗತ ಅಚಲಾನಂದನೆ। ಚಲಿಸುವ ಕರನ ಕುಂಡಲಗಳ ಪ್ರಭೆಯ। ಖಳೆಯಲಿ ಪ್ರಕಾಶಿತಾ ಮೊಗನೆ ಮನೋಹಾರಾವಳಿ ಪಂಕ್ತಿಯ। ಸುಜಠರ ಶಿರಿವತ್ಸ ಸುಳಿಯ ಗುಂಭಪೊಕ್ಕಳಕಟಿ ಸುಗುಣ। ಥಿಲಥಿಲಕು ಊರು ಎತ್ತಿ ಕುಣೋ ಚರಣ। ನಿಲಕುತ ಇರು ಎನ್ನ ಮನಕೆ

ಆಭರಣ। ಸುಲಭ ತಾರಕ ನೋಡು ಹರಿ ನಿನ್ನ ಸ್ಮರಣ। ಚಲುವ ದೇವರ ದೇವ ಗೋಪಾಲ ವಿಠ್ಠಲ। ಸಲಿಗೆ ಬಿನ್ನಪಿದೊಂದು ಸಲಿಸೋ ಹೇ ಜೀಯಾ ॥೭॥

**ಜತೆ**

ಕಾರಣಿಲ್ಲದ ಕಾರ್ಯಮಾಡುವರುಂಟೇನೈಯ್ಯ ।
ಕಾರಣ ಪುರುಷ ಕಾಯೊ ಗೋಪಾಲ ವಿಠ್ಠಲ ॥೮॥

❖ ❖ ❖

## ಸುಳಾದಿ-೩೭

ಸ್ವಾಮಿ ಭೃತ್ಯಭಾವದಿಂದ ಆಚರಿಸೆ ಮುಕ್ತಿಯಾಗುವದು ಹರಿಯಾಧೀನ.

**ರಾಗ-ವಸಂತಭೈರವಿ ಧ್ರುವತಾಳ**

ಏನೋ ನಿನ್ನ ಮಹಿಮೆ ಆನೇನು ಕೊಂಡಾಡುವೆ। ಜ್ಞಾನಾನಂದ ಕಾಯಾ ಲೋಕ ಮೋಹಕ ದೇವ। ದೀನ ಜನರ ಪಾಲ ದಿನಕರ ಶತತೇಜ। ಗಾನಲೋಲ ಪ್ರಿಯ ಗಾಯಿತ್ರಿ ಪ್ರತಿಪಾದ್ಯ। ಜಾನಕಿ ರಮಣನೆ ಜಗ ಸೃಷ್ಟ್ಯಾದಷ್ಟ ಕರ್ತ। ದಾನವಾರಿಯೆ ರಂಗ ದಾಸರ ಮನದೊಡಿಯ। ಮಾನಾಭಿಮಾನ ಕರ್ತಾ ಮನ್ಮಥನ ಜನಕ। ಶ್ರೀನಾಥ ಸರ್ವೋತ್ತಮ ಶೃಂಗಾರ ಮೂರುತಿಯೆ। ಧ್ಯಾನದಿ ಭಕ್ತರಿಗೆ ದೀಪ್ತಿಸುತ ಪೊಳೆವನೆ। ನಾನಾ ಪದಾರ್ಥದಲ್ಲಿ ನಾನಾದೇಶಗಳಲ್ಲಿ। ನಾನಾ ಕಾಲಗಳಲ್ಲಿ ನೀ ನಿತ್ಯ ನಿತ್ಯ ತೃಪ್ತ ಅನಾದಿ ಕಾಲ ದೈವ ಅಪ್ರಮೇಯಾ। ವಾಣಿ ಭಾರತಿ ಅಜಸುರರಿಂದ ವಂದಿತನೆ। ಕ್ಷೋಣಿಯೊಳಗೆ ಸಮವಿಲ್ಲದ ದೈವವೆ। ಧೇನಿಸಿ ನೋಡಲು ದಿನದಿನಕೆ ವಿಚಿತ್ರ। ಜ್ಞಾನಿಗಳರಸನೆ ಗರುಡವಾಹನ ರಂಗ। ಕಾಣರು ನಿನ್ನ ಗುಣಹೀನ ಮನುಜರಿನ್ನು। ತಾನೆ ನೀನೆಂಬವಗೆ ಏನೆಂಬೆ ಹರಿಯೆ। ನೀನೆ

ಗತಿ ಅಂತ ನಂಬಿದ ಭಕ್ತರಿಗೆ। ಊನವಾಗೊವು ದೋಷ ಅನಂತವಿದ್ದರನ್ನ। ನಾನು ನಿನ್ನ ಬಣ್ಣಿಸಿ ಏನು ಬೇಡುವದಿಲ್ಲ। ರೇಣು ಎನಿಸು ಎನಿಸು ಎನ್ನ ಜ್ಞಾನಿಗಳ ಪಾದದ। ನಾನು ನನ್ನದು ಎಂಬೊ ಹೀನ ಮತಿಯಲಿಂದ। ಗಾಣದ ಎತ್ತಿನಂತೆ ತಿರುಗುವೆ ಧರಿಮೇಲೆ। ಭಾನು ಶತ ತೇಜ ಗೋಪಾಲ ವಿಠ್ಠಲ ದೀನರಿಗೆಲ್ಲ ದತ್ತ ಪ್ರಾಣ ದೇವ ॥೧॥

## ಮಟ್ಟತಾಳ

ಎಲ್ಲಿ ನೋಡಲು ನೀನು ಅಲ್ಲಲ್ಲಿ ವ್ಯಾಪ್ತನು। ಎಲ್ಲಿ ನೋಡಲು ನೀನು ಅಲ್ಲಲ್ಲಿ ಪೂರ್ಣನು। ಬಲ್ಲಿದವರಿಗೆ ಬಲ್ಲ್ಯಾ ಬಲ್ಲವಗತಿಸುಲಭ। ಸಲ್ಲುವದೊ ಬಿರಿದು ಎಲ್ಲಿ ನಿನಗೆ ಸಮ। ವಿಲ್ಲವು ನಾಗಾಣೆ ಮಲ್ಲರ ಮರ್ದನ। ಹುಲ್ಲು ಕಲ್ಲಿನಲ್ಲಿ ಎಲ್ಲದಿ ಭರಿತನೆ। ಎಲ್ಲ ಕಾಲವು ನಮ್ಮನೆಲ್ಲರ ಸಲುಹುವಿ। ಜಲ್ಲಧಿ ಒಳಗೆ ಇನ್ನು ಕಮಲವು ಇದ್ದಂತೆ। ಎಲ್ಲವನು ತೊರೆದು ನಿಲ್ಲಿಸಿ ಮನವನ್ನು। ಸೊಲ್ಲು ಎತ್ತಿ ಪಾಡಿ ಇಲ್ಲೆ ಆರಾಧಿಸಲು। ಚೆಲ್ಲಿ ಪೋಗದವರ ಮೆಲ್ಲನೆ ನೀ ಹೃದಯದಲ್ಲಿ ನಿಂತು ತೋರಿ। ಘಿಲ್ಲುಕೆಂದು ಕುಣಿದು ಉಳ್ಳಷ್ಟು ದೋಷ। ವೆಲ್ಲ ಪೋಗಲಾಡಿ ಸಲ್ಲುವಂಥ ಪದವಿ। ಭಳಿರೆ ಇತ್ತು ಪೊರವಿ ಫುಲ್ಲನಾಭನೆ ಚಲ್ವ ಗೋ। ಪಾಲ ವಿಠ್ಠಲ ಒಲ್ಲೆನೆಂದರೆ ಬಿಡ ಯಳ್ಳಷ್ಟು ಕ್ಲಿಪ್ತಕೆ ॥೨॥

## ತ್ರಿವಿಡಿತಾಳ

ನಿನ್ನ ಜ್ಞಾನವಂತನೆಂದು ಇನ್ನು ಜ್ಞಾನ ಸಂಪಾದಿಸುವೆ। ನಿನ್ನ ದೋಷ ದೂರನೆಂನು ಎನ್ನ ದೋಷಂಗಳಟ್ಟುವೆ। ನಿನ್ನ ಗುಣ ಪೂರ್ಣನೆಂದು ಗುಣವಂತನಾಗುವೆ। ನಿನ್ನ ಸುಖಪೂರ್ಣನೆಂದು ಸಂತೋಷದಿಂದಲಿರುವೆ। ನಿನ್ನ ಬಲ ಪೂರ್ಣನೆಂದು ಬಲವಂತನಾಗುವೆ। ನಿನ್ನ ಜನನ ಮರಣರಹಿತನೆಂತೆಂದು ಕೊಂಡಾಡಿ। ಮುನ್ನೆ ಧರಿಯ ಮೇಲೆ ಎನ್ನ ಜನನ ಕಳೆವೆ। ನಿನ್ನ ಜಾರವಂತನೆಂದು ಎನ್ನಜಾರತ್ವಕಳೆವೆ। ನಿನ್ನ

ಕಂಸಾರಿ ಎಂತೆಂದು ಎನ್ನ ಸಂಸಾರ ನೀಗುವೆ। ನಿನ್ನ ದನುಜ ಮರ್ದನನೆಂದು ಎನ್ನ ಅರಿಗಳಗೆಲ್ಲುವೆ। ನಿನ್ನ ಭಕ್ತವತ್ಸಲನೆಂದು ಇನ್ನು ಭಕ್ತಿ ಸಂಪಾದಿಸುವೆ। ನಿನ್ನ ಕರುಣಾಳೆಂತೆಂದು ಎನ್ನ ಕರಣ ಶುದ್ಧನಾಗುವೆ। ನಿನ್ನ ತೊತ್ತಿಗೆ ತೋಂಡನಾಗಿ ನಿನ್ನ ಭೃತ್ಯನಾಗುವೆ। ನಿನ್ನವರ ಮನೆ ಮುಂದೆ ಕುನ್ನಿ ಆಗಿ ಆನಿರುವೆ। ನಿನ್ನ ತೀರಥ ಪ್ರಸಾದ ನಿನ್ನ ಯಂಜಲಗಳುಂಡು। ನಿನ್ನ ಬೇಡಿ ನಿನ್ನ ಕಾಡಿ ನಿನ್ನ ಹಾಡಿ ಹಾರೈಸಿ। ಎನ್ನ ದಿನಗಳ ಕಳೆವೆ ಮುನ್ನೆ ಕ್ಲಿಪ್ತಪರಿಯಂತರ। ಪುಣ್ಯವೊ ಪಾಪಗಳೊ ಎನ್ನಿಂದ ಮಾಡಿಸೊ ಕಾರ್ಯ। ಮುನ್ನೆ ಏನಿದಕೆ ಫಲವೊ ನಿನ್ನಗೆ ನೀನೆ ಬಲ್ಲೆಯ್ಯಾ। ಇನ್ನು ನಾ ಒಂದು ಬಲ್ಲೆನು ನಿನ್ನನೆ ಗತಿ ಎಂಬೋದು। ಚಿನ್ನುಮಯ ಮೂರುತಿ ಗೋಪಾಲ ವಿಠ್ಠಲರೇಯ। ಧನ್ಯನಾಗುವೆ ಕೇಳು ನಿನ್ನವರ ಬಳಿವಿಡಿದು॥೩॥

### ಅಟ್ಟತಾಳ

ಹೀನರ ಒಳಗೆಲ್ಲ ಹೀನನು ನಾಬಲು। ಮಾನವರೊಳಗೆಲ್ಲ ಮಾನಗೇಡಿ ಬಲು। ದೀನರ ಒಳಗೆಲ್ಲ ದೀನನು ನಾ ಬಲು। ಹೀನ ದೀನ ಅಜ್ಞಾನಕೆಲ್ಲ ನಿನ್ನ। ಧ್ಯಾನ ನಾಮ ಬಲ ನಾನೊಂದು ಮಾಡಲು। ತಾನು ಇದರ ಮುಂದೆ ಏನೇನು ಮಾಳ್ಪವು। ಜಾಣ ಸುಂಕರಿ ಗಂಡವ (ವಾ)ನು ಬಂದರೆ ಇನ್ನು। ಗೋಣಿಯನೊಪ್ಪಿಸಿ ತಾನು ಸುಮ್ಮನಾಗೆ। ಏನು ಮಾಡುವನವ ಕ್ಷೋಣಿಯವೊಳಗಿನ್ನು। ಶ್ರೀನಾಥ ನಿನ್ನ ದಾಸನಾದವನ ಇನ್ನು। ನಾನು ಕರಣ ಎಲ್ಲ (ವಲ್ಲ) ಏನೇನು ಮಾಡೋವು। ದಾನವಾಂತಕ ರಂಗ ಗೋಪಾಲ ವಿಠ್ಠಲ। ಮಾನಾಭಿ ಮಾನಕೆ ನೀನೆ ಗತಿಯೊ ದೇವಾ॥೪॥

### ಆದಿತಾಳ

ಜನರಲ್ಲಿ ಮನಹೋಗೆ ನಿನಗೆ ಹೋಯಿತು ಇನ್ನು। ಧನದಲ್ಲಿ ಮನಹೋಗೆ ನಿನಗೆ ಹೋಯಿತು ಇನ್ನು। ದಿನದಲ್ಲಿ ಮನಹೋಗೆ ನಿನಗೆ ಹೋಯಿತು ಇನ್ನು। ಗುಣದಲ್ಲಿ ಮನಹೋಗೆ ನಿನಗೆ ಹೋಯಿತು ಇನ್ನು।

ಊಣಿಸಲ್ಲಿ ಮನ ಹೋಗೆ ನಿನಗೆ ಹೋಯಿತು ಇನ್ನು ಕುಣಿದಾಡ ಮನಹೋಗೆ ನಿನಗೆ ಹೋಯಿತು ಇನ್ನು। ಎಣಿಸಲು ಮನ ಹೋಗೆ ನಿನಗೆ ಹೋಯಿತು ಇನ್ನು। ಅಣಿಕಿಸ ಮನಹೋಗೆ ನಿನಗೆ ಹೋಯಿತು ಇನ್ನು। ಅನುವುದಪ್ಪಿದವೆಲ್ಲ ಅನುವು ಮಾಡಿ ನೋಡೆ। ನಿನಗೆ ಕಾರಣವಯ್ಯಾ ನೀನಿಲ್ಲದಾರಿಲ್ಲ। ನೀನು ಮಾಡಿಸಿದದು ನಿನಗೆ ಸಮರ್ಪಿತ। ನಿನಗೆ ನೀನೆ ಗತಿ ಎನಗೆ ನೀನೆ ಗತಿ। ಘನಮಹಿಮ ನಮ್ಮ ಗೋಪಾಲ ವಿಠ್ಠಲರೇಯ। ಅನುವುತಪ್ಪಿದವೆಲ್ಲ ಅನುವುಮಾಡಿ ಪರಿಯೊ ॥೫॥

**ಜತೆ**

ನೀನು ಅನಾದಿ ಸ್ವಾಮಿ ನಾನು ಅನಾದಿ ಭೃತ್ಯ ।
ನೀನೆ ನೀನೆ ಗತಿಯೊ ಗೋಪಾಲ ವಿಠ್ಠಲ ॥೬॥

❖ ❖ ❖

## ಸುಳಾದಿ-೩೮

ಜೀವನಿಗೆ ನಾ ಕರ್ತೃನೆಂದರೆ ನರಕಾದಿಗಳು. ದೇವರೆ ನೀನೆ ಕರ್ತೃನೆಂದರೆ ನರಕಾದಿಗಳು ಆಗಲರಿಯವು. ಹೀಗೆ ನಂಬಲು ಜೀವನು ಎಷ್ಟರ ಮನುಜ? ದೇವರು ಇಂಥ ನಂಬಿಕೆ ಇತ್ತರೆ ನಂಬುವನು.

**ರಾಗ- ಪಂಥರಾವಳಿ ಧ್ರುವ ತಾಳ**

ನಿನ್ನ ಸ್ಮರಣೆ ಎನಗೆ ತೀರ್ಥ ಯಾತ್ರೆಗಳಯ್ಯಾ। ನಿನ್ನ ಸ್ಮರಣೆ ಎನಗೆ ಯಜ್ಞ ದಾನಂಗಳಯ್ಯಾ। ನಿನ್ನ ಸ್ಮರಣೆ ಎನಗೆ ವ್ರತ ಚಾಂದ್ರಾಯಣಗಳಯ್ಯಾ। ನಿನ್ನ ಸ್ಮರಣೆ ಎನಗೆ ತಪಸ್ಸು ಸಿದ್ಧಿಗಳಯ್ಯಾ। ನಿನ್ನ ಸ್ಮರಣೆ ಎನಗೆ ಸಾಧನ ಸಂಪತ್ತುಗಳು। ನಿನ್ನ ಸ್ಮರಣೆ ಎನಗೆ ಬಲ ಧೈರ್ಯವೊ ಎನ್ನಯ್ಯಾ। ನಿನ್ನ ಸ್ಮರಣೆ ಎನಗೆ ಇಹಪರದಲ್ಲಿ ಲಾಭ। ನಿನ್ನ ಸ್ಮರಣೆ ಎನಗೆ ಸಿದ್ಧವಾದ ಮುಕುತೆಯ್ಯಾ। ನಿನ್ನ ಸ್ಮರಣೆಯಿಂದ ಆವ ಕರ್ಮ

ಮಾಡಲು। ಪುಣ್ಯದ ಫಲವನು ದೊರಿಯದು ಜೀವರಿಗೆ। ಕಣ್ಣು ಬಿಗಿದು ಕಟ್ಟಿ ಚಿತ್ರವ ಬರೆದಂತೆ। ನಿನ್ನರಿಯದ ಕರ್ಮ ಅನಂತ ಮಾಡಲ್ಯಾಕೆ। ಕನ್ನಿಕೆಗೆ ಬಾಲ್ಯದಿ ಕಂಡವರು ಪತಿ ಆದಂತೆ। ನಿನ್ನ ಸ್ಮರಿಣೆಲ್ಲದ ಕರ್ಮ ಈ ಪರಿಯೊ ದೇವ। ನಿನ್ನ ವಿಸ್ಮರಣೆಯ ಗೋಹತ್ಯ ಬ್ರಹ್ಮಹತ್ಯ। ನಿನ್ನ ವಿಸ್ಮರಣೆಯೆ ಪಂಚಮಹಪಾತಕ। ನಿನ್ನ ವಿಸ್ಮರಣೆಯೆ ಸರ್ವ ಅಪರಾಧವಯ್ಯಾ। ನಿನ್ನ ವಿಸ್ಮರಣೆವೇ ಸಕಲ ನಿಷೇಧಗಳು। ನಿನ್ನ ಸ್ಮರಣವೇ ಇಷ್ಟಗಳಯ್ಯಾ। ನಿನ್ನ ಸ್ಮರಣೆ ಇರಲು ಅಧಮ ಕರ್ಮ ಮಾಡಲು। ಅನ್ಯಾಯವೆನಿಸದು ಅಗಮ ಸಮ್ಮತವು। ಘನ್ನ ದಯಾನಿಧೆ ಗೋಪಾಲ ವಿಠ್ಠಲ। ನಿನ್ನ ಸ್ಮರಣೆ ಪುಣ್ಯ ನಿನ್ನ ವಿಸ್ಮರಣೆ ದೋಷಾ ॥೧॥

### ಮಟ್ಟತಾಳ

ಜಡಚೇತನ ಜ್ಞಾನ ಅಡಿಗಡಿಗೆ ತಿಳಿದು। ಜಡಕೆ ಲಯವೆ ಬಗೆದು ಚೇತನಗಳೆರಡು। ದೃಢವಾಗಿ ತಾತನ್ನ ಒಡಲೊಳಗಿಪ್ಪನ್ನ। ಒಡಿಯನೆಂದು। ತಿಳಿದು ಅಡಿಗಳಿಗೆ ಎರಗಿ। ಕೊಡುವವ ಕೊಳುವನು ಬಿಡದಲೆ ನೀನೆಂದು। ನಡಿಸುವ ನುಡಿಸುವ ಹರಿ ನೀನೆಂದರಿದು। ಎಡಬಲದಲಿ ಇನ್ನು ಪರಿವಾರ ಸಹವಾಗಿ। ಕಡಕವಿಲ್ಲದೆ ನೋಡಿ ಜಡಮತಿಯನೆ ಬಿಟ್ಟು। ನುಡಿವದೆ ಸ್ಮರಣೆಯು ಕೊಡುವದು ಮಹಾಫಲವು। ಕಡು ಮೂರ್ಖತನದಿ ಬಿಡದಲೆ ಹಗಲಿರುಳು। ನುಡಿನುಡಿಗೆ ಘರ್ಜಿಸಿಡಲ್ಯಾತಕೆ ಮೊರಿಯಾ। ಮಿಡುಕುವದಲ್ಲದೆ ಮೃಡಸಖನು ಮೆಚ್ಚಾ। ಕಡಲ ಶಯನ ರಂಗ ಗೋಪಾಲ ವಿಠ್ಠಲ। ಕೊಡು ನಿನ್ನ ಸ್ಮರಣಿ ಬಿಡದಲೆ ಕ್ಷಣಕ್ಷಣಕೆ ॥೨॥

### ರೂಪಕ ತಾಳ

ನಾಕರ್ತನೆಂದದರಿಂದಲೆವೇ ಸಕಲ। ಶೋಕಾನರ್ಥಗಳು ಜೀವರಿಗೊದಗೋದು। ನೀಕರ್ತನೆಂದದರಿಂದ ಜೀವರಿಗೆ। ನರ್ಕಾದ್ಯನರ್ಥಗಳು ಆಗಲರಿಯವಯ್ಯಾ। ಈ ಕುರುಹಕೆ ತಂದು (ಒಂದು)

ದೃಷ್ಟಾಂತರವು ಇನ್ನು। ಆಕಳನ ಕೊಂದಂತೆ ಆವಿಪ್ರನೆ ಸಾಕ್ಷಿ। ಶೋಕ ಸುಖವೆರಡು ನೀನು ಮಾಡಿಸಿ ಇನ್ನು। ಹಾಕು ದ್ವಿಫಲವನು ಜೀವರ್ಯೋಗ್ಯತ ಅರಿದು। ನೀ ಕಾಣಿಸಿಕೊಂಬುವನೆ ನಿನ್ನ ಕರ್ತತ್ವಕ್ಕೆ। ಸಾಕಲ್ಯವಗರಿದು ಏಕ ಚಿತ್ತದಲಿಪ್ಪ। ನೀ ಕರ್ತುಮಾಸ್ವಾಮಿ ನಾಕುಶ್ಚಿತ ಭೃತ್ಯಾ। ನೀ ಕಾಯೊ ಎನ್ನಯ್ಯಾ ಸಾಕುವ ಬಿರಿದುಂಟು। ನಾ ಕೃತಘ್ನ ಬಲು ನೀ ಕರುಣಾಳಯ್ಯಾ। ನಾ ಕಪಟಿಯೊ ದೇವ ನೀ ದಯಾವಾರಿಧಿ। ಸಾಕಲ್ಯ ಗುಣಪೂರ್ಣ ಗೋಪಾಲ ವಿಠ್ಠಲ। ಹಾಕದಿರೆನ್ನ ನಾನಾ ಕುಯೋನಿಗಳಲ್ಲಿ ॥೩॥

### ಝುಂಪೆತಾಳ

ಆವ ಲೀಲೆಯೊ ನಿನ್ನದಾವ ಸ್ವಭಾವವೊ। ಜೀವರೊಡನೆ ಆಟ ಆವ ಸುಖವೊ ನಿನಗೆ। ನಾವಸ್ವತಂತ್ರರು ನೀ ಸರ್ವ ಸ್ವಾತಂತ್ರ। ಬಾವುವದೆಮ್ಮಿಂದ ಏನು ನಿನಗೆ ದೇವ। ನಾವು ಊಳಿಗರು ನಿನಗೆ ಬೇಕಿವೆಂಬೀವೇನೊ। ನೀ ಊಳಿಗನಾಗಿ ಮಾಡಿಸಿ ನಮ್ಮಿಂದ। ಜೀವರಿಗೆ ಫಲವನು ತಂದು ತಂದು ನೀವೆ। ದೇವ। ನಿನಗೆ ನೋಡ ಒಂದು ಕಾರಣವಿಲ್ಲ। ದೇವ ನಿನಗೆ ನೋಡ ಒಂದು ಕರ್ಮಗಳಿಲ್ಲ। ಆವಾವ ಪರಿ ನಿನ್ನ ಲೀಲೆಗಳ ತೋರಿದಿ। ದೇವ ನೀ ಬಂಡಿಯ ಬೋವಾದೆ ಅರ್ಜುನಗೆ। ಆವುಗಳ ಕಾದೆ ಸನಕಾದಿಗಳ ಪಾಲಿಸಲಿ। ಆ ಉಗ್ರಸೇನನ ಸೇವೆಯನು ಮಾಡಿದೆ। ದೇವ ಗೋಪಿಯ ಕೈಯ್ಯ ಕಟ್ಟಿ ಹಾಕಿಸಿಕೊಂಡೆ। ನೀ ವಟು ವಿಪ್ರನಾಗಿ ಯಜ್ಞದಲಿ ಪೋಗಿ। ದೇವ ಭಿಕ್ಷವ ಬೇಡಿ ಭಕ್ತನ್ನ ಪಾಲಿಸಿದೆ। ಕಾವಲಿ ಕಾದೆ ಆತನ್ನ ಮನೆದ್ವಾರದಲಿ। ಆವ ಅಪೇಕ್ಷಿಯು ನಿನಗೆ ಒಂದೂ ಇಲ್ಲ। ಧಾವತಿ ಬಡುವೆ ನಿನ್ನ ಭಕುತರಿಗಾಗಿ। ನೋವಾಗುವೆ ನಿನ್ನ ಭಕ್ತರು ದಣಿದರೆ। ಆವ ನಿನ್ನ ಕಾರ್ಯ ಭಕ್ತರ ಪಾಲಣೆ। ಆವ ನಿನ್ನ ಕ್ರೀಯಾ ದನುಜರ ಮರ್ದನೆ। ಆವ ವ್ಯಾಪಾರವು ನಿನಗೆ ಮಾಡೆಂಬರು ಪೇಳುವರಿನ್ನುಂಟೆ ದೇವ ಕಾವ ಕರುಣಿ ನಮ್ಮ ಗೋಪಾಲ ವಿಠ್ಠಲ। ಸೇವಕರ ಪಾಲಿಸುವ ಬಗೆ ಎಂತೆಂತೊ ದೇವ॥೪॥

### ತ್ರಿವಿಡಿ ತಾಳ

ಎನ್ನ ಅಜ್ಞಾನವೆಲ್ಲ ನಿನ್ನಾಧೀನವಯ್ಯಾ। ಎನ್ನ ಕರಣ ಚೇಷ್ಟೆ ವ್ಯಾಪಾರ ನಿನ್ನಾಧೀನ। ಎನ್ನ ಪ್ರೇರಣೆ ಪ್ರತಿಕ್ಷಣಕೆ ನಿನ್ನಾಧೀನ ಎನ್ನ ಸ್ಮರಣೆ ಸ್ಫರಣೆ (ಸ್ಫುರಣೆ) ನಿನ್ನಾಧೀನ ದಮ್ಮಯ್ಯಾ। ಎನ್ನ ಸ್ವಾಮಿಯೆ ನೀನು ನಿನ್ನ ಭೃತ್ಯನು ನಾನು। ಇನ್ನೊಂದು ನಾನರಿಯೆ ಎನ್ನೊಡಿಯನೆ ಕೇಳು। ಎನ್ನ ಐಶ್ವರ್ಯವು ನಿನ್ನ ಪರವಾಗಲಿ। ಎನ್ನ ಆರೋಗ್ಯವು ನಿನ್ನ ಪರವಾಗಲಿ। ಎನ್ನ ಆಯುಷ್ಯವು ನಿನ್ನ ಪರವಾಗಲಿ। ಎನ್ನ ಸಕಲ ವ್ಯಾಪಾರ ನಿನ್ನಪರ ಆಗಲಿ। ಎನ್ನ ಚರಣಗಳು ನಿನ್ನ ಯಾತ್ರಿಯ ಮೆಟ್ಟಲಿ। ಎನ್ನ ಕರಗಳಿನ್ನು ನಿನ್ನ ಪೂಜೆ ಮಾಡಲಿ। ಎನ್ನ ಕರ್ನಗಳಿನ್ನು ನಿನ್ನ ಕಥೆ ಕೇಳಲಿ। ಎನ್ನ ಚಕ್ಷುಸುಗಳು ನಿನ್ನ ಮೂರ್ತಿ ನೋಡಲಿ। ಎನ್ನ ಜಿಹ್ವೆಯು ಸತತ ನಿನ್ನ ಕೊಂಡಾಡಲಿ। ಎನ್ನ ಶಿರಸ್ಸು ನಿನ್ನ ಚರಣಕ್ಕೆರಗುತಿರಲಿ। ಎನ್ನ ಸರ್ವಾಂಗವು ಸಾಷ್ಟಾಂಗ ಹಾಕುತ ಇನ್ನು ಹಗಲಿರುಳು ನಿನ್ನವಾಲ್ಗೈಸಲಿ। ಎನ್ನ ಮನೋವಾಕ್ಕಾಯದಿಂದಿನ್ನು। ಇನ್ನು ಮಾಡಿದ ಕರ್ಮ ನಿನ್ನ ಪರವುಮಾಡಿ। ನಿನ್ನವನೆನಿಸಯ್ಯಾ ಘನ್ನದಯಾನಿಧೆ ಗೋಪಾಲ ವಿಠ್ಠಲ। ಇನ್ನಿದೆ ಮಾಡಿಸೊ ಅನಂತ ಜನ್ಮಕ್ಕು ॥೫॥

### ಅಟ್ಟತಾಳ

ಕೆಡಿಸುವನು ನೀನೆ ಇಡಿಸುವನು ನೀನೆ। ಕೊಡಿಸುವನು ನೀನೆ ಹಿಡಿಸುವವನು ನೀನೆ। ಮಡದಿ ಇದ್ದರೆ ಮನೆ ಕಡು ಶುಭ ಎಂಬೋರು। ಹುಡುಗರಿದ್ದರೆ ಮನೆ ಕಡು ಶುಭ ಎಂಬೋರು। ಒಡಿವೆ ಇದ್ದರೆ ಮನೆ ಕಡುಶೋಭವೆಂಬೋರು। ಪಡೆದರಿದ್ದರೆ ಮನೆ ಕಡುಶೋಭವೆಂಬೋರು। ಜಡಗಳ ಹಿಡಕೊಂಡು ಮಿಡಕೊ ಜೀವರ ನೋಡಿ। ಎಡಬಿದ್ದಂತ್ಯೆದಿ ಎನಗಾಗುತಿದೆ ದೇವಾ। ಜಡಮತಿ ಜಡಸ್ನಾನ ಜಡಕರ್ಮ ಜಡಪೂಜೆ। ಜಡದಿ ಭಿನ್ನ ನಿನ್ನ ಅಡಿಗಳವಿಡಿಯದೆ। ಕಡೆಯಿಲ್ಲದ ಕರ್ಮ ಬಿಡದೆ ಮಾಡಲಿಯಾಕೆ। ಒಡಿಯಾ ನಿನ್ನ ಪ್ರೀತಿ ಪಡಿಯದರಿಯರಯ್ಯಾ।

ಕಡುಸಂಪತ್ತುಗಳು ನಿನ್ನ ನಡಿಗಳು ಎನಗಿನ್ನು। ಬಿಡೆನೊ ಎಂದೆಂದಿಗೂ ದ್ರಢವಾಗಿ ಮನದೊಳು। ಕೊಡು ಇನ್ನು ಈ ಭಾಗ್ಯ ಒಡೆಯ ದೇವರ ದೇವ ಗೋಪಾಲ ವಿಠ್ಠಲ। ಕೊಡು ಒಂದು ಕೊಡದಿರು ಬಿಡೆ ನಿನ್ನ ಚರಣವ ॥೬॥

**ಆದಿತಾಳ**

ದಣವು ಬಂದರೆನಗೆ ಏನು ಆವ। ಗುಣವು ಬಂದರೆ ಎನಗೆ ಏನು। ಜನುಮ ಬಂದರೆನಗೆ ಏನು ಸು। ಗುಣವಾಗಿ ಬಂದರೆನಗೆ ಏನು। ನಿನಗೆ ನನಗೆ ಭೇದ ತಿಳಿದು। ನನಗೆ ದೇಹಕೆ ಭೇದ ತಿಳಿದು। ಕ್ಷಣ ಕ್ಷಣಕೆ ನೀ ಸ್ವಾಮಿ ಎಂದು। ಕ್ಷಣಕ್ಷಣಕೆ ನಿನ್ನ ಭೃತ್ಯನೆಂದು। ಎಣಿಸುತ್ತ ಎನಗಿಂದ ಗುಣಾಧಿಕರ ಹಿಡಿದು। ಫಣಿರುದ್ರ ಅಜಸಿರಿ ಪರಿಯಂತ ದಿನದಿನದಿ। ಅನುವರಿತು ಕೊಂಡಾಡಿ ಗುಣವುಪಾಸನಿಯನ್ನು। ಎನಗೊಂದು ಇರಲಯ್ಯಾ। ಮುನಿಗಳ ಮನಪ್ರಿಯ್ಯಾ। ಇನಿತು ಸುಖವೆ ಸಾಕು ಇನ್ನೊಬ್ಬರಿಗೆ ಅಂಜೆ। ಎನಗೊಂದು ಸುಖವಿಲ್ಲ ನಿನ್ನ ನೋಡೊದಕ್ಕಿಂತ। ಗುಣಪೂರ್ಣ ಚಲುವ ಗೋಪಾಲ ವಿಠ್ಠಲರೇಯ। ನಿನಗೆ ಎನಗೆ ಲೆಂಕೆ ಎನಗೊಬ್ಬರಿನ್ನಿಲ್ಲ ॥೭॥

**ಜತೆ**

ನಂಬಲಿ ನಾನಿನ್ನು ಎಷ್ಟರ ಮನುಜ ।
ನೀ ನಂಬಿಸಲು ನಂಬಿದೆ ಗೋಪಾಲ ವಿಠ್ಠಲ ॥೮॥



## ಸುಳಾದಿ-೩೯

ಸರ್ವ ಸ್ವಾಮಿ ಚಿತ್ತವೇ ಜೀವರಿಗೆ ಭಾಗ್ಯ ಇಂಥ ಜ್ಞಾನವೇ ಸುಜ್ಞಾನ.
ಸಕಲ ಕಾಲ ಕ್ರೀಯೆ ಧರ್ಮಗಳಿಗೆ ಪ್ರೇರಕನೆ ಶ್ರೀ ಹರಿಯು

## ರಾಗ ಸಾವೇರಿ ಧ್ರುವ ತಾಳ

ನಿನ್ನ ಚಿತ್ತ ಎನ್ನ ಭಾಗ್ಯ ಇನ್ನೊಬ್ಬರೆನಗೆಯಿಲ್ಲ। ಮನ್ನಣೆ ಅಮನ್ನಣೆ ನಿನ್ನದೊ ಸರ್ವೇಶನೆ। ಬೆನ್ನು ಕೊಟ್ಟೆನೊ ನಿನಗೆ ಎನ್ನ ಏನನ್ನ ಮಾಡು ಕಣ್ಣೆಲಿ ಕಂಡ್ಯಾ ಅಷ್ಟು ಎನ್ನ ಕೇಳೋಣ ನಿನ್ನ। ಬಣ್ಣಿಸಿ ನಿನ್ನ ನಾನು ಘನ್ನ ಬೇಡುವದಿಲ್ಲ ನನ್ನದೆಂಬೊ ಅಹಂಕಾರವನ್ನು ಬಿಡಿಸೊ ದೇವ। ಎನ್ನ ಸಂಕಲ್ಪವೆಲ್ಲ ನಿನ್ನ ಆಧೀನವಯ್ಯಾ। ನಿನ್ನ ಸಂಕಲ್ಪಕ್ಕಿನ್ನು ಭಿನ್ನಭಿನ್ನಗಳಿಲ್ಲ। ನಿನ್ನಿಚ್ಛೆ ನೀ ಪ್ರೇರಕ ನಿನ್ನದೊ ಎನ್ನ ಭಾರಾ। ಇನ್ನು ಮುನ್ನೆ ಎಂದೆಂದು ಇನ್ನಿದೆ ಸಿದ್ಧವಯ್ಯಾ। ಇನ್ನೊಂದು ನಾನರಿಯೆ ಎನ್ನೊಡಿಯನೆ ಕೇಳು। ಮನ್ನ ವಾಚಾಕಾಯದಿ ಇನ್ನು ಹೀಗೆ ಹಾರೈಸಿ। ಬಿನ್ನಹ ಮಾಡಿದೆ ನಿನ್ನ ನಿಲಿಸಿಕೊಂಡು। ಚಿನ್ನುಮಯ ಮೂರುತಿ ಗೋಪಾಲ ವಿಠ್ಠಲ। ನಿನ್ನ ಬೇಡುವೆನಲ್ಲದನ್ಯರಿಗಾಲ್ಪರಿಯೆ ॥೧॥

## ಮಟ್ಟತಾಳ

ನಿನ್ನಿಂದಲಿ ದತ್ತವಿನ್ನು ಆಗದ ವಸ್ತು। ಅನಂತವಿದ್ದರು ಇನ್ನೊಲ್ಲೆ ಇನ್ನೊಲ್ಲೆ। ಅನ್ಯ ಕರ್ಮವ ಮಾಡಿ ಅನ್ಯ ದೈವವನೋಡಿ। ಎನ್ನುದರ ಪೂರ್ತಿಯನ್ನು ಮಾಡೊದಕ್ಕಿಂತ ಬಣ್ಣಗೆಟ್ಟವನಾಗಿ ಅನ್ಯ ವಿಷಯವ ಬಿಟ್ಟು। ನಿನ್ನವನಾಗಿನ್ನು ಅನ್ನವಿಲ್ಲದಲೆ ಅ। ರಣ್ಯವಾಸರಿನ್ನು ಹಣ್ಣು ಹಂಪಲ ಮೆದ್ದು। ನಿನ್ನ ವಿಷಯಕ್ಕೆ ಕರ್ಮ ನಿನ್ನ ವಿಷಯಕ್ಕೆ ಧರ್ಮ। ಇನ್ನೇನಾದದ್ದು ನಿನ್ನ ಪರವು ಮಾಡಿ। ಎನ್ನ ಇಡಿಸಿದರೆ ಘನ್ನುಪಕಾರವು ಇನ್ನೆಂದಿಗೆ ಮರಿಯೆ। ಚಿನುಮಯ ಮೂರುತಿ ಗೋಪಾಲ ವಿಠ್ಠಲ ನಿನ್ನ ಚಿತ್ತಕೆ ಬಾರದಿನ್ನೆಂದಿಗೆವಲ್ಲೆ ॥೨॥

## ರೂಪಕ ತಾಳ

ಹಾಗೆಯಿತ್ತೆ ಇನ್ನು ಹಾಗೆ ಆಗಲಿ ದೇವಾ। ಹೀಗೆಯಿತ್ತೆ ಇನ್ನು ಹೀಗೆ ಆಗಲಿ ದೇವಾ। ಹಾಗೆ ಹೀಗೆ ಇನ್ನು ಎರಡು ಆಗಲಿ ದೇವ ಆಗ ಅಂಜುವನಾರು ಈಗ ಅಳುಕುವನಾರು। ಆಗದಂಥ ಕಾರ್ಯ ಆಗಮಾಡುವನಾರು। ಆಗುವಂಥ ಕಾರ್ಯ ಆಗಲೀ (ಅಗಲಿಸುವ)

ಸುವನಾರು। ಬಾಗಿದೆ ನಿನ್ನ ಚರಣಗಳಿಗೆ ನಾನು। ಹ್ಯಾಗೆ ಆದರು ಲೇಸೆ ನೀಯಿತ್ತ ಭಾಗ್ಯಕ್ಕೆ। ಹೋಗು ಹೊರಡೆಂದರೆ ಆಗೊದೆ ನಿನ್ನಿಂದ। ಸಾಗು ಸಾಗಿ ಇನ್ನು ತೂಗಿದ ತೊಟ್ಟಿಲು। ಹೋಗಿ ಹೋಗಿ ತನ್ನ ಸ್ಥಳಕ್ಕೆ ನಿಲ್ಲುವದು। ಸಾಗರ ಶಯನ ಗೋಪಾಲ ವಿಠ್ಠಲ। ಭೋಗ ತೀರಿಸಿ ದೋಷನಿಯಾಗಮಾಡೊ ದೇವ ॥೩॥

**ಝುಂಪೆ ತಾಳ**

ನೀನಿತ್ಯ ನಾನಿತ್ಯ ಅನಾದಿ ಕಾಲದಿ। ಏನು ಆಗುವ ಪ್ರೀತಿ ನಿನ್ನಿಂದಲೆ ಎನಗೆ। ಕಾಣದೊಂದು ಉಂಟೆ ನಿನ್ನ ಕಂಡವರಿಗೆ। ಜಾಣ ತನವ್ಯಾಕೆ ಎನ್ನೊಡನೆ ಮಾಜಲಿಬೇಡ। ಪ್ರಾಣರಿಗೆ ಒಂದೊಂದು (ದ) ನಿತ್ಯ ವಸ್ತುಗಳಲ್ಲಿ। ಏನು ಭ್ರಮೆ ಪುಟ್ಟಿಸಿ ಮರುಳು ಮಾಡುವಿ ದೇವ। ಶ್ರೀನಾಥ ನಿನ್ನ ಸಾಯಸಕೆ ಆನೇನಂಬೆ। ಧೇನಿಸಿನೋಡ ಶತ ಆನಂದ ಗೊಶವಲ್ಲ। ಕಾಣಿವೆ? ನೆನ್ನಂಥ ನರಗೂರಿಯು ನಿನ್ನ ನಾ। ಶ್ರೀನಿವಾಸನೆ। ನಮೊನಮೊ ಎಂದೆನೋ। ದೀನರಕ್ಷಕ ದೇವ ಗೋಪಾಲ ವಿಠ್ಠಲ। ನೀನು ಕುಣಿಸಿದಂತೆ ನಾನು ಕುಣಿವೆನಯ್ಯಾ ॥೪॥

**ತ್ರಿವಿಡಿ ತಾಳ**

ವಾಸುದೇವನೆ ನಿನಗೆ ವಾಸೆ ಒಂದೇ ಕೇಳು। ಈಶನೆಂಬೊಪೆಸರು ನಿನ್ನಗಯ್ಯಾ। ದಾಸನೆಂಬೊ ಪೆಸರು ನಿನಗೆ ಎಂದಿಗೆಯಿಲ್ಲ। ದಾಸತ್ವತನವೆಲ್ಲ ನಮ್ಮದಯ್ಯಾ। ದಾಸರು ಇಲ್ಲದ ಈಶತ್ವ ಪ್ರಕಟಿಸದು। ಈಶನು ಇಲ್ಲದ ದಾಸತ್ವತನವ್ಯಾಕೆ। ದೇಶ ಕಾಲ ಪಾತ್ರ ಈಸು ಕೂಡಿದ ಅಲ್ಲಿ। ಕಾಸು ಕೊಡುವದಾತಾನಿಲ್ಲದಿರೆ। ಕಾಸು ಇದ್ದವನಲ್ಲಿ ದೇಶ ಪೋಗುವದೊ। ದೇಶ ಇದ್ದಲ್ಲಿಗೆ ಕಾಸು ಬಾಹುವದು (ವದೆ)। ದಾಸತ್ವ ಎನ್ನಲ್ಲಿ ಈಶ (ಲೇಶ) ಮಾತ್ರವನ್ನು। ಆಶ್ರೈಸಿ ಇತ್ತೆ ಈಶ ಎನಗುಂಟು। ದೇಶ ದೇಶದವರು ಕಾಲಕೆ ಕುರುಹ। ಮಾಸದೆ ಕಂಡರೆ ಪೋಷಿಸುವರು ಬಿಡದೆ। ಲೇಸಾಗಿ ಇಬ್ಬರು ಒಂದೆ ಸ್ಥಳದಲ್ಲಿ ವಾಸವಾಗಿಯಿದ್ದು। ನಾಶ ರಹಿತರಾಗಿ ಕ್ಲೇಶಕೊಬ್ಬನ ಮಾಡಿ। ಕ್ಲೇಶರಹಿತ ನೀನಾಗಿ ಘಾಸಿಯ ಬಡಿಸೆಮ್ಮ। ಮೀಸಲಾಗಿ

ನೀನಿಂದು। ದೋಷರಹಿತ ರಂಗ ಗೋಪಾಲ ವಿಠ್ಠಲ ದಾಸರ ಬಿಡದಿರು ಏಸೇಸುವಿಡಿದರು ॥೫॥

**ಅಟ್ಟತಾಳ**

ಧನದಿಂದ ನೆಂಟರು ಕೆಲವರು ಎನಗಿನ್ನು। ತನುವಿನ ನೆಂಟರು ಕೆಲವರು ಎನಗಿನ್ನು। ಮನದಿಂದ ನೆಂಟರು ಕೆಲವರು ಎನಗಿನ್ನು ದಿನದಿಂದ ನೆಂಟರು ಕೆಲವರು ಎನಗಿನ್ನು। ಗುಣದಿಂದ ನೆಂಟರು ಕೆಲವರು ಎನಗಿನ್ನು। ಇನಿತು ನೆಂಟರೊಳು ಎನಗೆ ಒಬ್ಬರ ಕಾಣೆ। ಅನುವಾಗಿ ಇದ್ದರೆ ಅಷ್ಟು ನಮ್ಮವರೆಲ್ಲ। ಅನುವು ತಪ್ಪಿದರಿನ್ನು ಆರು ನಮ್ಮವರಲ್ಲ ನನಗೆ ನಿನಗೆ ನೆಂಟತನವಿನ್ನು ಹೀಗಲ್ಲಾ। ಅನಿಮಿಷ ಅಗಲದೆ ಅನಿಮಿತ್ಯ ಬಂಧಾಗಿ (ಬಂಧುಆಗಿ)। ಕ್ಷಣ ಬಿಡದಲೆ ಕಾಯುವ ಗೋಪಾಲ ವಿಠ್ಠಲ ನಿನಗೆ ಮಾಡುವದೇನು ನಮೊನಮೊ ಎನ್ನಿಂದ ॥೬॥

**ಆದಿತಾಳ**

ನೀನೆವೆ ವೈಕುಂಠ ನೀನೆವೆ ಮುಕುತೆನಗೆ। ನೀನೆವೆ ಸಕಲಾದಿ ತೀರ್ಥಯಾತ್ರೆಗಳೆನಗೆ। ನೀನೆವೆ ಇಹಪರದಲ್ಲಿ ಕಾವುವ ನೀನೊ ಆ ನೆಲ್ಲಿ ನೋಡಲು ನೀನೆ ಕಾಣಿಸುವದು। ನೀನಿದ್ದ ಸ್ಥಳದಲ್ಲಿ ಸಕಲ ದೇವತೆಗಳು। ನೀನೆವೆ ಫಲಂಗಳು ಸಕಲರಲ್ಲಿ ನಿಂತು। ದೀನ ಜನರ ಪಾಲ ಗೋಪಾಲ ವಿಠ್ಠಲ। ಜ್ಞಾನಿಗಳಿಗೆ ಪ್ರೀಯ ನಿನಗೆ ಜ್ಞಾನ (ನಿ) ಪ್ರೀಯಾ ॥೭॥

**ಜತೆ**

ಕಾಣದವನೆ ನಿನ್ನ ಕಂಡದ್ದು ಹಾರೈಸುವ ।
ಕಾಣುವ ಬಿಡ ನಿನ್ನ ಗೋಪಾಲ ವಿಠ್ಠಲ ॥೮॥

ಸಂಪೂರ್ಣಂ

॥ಶ್ರೀಗುರುಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು॥

■



ಶ್ರೀ ಗುರುಮಧ್ವರಾವ್ ಉಪ್ಪಲಿ ಅವರು ರಚಿಸಿರುವ ನೂರಾರು ಚಿತ್ರಪಟಗಳನ್ನು ಮೆಚ್ಚುಗೆಯಿಂದ ಅವಲೋಕಿಸುತ್ತಿರುವ ಪೂಜ್ಯ ಶ್ರೀ ಸತ್ಯಾತ್ಮತೀರ್ಥ ಶ್ರೀಪದಂಗಳವರು



ಗುರುಮಧ್ವರಾವ್ ಉಪ್ಪಲಿ

"ಮೂಕ ಬದಿರರಂತಿಪ್ಪರೋ ನೋಳ್ಪ ಜನಕೆ" ಎಂಬ ಶ್ರೀ ಜಗನ್ನಾಥದಾಸರ ಉಕ್ತಿಯಂತೆ ಎಲೆಮರೆಕಾಯಿಯಂತೆ ಇದ್ದು ಪ್ರತಿಷ್ಠೆ, ಸನ್ಮಾನಾದಿಗಳಿಂದ ದೂರ ಇದ್ದು ದಾಸ ಸಾಹಿತ್ಯದ ವಿಶೇಷ ಸೇವೆ ಮಾಡುವುದಲ್ಲದೆ ಪಾಮರರನ್ನು ಸನ್ಮಾರ್ಗಕ್ಕೆ ತರುವಂತಹ ಅಂತಃಕರುಣಿಗಳಾದ ಪೂಜ್ಯ ಗುರುಮಧ್ವರಾವ್ ಉಪ್ಪಲಿ ಅವರ ಸೇವೆಯನ್ನು ಗುರುತಿಸಿರುವ ಪೂಜ್ಯ ಶ್ರೀ ವಿದ್ಯಾಮಾನ್ಯತೀರ್ಥರು, ಶ್ರೀಸುಶಮೀಂದ್ರತೀರ್ಥರು ಹಾಗೂ ಶ್ರೀಶ್ರೀಶ್ರೀ ಸತ್ಯಾತ್ಮತೀರ್ಥರ ಪ್ರಶಂಸೆಯೇ ಶ್ರೀಗುರುಮಧ್ವರಾಯರಿಗೆ ಸಂದ ಸನ್ಮಾನ ಪತ್ರ, ಅವರ ಅಂತಃಕರುಣಾಯುಕ್ತ ಆಶೀರ್ವಾದ ಸದಾ ಲಭಿಸಲಿ.

"ಇಮ್ಮಹಿಯೊಳಗೇಸು ಕಾಲವಾದರು ಪುಣ್ಯ ಸಂಬಂಧ ಕೆಡದಿರಲಿ".

ತಾತ ಅವರ ಚರಣಧೂಳಿ<br>
ಶ್ರೀನಿವಾಸ ಕಟ್ಟಿ